# ಮೀನಕಣ್



ಶ್ರೀ ಕುಮಾರಸ್ವಾಮಿಗಳು
ನವಕಲ್ಯಾಣಮಠ, ಧಾರವಾಡ



೧೯೫೧

ಬೆಲೆ ಎರಡು ರೂಪಾಯಿ

# ನಮ್ಮ ಮಾತು

ಈ ಗ್ರಂಥದಲ್ಲಿ ಇತ್ತೀಚೆಗಿನ ಲೇಖನ ಉಪನ್ಯಾಸಗಳ ಸಂಗ್ರಹವನ್ನು ಮಾಡಲಾಗಿದೆ. ಇದು ಈ ಮಾದರಿಯ ನಮ್ಮ ಸಂಗ್ರಹಗ್ರಂಥಗಳಲ್ಲಿ ಮೂರನೆಯದು. " ವೀರಶೈವ ದರ್ಶನ " " ಕಾಲಪ್ರವಾಹ " ಎಂಬ ಗ್ರಂಥಗಳಲ್ಲಿ ಸಂಗ್ರಹಿಸಲಾದ ರೀತಿಯಲ್ಲಿಯೇ ಈಚೆಗಿನ ಲೇಖನ ಉಪನ್ಯಾಸಗಳನ್ನು ಸಂಗ್ರಹಿಸಿ ಕೊಡಬೇಕೆಂದು ಬಂದ ಅನೇಕರ ಸೂಚನೆಗಳನ್ನು ಅನುಲಕ್ಷಿಸಿ ಈ ಸಂಗ್ರಹ ಕಾರ್ಯವನ್ನು ಕೈಕೊಳ್ಳಲಾಯಿತು.

ಇದರಲ್ಲಿ ಸಮಾವಿಷ್ಟವಾದ ' ಮೀನಕಣ್ ' ' ಧರ್ಮದೃಷ್ಟಿ ' ' ವಿಶ್ವಧರ್ಮ ' ' ಬಗೆಯ ಬಾನು ' ' ಮರಣದ ಮಹತಿ ' ಇವು ಸ್ವತಂತ್ರವಾದ ಲೇಖನಗಳು. ' ಶರಣರ ದಾರಿ ' ' ಮಹರ್ಷಿ ಶ್ರೀ ಅರವಿಂದರು ' ಇವು ಧಾರವಾಡ ಕೇಂದ್ರದ ಬಾನುಲಿ ಭಾಷಣಗಳು. ಉಳಿದವು ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ಸ್ಥಳಗಳಲ್ಲಿ ಮಾಡಿದ ಭಾಷಣ ಸಂಗ್ರಹಗಳು. ' ವ್ಯಕ್ತಿ ಧರ್ಮ'ದ ಬಗೆಗೆ ದಿಲ್ಲಿಯ ಕರ್ನಾಟಕ ಸಂಘದಲ್ಲಿ ಭಾಷಣ ಮಾಡಲಾಯಿತು. ಉಳಿದವುಗಳನ್ನು ಧಾರವಾಡ ಹುಬ್ಬಳ್ಳಿಗಳಲ್ಲಿ ಮಾಡಿದ ಭಾಷಣಗಳಿಂದ ಆಯ್ದುಕೊಳ್ಳಲಾಯಿತು.

ಕಲ್ಪಕವೃತ್ತಿಯನ್ನೂ ಕರ್ತೃತ್ವಶಕ್ತಿಯನ್ನೂ ಮೈಗೂಡಿಸಿಕೊಂಡ ಪ್ರತಿಭಾನ್ವಿತನಿಗೆ ಈ ಪ್ರಪಂಚವೊಂದು ಪಾಠಶಾಲೆಯಾಗಿದೆ. ಅವನು ವ್ಯಕ್ತಿಯಲ್ಲಿ ವಿಶ್ವವನ್ನು ವಿಶ್ವದಲ್ಲಿ ವ್ಯಕ್ತಿಯನ್ನು ಕಂಡು, ವಿಶ್ವಸಮರಸಿಯಾಗಿ ಐಹಿಕ ಪಾರಮಾರ್ಥಿಕಗಳನ್ನು ಒಂದುಗೂಡಿಸುವ ಅನುಭಾವಿಯಾಗಿರುವನು. ತನ್ನಲ್ಲಿ ವಿಜ್ಞಾನ ಆತ್ಮಜ್ಞಾನಗಳ ಮೇಳವನ್ನೂ ಪಡೆದಿರುವನು. ಅಂತರ್ಬಾಹ್ಯ ಸುಧಾರಣೆ ಸಂಸ್ಕಾರಗಳನ್ನು ಹೊಂದಿದ ಅವನು ಜೀವನವು ಸಮಗ್ರವಾಗಿದೆ ಪೂರ್ಣವಾಗಿದೆ-ಎಂಬ ಅರಿವಿನಿಂದ ಕೂಡಿದವನಾದುದರಿಂದ ಶಾರೀರಿಕ, ಮಾನಸಿಕ, ಆಧ್ಯಾತ್ಮಿಕ ಶಕ್ತಿ ಸಾಮರ್ಥ್ಯಗಳ ಪೂರ್ಣವಿಕಾಸದ ಆದರ್ಶವಾಗಿಹನು. ವಿಶಾಲವಾದ ಅವನ ಬಗೆಯ ಬಾನಿನಲ್ಲಿ ಚಿತ್ ಸೂರ್ಯನ ಪ್ರಭಾಪುಂಜವು ಅವಿರಳವಾಗಿ ಬೆಳಗುತ್ತಿರುವದರಿಂದ ಅವನ

ನಡೆ ನುಡಿ ನೋಟ ಮನ ಭಾವ ಎಲ್ಲವೂ ಶುದ್ಧವಾಗಿರುವವು—ಎಂಬೀ ಮುಂತಾದ ಮನನೀಯವಾದ ವಿಚಾರಗಳನ್ನು ಈ ಗ್ರಂಥದಲ್ಲಿ ಕಾಣಬಹುದು.

ಭಾರತವು ಸ್ವತಂತ್ರವಾದಂದಿನಿಂದ ನಾಡಿನ ಸಂಸ್ಕೃತಿಯನ್ನುಳಿಸಿಕೊಂಡು ಅದರ ಪ್ರಗತಿಯನ್ನೂ ವೈಶಿಷ್ಟ್ಯವನ್ನೂ ಬೆಳಗಿಸಬೇಕು ಎಂಬ ಕೂಗು ಕೇಳಿಬರುತ್ತಿದೆ. ಅದಕ್ಕಾಗಿ ಹೊಸ ದೃಷ್ಟಿಯೊಂದನ್ನು ಪಡೆದು ಅದು ಉಜ್ವಲವಾದ ಭವಿಷ್ಯತ್ತನ್ನು ಕಾಣಬೇಕೆಂಬ ಸೊಲ್ಲು ಈ ಕಿರಿಯ ಹೊತ್ತಿಗೆಯ ತುಂಬೆಲ್ಲ ಪಸರಿಸಿದೆ. ಭಾರತೀಯರಿಗೆ ರಕ್ತಗತವಾಗಿ ಬಂದ ಆಧ್ಯಾತ್ಮಿಕ ದೃಷ್ಟಿಯ ಜೊತೆಗೆ ತ್ವರಿತಗತಿಯಿಂದ ಸಾಗಿರುವ ಈ ಜಗತ್ತಿನ ಬಗೆಗೆ ಸರಿಯಾದ ದೃಷ್ಟಿಯನ್ನಿರಿಸಿಕೊಂಡು ಅಂತರ್‌ರಾಷ್ಟ್ರಿಯ ದೃಷ್ಟಿಯನ್ನು ಬೆಳೆಸಿಕೊಂಡು ಭಾರತವು ತನ್ನ ಏಳ್ಗೆಯನ್ನು ಪಡೆವುದಲ್ಲದೆ ಬಾಳುವೆಯ ಬೇಗೆಯಿಂದ ಬೇಗುದಿಗೊಂಡ ನೆರೆಹೊರೆಯ ನಾಡುಗಳಿಗೆ, ಇಡಿಯ ಜಗತ್ತಿಗೆ ದಾರಿಯನ್ನು ತೋರಿಸುವ ಯೋಗ್ಯತೆಯ ಹೊಣೆಗಾರಿಕೆಗೆ ತಕ್ಕುದಾಗಬೇಕೆಂಬ ಹಿರಿಯಾಸೆ ಇಲ್ಲಿ ಒಡಮೂಡಿದೆ.

ಈ ಗ್ರಂಥವನ್ನು ಸಿದ್ಧಗೊಳಿಸುವಾಗ ನೆರವಾದ ಗ್ರಂಥಗಳ ಉಪಕೃತಿಯನ್ನೂ ಮತ್ತು ತಮ್ಮ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನ ಭಾಷಣಗಳನ್ನು ಇದರಲ್ಲಿ ಸಮಾವೇಶಗೊಳಿಸಲು ಒಪ್ಪಿಗೆಯನ್ನಿತ್ತ ಸಂಪಾದಕರ ಹಾಗೂ ಧಾರವಾಡ ಬಾಸುಲಿಕೇಂಪ್ರದ ಸಂಚಾಲಕರ ಉಪಕೃತಿಯನ್ನೂ ಸ್ಮರಿಸದಿರಲಾರೆವು.

ಈ ಕಿರಿಯ ಹೊತ್ತಿಗೆಯಿಂದ ನಮ್ಮ ಸಂಸ್ಕೃತಿಯ ಬಗೆಗೆ ಒಂದಿಷ್ಟಾದರೂ ತಿಳಿವಳಿಕೆಯುಂಟಾದರೆ ಗ್ರಂಥನಿರ್ಮಿತಿಗೆ ಸಾಫಲ್ಯವುಂಟಾದೀತೆಂದು ನೆನೆಸಿರುವ,

ನವಕಲ್ಯಾಣಮಠ, ಧಾರವಾಡ
೬-೩-೧೯೫೧

ಗ್ರಂಥಕರ್ತ.



ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ
ಧಾರವಾಡ

# ಪರಿವಿಡಿ

# ಮೀನಕಣ್

ಈ ನಮ್ಮ ಸೃಷ್ಟಿಯು ಸ್ಥಿರವಲ್ಲ, ಚರವಾಗಿದೆ; ಸ್ಥಿತ್ಯಾತ್ಮಕವಲ್ಲ, ಗತ್ಯಾತ್ಮಕವಾಗಿದೆ; ಆದರೂ ನಿಃಶಬ್ದ ನೀರವವಾದ ಶಾಂತಿಯನ್ನು ತಾಳಿ, ಅದನ್ನು ಕಾಯ್ದುಕೊಳ್ಳುವದೇ ಸೃಷ್ಟಿಯ ಸಂಕಲ್ಪವಾಗಿದೆ. ಸೃಷ್ಟಿಯಲ್ಲಿಯ ಪದಾರ್ಥಗಳು ಗತಿಯ ವೇಗದಲ್ಲಿ ಮುಂದೊರೆಯುತ್ತಿರುವಾಗ ಅವುಗಳ ಅಂತರಂಗದ ಆಶಯವೇನು ? ಸೃಷ್ಟಿಯಲ್ಲಿ ತೋರುವ ಏರಿಳಿತಗಳು, ಹೆಚ್ಚು ಕಡಮೆಗಳು ಹೀಗೆ ಏಕೆ ಉಂಟಾಗುವವು? ಏರಿಕೆಯಲ್ಲಿದ್ದ ಪದಾರ್ಥವೊಂದು ಒತ್ತಡ-ವ್ಯತ್ಯಾಸಗಳಿಂದ ಇಳಿಕೆಯ ಪದಾರ್ಥದ ಕಡೆಗೆ ಹರಿದು ಬರುವ ಇಲ್ಲವೆ ಕಡಮೆ ತರಗತಿಯ ವಸ್ತುವೊಂದು ಹೆಚ್ಚಿನ ತರಗತಿಯ ಇನ್ನೊಂದು ವಸ್ತುವಿನ ಕಡೆಗೆ ನುಗ್ಗಿ ಸಾಗುವ ಕಾರಣವೇನು ?—ಎಂಬ ಸಂಗತಿಗಳನ್ನರಿಯಬೇಕು. ಆಗ ಒತ್ತಡ - ವ್ಯತ್ಯಾಸಗಳಿಂದುಂಟಾಗುವ ವಿಷಮತೆಯನ್ನು ಪರಿಹರಿಸಿ ಸಮತೆಯನ್ನು ಕಾಯ್ದುಕೊಳ್ಳುವ ಪ್ರಯತ್ನವು ಈ ಪ್ರಪಂಚದಲ್ಲಿ ನಿರಂತರವಾಗಿ ಸಾಗಿದೆ; ಸಮತೋಲನವನ್ನುಂಟು ಮಾಡಿಕೊಂಡು ಶಾಂತಿಯ ಪ್ರಸ್ಥಾಪನೆಗೆಯ್ಯುವ ಸಾಹಸವು ಎಂದಿನಿಂದಲೂ ಒಂದೇ ಸವನೆ ಸಾಗಿದೆ— ಎಂದು ವ್ಯಕ್ತವಾಗುವದು.

ಸಮತೆ - ಸಮತೋಲಗಳನ್ನು ಕಾಯ್ದುಕೊಳ್ಳುವ ಈ ಸಾಹಸವು ನಿರಿಂದ್ರಿಯ ಇಲ್ಲವೆ ಸೇಂದ್ರಿಯ ಪದಾರ್ಥಗಳೆರಡರಲ್ಲಿ ಒಂದೇ ಬಗೆಯಾಗಿ ಕಂಡು ಬರುತ್ತಿದೆ. ತೆವರಿನಲ್ಲಿದ್ದ ನೀರು ತಗ್ಗಿನ ಕಡೆಗೆ ಹರಿದು ಬಳಿದು ತನ್ನ ಸಮಪಾತಳಿಯನ್ನು ಕಾಯ್ದುಕೊಳ್ಳುವದು; ಸೂರ್ಯ ಪ್ರಕಾಶದ ಪ್ರಖರತೆಯಿಂದ ಹವೆಯಲ್ಲಿ ಉಂಟಾದ ಸ್ಥಿತ್ಯಂತರವು ಗಾಳಿಯ ರೂಪದಿಂದ ಹೆಚ್ಚು ಒತ್ತಡವಿರುವ ಸ್ಥಳದಿಂದ ಕಡಮೆ ಒತ್ತಡವಿರುವ ಸ್ಥಳದ ಕಡೆಗೆ ಬೀಸುವದು; ಪದಾರ್ಥದಲ್ಲಿ ಹೆಚ್ಚಾಗಿಯಿದ್ದ ಉಷ್ಣತೆಯು ಹರಿದು, ಅದು ಕಡಮೆಯಿದ್ದ ಪದಾರ್ಥದಲ್ಲಿ ಸೇರಿ ಸಮತೆಯನ್ನು ಕಾಯ್ದುಕೊಳ್ಳುವದು. ವಿದ್ಯುತ್ ಶಕ್ತಿಯ ವಿಷಯದಲ್ಲಿಯೂ ಹೀಗೆಯೇ. ಕಬ್ಬಿಣದ ಕಂಬಿಯೊಂದನ್ನು ವಿದ್ಯುತ್ತಿನ ಕೈಯಲ್ಲಿ ಸೇರಿಸಿ ಶಕ್ತಿಯನ್ನು ಹರಿಬಿಟ್ಟಾಗ ಅದರಲ್ಲಿ ಲೋಹ ಚುಂಬುಕದ

ಸಾಮರ್ಥ್ಯವು ಬರುತ್ತದೆ. ವಿದ್ಯುತ್ ಪಾತ್ರೆಯ ಹೊರಮಗ್ಗುಲಿಗಿದ್ದ ತಂತಿಯ ಮುಖಾಂತರವಾಗಿ ತಾಮ್ರದ ಕಂಬಿಯಿಂದ ಸತುವಿನ ಕಂಬಿಯ ಕಡೆಗೆ ಇಲ್ಲವೆ ಇತ್ತೀಚೆಗಿನ ವಿಜ್ಞಾನಿಗಳ ಅಭಿಮತದಂತೆ ಸತುವಿನ ಕಂಬಿಯಿಂದ ತಾಮ್ರದ ಕಂಬಿಯ ಕಡೆಗೆ ವಿದ್ಯುತ್ ಪ್ರವಾಹವು ಹರಿದು ಸಮತ್ವವನ್ನು ಕಾಯ್ದುಕೊಳ್ಳುವದಾಗಲಿ ಅಥವಾ ಹೆಚ್ಚಿನ ವಿದ್ಯುತ್ ಶಕ್ತಿಯಿಂದ ( High Voltage ) ವಿದ್ಯುತ್ ಪ್ರವಾಹವು ಕಡಮೆ ಶಕ್ತಿಯ ಕಡೆಗೆ ಹರಿದು ಬರುವ ಸಂಗತಿಯಾಗಲಿ ಒತ್ತಡದಿಂದ ಸಮಪಾತಳಿಯನ್ನು ಕಾಯ್ದುಕೊಳ್ಳುವ ಅದರ ಉದ್ದೇಶವನ್ನೇ ವ್ಯಕ್ತಗೊಳಿಸುವದು. ನಿರಿಂದ್ರಿಯ ಸೃಷ್ಟಿಯಲ್ಲಿ ಇಂತು ಒತ್ತಡ - ವ್ಯತ್ಯಾಸಗಳಿಂದ ಸಮತ್ವವನ್ನು ಕಾಯ್ದುಕೊಳ್ಳುವ ವೈಚಿತ್ರ್ಯವನ್ನು ನೋಡುವಂತೆ ಸೇಂದ್ರಿಯ ಸೃಷ್ಟಿಯಲ್ಲಿಯೂ ಅದನ್ನು ಕಾಣಬಲ್ಲೆವು. ಪ್ರಾಣಿವರ್ಗದಲ್ಲಿ ಕಂಡು ಬರುವ ವ್ಯವಹಾರಕ್ಕೆ ಅವಶ್ಯವಿರುವ ಚೈತನ್ಯಶಕ್ತಿಯು ಆ ಪ್ರಾಣಿಗಳು ತೆಗೆದುಕೊಳ್ಳುವ ಆಹಾರ ನೀರು ಹವೆಗಳಿಂದಷ್ಟೆ ! ಇವುಗಳ ಪರಿಣಾಮದಿಂದ ಸಿದ್ಧವಾದ ರಕ್ತವು ನಾಳಗಳ ಮುಖಾಂತರವಾಗಿ ದೇಹದಲ್ಲೆಲ್ಲ ಸಂಚರಿಸಿ ದೇಹಶುದ್ಧಿಯನ್ನು ಕಾಯ್ದುಕೊಂಡು ದೇಹದ ಸುಸ್ಥಿರತೆಯನ್ನು ನೀಡುವದು. ಪ್ರಾಣಿಗಳ ಪ್ರಾಣವ್ಯಾಪಾರಕ್ಕೆಲ್ಲ ಪ್ರಾಮುಖ್ಯವಾದ ಪ್ರಾಣವಾಯು ಉಸಿರಿನ ಜೊತೆಗೆ ದೇಹದಲ್ಲಿ ಸೇರುವುದಲ್ಲದೆ ಸೃಷ್ಟಿಯಲ್ಲಿ ಸ್ವಾಭಾವಿಕವಾಗಿ ಹರಡಿರುವ ವಿದ್ಯುತ್ ಕಣಗಳೂ ( Ions ) ಒಳಸೇರುವವು. ಈ ವಿದ್ಯುತ್ ಕಣಗಳ ರಾಸಾಯನಿಕ ಕ್ರಿಯೆಯಿಂದ ದೇಹದಲ್ಲಿ ದ್ರಾವಕವೊಂದು ಸಿದ್ಧವಾಗುವದು. ಇದು ನರಗಳ ಮುಖಾಂತರವಾಗಿ ದೇಹದ ಎಲ್ಲ ಭಾಗಗಳಿಗೆ ನಿಲುಕಿ ರಕ್ತದಂತೆ ದೇಹದ ದೃಢತೆಯನ್ನು ಕಾಯ್ದುಕೊಳ್ಳುವದು ನಗರಗಳಲ್ಲಿ ವ್ಯವಸ್ಥಿತವಾಗಿ ಹಾಕಿದ ನಳಗಳ ಮೂಲಕ ನೀರು ಮತ್ತು ವಿದ್ಯುತ್ ತಂತಿಗಳ ಮೂಲಕ ಬೆಳಕು ದೊರೆಯುವಂತೆ ರಕ್ತಸಂಬಂಧವಾದ ನಾಳಗಳಿಂದ, ದ್ರಾವಕ ಸಂಬಂಧವಾದ ನರಗಳಿಂದ ದೇಹಕ್ಕೆ ಚೈತನ್ಯ ಶಕ್ತಿಯು ಇಲ್ಲವೆ ಪ್ರಾಣಶಕ್ತಿಯು (Vitality) ದೊರೆಯುವದು. ದೇಹದ ನರನಾಡಿಗಳಲ್ಲಿ ಹರಿದಾಡುವ ಈ ನರದ್ರಾವಕವು ( Nerve fluid ) ಒಂದು ಬಗೆಯ ವಿದ್ಯುತ್ ಶಕ್ತಿಯೇ ಆಗಿರುತ್ತದೆ. ಪ್ರಾಣಿ ಶರೀರಗಳು ವಿದ್ಯುತ್ ಶಕ್ತಿಯ

ಸಂಗ್ರಹಾಲಯಗಳು ( Battery ) ಆಗಿರುತ್ತವೆಂದು ವಿಜ್ಞಾನಿಗಳು ಹೇಳು ತ್ತಾರೆ. ದೇಹದಲ್ಲಿ ಸಿದ್ಧವಾಗುವ ಈ ನರದ್ರಾವಕದ ಅಧಿಕ ಇಲ್ಲವೆ ಅಲ್ಪ ಪ್ರಮಾಣದಿಂದ ಆ ದೇಹದ ಸಶಕ್ತತೆ ಅಶಕ್ತತೆಗಳನ್ನು ಗುರುತಿಸಬಹುದು.

ಈ ನರದ್ರಾವಕವು ದೇಹದೇಹಗಳಲ್ಲಿ ಭಿನ್ನ ಭಿನ್ನ ಪ್ರಮಾಣದಲ್ಲಿ ರುವಂತೆ ಬೇರೆ ಬೇರೆ ಪ್ರಾಣಿಗಳ ದೇಹದಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಸಂಗ್ರಹವಾಗಿರುತ್ತದೆ. ದೇಹದಲ್ಲಿ ಉಂಟಾದ ರೋಗ - ರುಜಿನಗಳು ಕೊರತೆಯಾದ ಈ ನರದ್ರಾವಕವನ್ನು ವ್ಯಕ್ತಗೊಳಿಸುವವು. ದೇಹದ ಕ್ಷೀಣತೆ ರೋಗಸಂಗ್ರಹಗಳಿಗೆ ದೇಹದಲ್ಲಿಯ ಕೋಶ ( Cells ) ಸವಕಳಿ ಹಾಗೂ ರೋಗ ಜಂತುಗಳ ಪ್ರಾಬಲ್ಯ—ಇವು ಕಾರಣವೆಂದು ಹೇಳುವ ಮಾತು ಸಹ ಅವನ್ನೆದುರಿಸುವ ಬಲವುಳ್ಳ ನರದ್ರಾವಕವು ಆ ದೇಹದಲ್ಲಿ ಕಡಮೆಯಾಗ ಹತ್ತಿದೆ ಎಂಬುದನ್ನೇ ವ್ಯಕ್ತಗೊಳಿಸುವದು. ರೋಗ ಜಂತುಗಳುಳ್ಳ ಸಾಂಸ ರ್ಗಿಕ ರೋಗ ಜಂತುಗಳುಳ್ಳ ಮನುಷ್ಯನ ಮಗ್ಗುಲಲ್ಲಿ ಕಾಲ ಕಳೆವ ಸಶಕ್ತ ಮನುಷ್ಯನೂ ಆ ಜಂತುಗಳಿಗೆ ತುತ್ತಾಗುವನು. ರೋಗ ಪೀಡಿತ ತಾಯ ಮಗ್ಗುಲಿನಿಂದ ಕೂಸನ್ನು ದೂರಿರಿಸುವರು ಎಂಬುದನ್ನು ನಾವು ಬಲ್ಲೆವು. ನರಗಳ ಬಲ ಕುಂದಿದ ಮುದುಕಿಯ ಮಗ್ಗುಲಿನಲ್ಲಿ ನಳನಳಿಸಿ ಕಳೆಯೇರಿ ಬೆಳೆಯತ್ತಿದ್ದ ಕೂಸು ಕೆಲವೊಂದು ಕಾಲದ ಮೇಲೆ ಕುಂದುತ್ತ ನಡೆಯವದು ಎಂಬುದನ್ನೂ ಕಾಣುತ್ತೇವೆ. ಕಂದಿದ ಕೂಸು ಸಶಕ್ತ ತಾಯ ತೊಡೆಯ ಮೇಲೆ ಮತ್ತೆ ಸವೃಢವಾಗುವದನ್ನೂ ಅರಿಯುತ್ತೇವೆ. ಕೆಲವು ಪ್ರಾಣಿಗಳ ಸಂಪರ್ಕದಿಂದ ಶಿಶುಗಳ ದೃಷ್ಟಿಯೊಣಗುವದೆಂದು ಹೇಳುತ್ತಾರೆ. ಅದರಂತೆ ರಜಸ್ವಲೆಯರಾಗಿದ್ದ ಕಾಲಕ್ಕೆ ಆ ಹೆಣ್ಣು ಮಕ್ಕಳು ಸಣ್ಣ ಮಕ್ಕಳನ್ನು ಮುಟ್ಟಿದರೆ ಮುಟ್ಟಿನ ದೋಷ ತಟ್ಟುವದೆಂಬ ಮಾತನ್ನೂ ಕೇಳುತ್ತೇವೆ. ಈ ಪ್ರಸಂಗಗಳಲ್ಲಿ ಒಬ್ಬರ ದೃಷ್ಟಿಯಿಂದ ಹರಿಯತ್ತಿರುವ ನರದ್ರಾವಕವು — ಅದು ಕುಂದಿರಲಿ ಇಲ್ಲವೆ ಹೊಂದಿಕೆಯಾಗದಿರಲಿ—ಎಳೆಯರ ಬೆಳವಣಿಗೆಗೆ ಚೈತನ್ಯಶಕ್ತಿಯನ್ನು ನೀಡುವ ದೊಂದೆಡೆಗಿರಲಿ ಇದ್ದ ಚೈತನ್ಯವನ್ನೇ ಹಾಳು ಮಾಡುತ್ತಿದೆ ಎಂಬುದನ್ನು ತಿಳಿಯ ಬಹುದಾಗಿದೆ. ಇದನ್ನೇ ಇನ್ನೊಂದು ವಿಧವಾಗಿ ಹೀಗೆ ಹೇಳಬಹುದು: ಅಧಿಕ ಪ್ರಮಾಣದಲ್ಲಿ ಹರಿದಾಡುತ್ತಿರುವ ನರದ್ರಾವಕವು ಅಲ್ಪ ಪ್ರಮಾಣ ದಲ್ಲಿರುವ ದ್ರಾವಕದತ್ತ ಹರಿದು ಸಮತ್ವವನ್ನು ಕಾಯ್ದುಕೊಳ್ಳಲೆಳಿಸುವದು.

ಯಾವುದಾದರೊಂದು ಆಕಸ್ಮಿಕ ಘಟನೆ ಸಂಭವಿಸಿದಾಗ ಇಲ್ಲವೆ ಸಮಾಚಾರ ಕೇಳಿದಾಗ ಎಷ್ಟೋ ಜನರು ಒಮ್ಮೆಲೆ ಗಾಬರಿಯಾಗಿ ನಡುಗಿ ಎದೆಗುಂದಿ ಹೋಗುವರು. ಇಂಥವರಲ್ಲಿ ಆ ನರದ್ರಾವಕವು ಸಾಕಷ್ಟು ಪ್ರಮಾಣದಲ್ಲಿ ಹರಿದಾಡುತ್ತಿರುವದಿಲ್ಲವೆಂದು ಹೇಳಬಹುದು. ಹಲವರು ನರಗಳ ರೋಗದಿಂದ ಬಳಲುವರು; ಕೆಲವರಲ್ಲಿ ನರಗಳ ಯಾಂತ್ರಿಕ ರಚನೆಯೇ ಕೆಟ್ಟು ಅವರ ಜೀವನದ ರೀತಿ ವಿಚಿತ್ರವಾಗಿರುವದು. ( Nervous breakdown ) ಅಂಥವರಲ್ಲಿಯೂ ಈ ನರದ್ರಾವಕದ ಉತ್ಪತ್ತಿಯು ಸರಿಯಾದ ಪ್ರಮಾಣದಲ್ಲಿ ನಡೆಯುತ್ತಿರುವದಿಲ್ಲ, ಇಲ್ಲವೆ ಆ ಉತ್ಪತ್ತಿಯ ಕ್ರಮವು ಸರಿಯಾಗಿ ಸಾಗಿರುವದಿಲ್ಲ—ಎಂದು ತಿಳಿಯಬಹುದು. ರಕ್ತದ ಪ್ರಮಾಣವು ಕಡಿಮೆಯಾದ ವ್ಯಕ್ತಿಗಳಿಗೆ ಹೊಂದಿಕೆಯಾಗುವ ರಕ್ತವನ್ನು ದಾನಮಾಡಿ ಅವರನ್ನು ಬದುಕಿಸುವಂತೆ ಈ ಬಗೆಯ ವ್ಯಕ್ತಿಗಳಿಗೆ ಸಶಕ್ತ ನರದ್ರಾವಕವುಳ್ಳ ವ್ಯಕ್ತಿಗಳು ಏಕಾಗ್ರ ಚಿತ್ತದಿಂದ ತಮ್ಮಲ್ಲಿಯ ನರದ್ರಾವಕವನ್ನು ನೀಡಿ ಗುಣಪಡಿಸಬಲ್ಲರು. ಮೆಸ್ಮರಿಜಂ ಮೊದಲಾದ ಪ್ರಯೋಗಗಳಿಂದ ರೋಗ ನಿವಾರಣೆ ಮಾಡುವರಷ್ಟೆ! ಅಂಥ ಪ್ರಸಂಗಗಳಲ್ಲಿ ಕೇವಲ ನರದ್ರಾವಕವನ್ನು ನೀಡಿ ಗುಣಪಡಿಸುವರೆಂಬುದನ್ನರಿಯಬೇಕು. ಒಂದು ದೇಹದಿಂದ ಇನ್ನೊಂದರ ಕಡೆಗೆ ಹರಿಯುತ್ತಿರುವ ಈ ನರದ್ರಾವಕವು ಒಂದು ಬಗೆಯಾಗಿ ಸಮತ್ವವನ್ನೇ ಕಾಯ್ದುಕೊಳ್ಳುತ್ತಿರುವದೆಂಬುದನ್ನು ನೆನಿಸಿದರೆ ಸಾಕು.

ಮಾನವರ ಅಂತಃಕರಣದ ವೈಚಿತ್ರ್ಯವನ್ನು ಕುರಿತು ಆಲೋಚಿಸಿದರೂ ಇಂಥ ಒತ್ತಡ-ವ್ಯತ್ಯಾಸಗಳಿಂದ ನಿತ್ಯಸಮತೆಯನ್ನು ಕಾಯ್ದುಕೊಳ್ಳುವ ಕಾರ್ಯವೇ ಸಾಗಿದೆ ಎಂದು ತಿಳಿಯಬಹುದು. ಮನಸ್ಸಿನ ಉದ್ರೇಕ-ಆನಂದಗಳಿಂದ ಒಂದೇ ಕಾಲಕ್ಕೆ ಎರಡು ಮಗುಗಳ ಮನಸ್ಸಿನಲ್ಲಿ ಆ ಉದ್ರೇಕ-ಆನಂದಗಳ ಪರಿಣಾಮವು ಮೂಡುವದು. ಹೊಗಳಿಕೆ- ತೆಗಳಿಕೆಗಳ ಪರಿಣಾಮವಾಗಿ ಸಮ್ಮುಖದಲ್ಲಿದ್ದವರು ಹಿಗ್ಗುಕುಗ್ಗುಗಳಿಗೆ ಒಳಗಾಗುವರು. ರಸಾಸ್ವಾದನೆಯೂ ಸಹ ಮನಸ್ಸಿನಲ್ಲಿ ಮೂಡುವ ಆಯಾ ಭಾವತರಂಗಗಳ ಪರಿಣಾಮವನ್ನೇ ವ್ಯಕ್ತಗೊಳಿಸುವದು.

ಸ್ಥೂಲ ಸೃಷ್ಟಿಯಲ್ಲಾಗಲಿ ಸೂಕ್ಷ್ಮ ಸೃಷ್ಟಿಯಲ್ಲಾಗಲಿ ಇಲ್ಲವೆ ಕಾರಣ ಸೃಷ್ಟಿಯಲ್ಲಾಗಲಿ ಇಂಥ ಒತ್ತಡ – ವ್ಯತ್ಯಾಸಗಳಿಂದಾಗುವ ವಿಷಮತೆಯನ್ನು

ಕಳೆದು ಸಮತೆ ಸಮತೋಲಗಳನ್ನು ಕಾಯ್ದುಕೊಳ್ಳುವ ಪ್ರಯತ್ನವು ಎಡೆ ಬಿಡದೆ ನಡೆದಿರುವದೆಂದು ಇದರಿಂದ ಸ್ಪಷ್ಟವಾಗುವದು. ಕಾರಣದ ಸೃಷ್ಟಿಗಿಂತಲೂ ಸೂಕ್ಷ್ಮವಾದ ಮಹಾಕಾರಣಸೃಷ್ಟಿಯಲ್ಲಿ ನಡೆದಿರುವ ಸಮತೆಯನ್ನು ಪಡೆದುಕೊಳ್ಳುವ ಈ ಕ್ರಿಯೆಯು ಇನ್ನೂ ಅದ್ಭುತವಾಗಿರುವದು. ಜೀವನದ ಸೆಲೆಯೆಲ್ಲ ಈ ಮಹಾಕಾರಣ ಸೃಷ್ಟಿಯ ಆಳದಿಂದಲೆ ಹೊರಹೊಮ್ಮುವದರಿಂದ ಅಲ್ಲಿ ತಲೆದೋರುವ ಸಮತೆಶಾಂತಿಗಳು ನಿಃಶಬ್ದ ನೀರವಗಳ ಚಿತ್ರವನ್ನು ಅತಿ ಸ್ಪಷ್ಟವಾಗಿ ನಿರೂಪಿಸುತ್ತಿವೆ. ಗುರುಕರಣದಲ್ಲಿ ಶಕ್ತಿಪಾತ ಪ್ರಯೋಗವೆಂಬುದು ಒಂದು ಉಂಟು. ದೃಷ್ಟಿ ಧ್ಯಾನ ಸ್ಪರ್ಶಗಳಲ್ಲಿ ಒಂದರಿಂದ ಇಲ್ಲವೆ ಎಲ್ಲವುಗಳಿಂದ ಆ ಗುರುವು ಈ ಶಕ್ತಿಪಾತ ಪ್ರಯೋಗ ಮಾಡುವನು ಎಂದು ಹೇಳುವರು. ಈ ಪ್ರಯೋಗದ ಸ್ವರೂಪನ್ನು ಬಣ್ಣಿಸುವಲ್ಲಿ ಕ್ರಮವಾಗಿ ಮೀನ-ಆವೆ-ಹಕ್ಕಿಗಳು ತಮ್ಮ ಬಸಿರಿನಿಂದ ಹೊರಬರುವ ಮರಿಗಳಲ್ಲಿ ತೋರಿಸುವ ವಾತ್ಸಲ್ಯವನ್ನು ಉದಾಹರಿಸುವರು. ಶ್ರೀ ರಾಮಕೃಷ್ಣಪರಮಹಂಸರು ವಿವೇಕಾನಂದರಿಗೆ ನೀಡಿದ ಶಕ್ತಿಪಾತ ಪ್ರಯೋಗವನ್ನು ಮನದಂದರೆ ಮಹಾಕಾರಣದಲ್ಲಿ ನಡೆದಿರುವ ಸಮತೆಯನ್ನು ಕಾಯ್ದುಕೊಳ್ಳುವ ಈ ಗೂಢದ ನಿಲವು ವ್ಯಕ್ತವಾಗುವದು. ಸೃಷ್ಟಿಸಾಮಾನ್ಯವಾದ ಶಿವಕಾರುಣ್ಯದ ಅರಿವು ಸೃಷ್ಟಿಗೆ ಉಂಟಾಗಲಿ ಆಗದಿರಲಿ ಅದು ಮಹಾಕಾರಣದಲ್ಲಿ ಸಹಜವಾಗಿ ಸಾಗಿಯೇ ಇದೆ; ಇದರಿಂದಾಗಿ ಸಮತೆ ಶಾಂತಿಗಳನ್ನು ಕಾಯ್ದುಕೊಳ್ಳುವ ಕಾರ್ಯವು ಅವ್ಯಕ್ತವಾಗಿ ಸಾಗಿಯೇ ಇದೆ. ಎಲ್ಲ ಸೃಷ್ಟಿಗಳಲ್ಲಿ ಅವ್ಯಾಹತವಾಗಿ ನಡೆದಿರುವ ಇದನ್ನು ಕಂಡು ಆನಂದ ಪಡೆದುಕೊಳ್ಳುವದೇ ಜೀವನ ದೃಷ್ಟಿಗೂ ಇರವಿಗೂ ಸಾಫಲ್ಯವು.

ಪ್ರಾಣಿಗಳ ದೇಹಗಳು ವಿದ್ಯುತ್‌ನಿಲಯಗಳೆಂದು ಹೇಳಿದೆಯಷ್ಟೆ! ಜೀವರಲ್ಲಿರುವ ಎಲ್ಲ ಪದಾರ್ಥಗಳ ಗುಣಾಂಶವು ವಿದ್ಯುತ್ತಿನಲ್ಲಿರುವದು. ರಾಸಾಯನಿಕರು ಈ ಸೃಷ್ಟಿಯಲ್ಲಿ ೯೨ ಮೂಲ ವಸ್ತುಗಳನ್ನು ಕಂಡುಹಿಡಿದಿರುವರು; ಅವೆಲ್ಲ ಅನಿಲ ರೂಪದಲ್ಲಿ ಸೂರ್ಯನಲ್ಲಿವೆ ಎಂದು ಈಗ ಸಿದ್ಧವಾಗಿರುವದು. ಆದುದರಿಂದ ಸೂರ್ಯನು ಶುದ್ಧ ವಿದ್ಯುತ್‌ಶಕ್ತಿಸ್ವರೂಪನು. ಪಂಚಮಹಾಭೂತಗಳಿಂದ ಕೂಡಿದ ಇಲ್ಲವೆ ಈಚೆಗಿನ ವಿಜ್ಞಾನಿಗಳು ಹೇಳುವಂತೆ ಮೂಲವಸ್ತುಗಳಿಂದ ಕೂಡಿದ ಈ ಸೃಷ್ಟಿಯುಲ್ಲಿ ಉಂಟಾಗುತ್ತಿರುವ

ಈ ವ್ಯವಹಾರಕ್ಕೆಲ್ಲ ಚೇತನ ದೊರೆತಿರುವದು ಸೂರ್ಯನಲ್ಲಿರುವ ವಿದ್ಯುತ್ ಶಕ್ತಿಯಿಂದಲೇ ! ಈ ವಿದ್ಯುತ್ ಶಕ್ತಿಗೆ ಪ್ರಾಣಶಕ್ತಿಯೆಂದೂ ಹೆಸರು. ಈ ವಿದ್ಯುತ್ ಶಕ್ತಿಯನ್ನು ಅನುಭವಿಸಬಹುದೇ ಹೊರತು ವರ್ಣಿಸಿ ಹೇಳಲಿಕ್ಕೆ ಆಗುವದಿಲ್ಲ. ಇದು ಅಗೋಚರವಾದರೂ ಅವಿರಳವಾಗಿ ಅವನಿಯಲ್ಲಿ ವ್ಯಾಪಿಸಿರುವದು. ಒಂದು ವೇಳೆ ಇದನ್ನು ತಾಳೋಷ್ಟ ಸಂಪುಟಕ್ಕೆ ತಂದು ನಿಲ್ಲಿಸಬಯಸಿದರೆ—ಬಿಸಿಲಿನಲ್ಲಿ ಬೆಚ್ಚಗಿರುವದು, ತಂಗಾಳಿಯಲ್ಲಿ ತಂಪಾಗಿರುವದು, ಮರಗಳಲ್ಲಿ ಚಿಗುರುವದು, ತಾರೆಗಳಲ್ಲಿ ಮಿನುಗುವದು, ಪ್ರಾಣಿಗಳಲ್ಲಿ ಬದುಕಿರುವದು, ವಿಶ್ವದಲ್ಲಿ ಬೆಳೆಯುವದು, ಭಾಗವಾಗದೆ ಹೆರಡುವದು, ಬಳಕೆಯಿಲ್ಲದೆ ಕಾರ್ಯಗೆಯ್ಯುವದು — ಎಂದು ಅವನ್ನು ವಿವರಿಸಬಹುದು; ಯಾಕೆಂದರೆ ಈ ವಿದ್ಯುತ್ ವಸ್ತುಗಳ ಮೂಲಗುಣಧರ್ಮವೇ ಆಗಿರುವದು. ಸೂರ್ಯನಿಂದ ಚಿಮ್ಮುತ್ತಿರುವ ಈ ವಿದ್ಯುತ್ ಶಕ್ತಿಯ ವೈಭವ - ವೈಚಿತ್ರ್ಯಗಳ ಪರಿಣಾಮವು ಆತ್ಮರ ಮೇಲೆ ಅತ್ಯಂತ ಬೆರಗುಗೊಳಿಸುವ ರೀತಿಯಲ್ಲಿ ವ್ಯಕ್ತವಾಗುವದು. ಅಲ್ಲಿ ಪರಿಣಾಮನ್ನುಂಟುಮಾಡುವ ಆ ಶಕ್ತಿಯ ಅಪರಿಮಿತವಾದ ಅನುಪಮವಾದ ಪ್ರಭಾಪುಂಜವು ಮಾತಿಗೆ ನಿಲುಕದು. ಮನಕ್ಕೆ ಮುಟ್ಟದು; ಆತ್ಮಸೃಷ್ಟಿಯಲ್ಲಿ ಜರುಗುವ ಆ ಮೋಡಿಯನ್ನು ಆತ್ಮಶಕ್ತಿಯಿಂದಲೇ ಕಾಣಬೇಕು. ಆತ್ಮಜ್ಞಾನಿಗಳೇ ಅದನ್ನು ಅರಿಯುವರು, ಅರುಹುವರು. ಯೋಗಶಾಸ್ತ್ರದಲ್ಲಿ ಆತ್ಮಸೃಷ್ಟಿಯ ಈ ವಿದ್ಯುತ್‌ಶಕ್ತಿಗೆ—ಈ ಪ್ರಾಣಶಕ್ತಿಗೆ ಕುಂಡಲಿನಿ ಶಕ್ತಿಯೆಂದು ಹೆಸರಾಗಿದೆ.

ಕುಂಡಲಿನಿ ಶಕ್ತಿಯನ್ನು ವರ್ಣಿಸುವಾಗ ಎಷ್ಟೋ ಸಾರೆ ಅದನ್ನು ಮಿಂಚಿಗೆ ಹೋಲಿಸುವುದುಂಟು. ವಿದ್ಯುತ್ ಎಂದರೆ ಮಿಂಚು; ವಿದ್ಯುತ್ ಶಕ್ತಿ ಎಂದರೆ ಮಿಂಚಿನ ಪ್ರಭಾವ. ಗೊತ್ತಿರುವ ಸಂಗತಿಗಳಿಂದ ಗೊತ್ತಿರದ ಸಂಗತಿಗಳನ್ನರಿಯಬೇಕು ಎಂಬಂತೆ ತಿಳಿಯಲಾರದ ಕುಂಡಲಿನಿ ಶಕ್ತಿಯನ್ನು ತಿಳಿದಿರುವ ವಿದ್ಯುತ್ ಶಕ್ತಿಯ ದೃಷ್ಟಾಂತದಿಂದ ವಿವರಿಸಿರುವರು. ವಿದ್ಯುತ್ತಿನಲ್ಲಿ ಧನ ವಿದ್ಯುತ್ ಋಣ ವಿದ್ಯುತ್ ಎಂದು ಇಬ್ಬಗೆಯಿರುವಂತೆ ಅಂತರಂಗದಲ್ಲಿ ಅಧಿಕಭಾವಾಪನ್ನವಾದುದು ಬಲ (ಧನ) ವಿದ್ಯುತ್ ಎಂದೂ ಅಲ್ಪಭಾವಾಪನ್ನವಾದುದು ಎಡ (ಋಣ) ವಿದ್ಯುತ್ ಎಂದೂ ಕವಲುಗಳನ್ನು ಪಡೆದ ಆ ಕುಂಡಲಿನಿ ಶಕ್ತಿಯು ಮಿಂಚಿನ ಅತಿಶಯ ಪ್ರಕಾಶವನ್ನು ಮತ್ತು

ಅದರ ಭಯಂಕರ ಪ್ರಭಾವವನ್ನು ತಾಳಿರುವದು. ಮೇಘ ಮಂಡಲದಿಂದ ಮಿಂಚು ಆರ್ಭಟಿಯಿಂದ ಹಾರುವಾಗ ಸಿಡಿಲು ಉಂಟಾಯಿತೆಂದು ಹೇಳುತ್ತೇವೆ. ಕುಂಡಲಿನಿ ಶಕ್ತಿಯು ಜಾಗ್ರತವಾಗುವಾಗಲೂ ಇದೇ ತರಹದ ಅನುಭವವುಂಟಾಗುವದೆಂದು ತಿಳಿಸಿರುವರು. ಅಚ್ಚರಿಗೊಳಿಸುವ ತೇಜವನ್ನೂ ಭೀತಿಗೊಳಿಸುವ ಬಲವನ್ನೂ ತಾಳಿರುವ ಈ ಮಿಂಚಿನ ಶಕ್ತಿಯನ್ನು ಒಂದು ಗಾಳಿಯ ಪಟದ ಮೂಲಕ ಭೂಮಿಗೆ ಸೆಳೆದು ಅದನ್ನು ಪರೀಕ್ಷೆಗೆ ಈಡುಮಾಡಿದ ಅಮೇರಿಕೆಯ ಬೆಂಜಾಮಿನ್ ಫ್ರ್ಯಾಂಕ್‌ಲಿನ್ ಎಂಬವನ ಪ್ರಯೋಗದಿಂದ ಸಜಾತೀಯ ವಿದ್ಯುತ್ ಶಕ್ತಿಗಳು ಪರಸ್ಪರ ನಿರಾಕರಣೆಯನ್ನೂ ವಿಜಾತೀಯ ವಿದ್ಯುತ್ ಶಕ್ತಿಗಳು ಪರಸ್ಪರ ಆಕರ್ಷಣೆಯನ್ನೂ ಮಾಡುತ್ತವೆಂಬುದು ವ್ಯಕ್ತವಾಯಿತು. ಈ ಮಿಂಚಿನ ಮತ್ತು ಈ ಕುಂಡಲಿನಿ ಶಕ್ತಿಯ ವರ್ಣನೆಗಳಲ್ಲಿರುವ ತಾದಾತ್ಮ್ಯದ ಸೊಬಗು ಅದೆಷ್ಟು ಮನೋಹರವಾಗಿದೆ ಎಂಬುದನ್ನಿಲ್ಲಿ ನೋಡಬಹುದು.

तटिल्लतासमरुचिः विद्युल्लेखेव भास्वरा ।
तडिल्लेखा तन्वी तपन-शशिवैश्वानरमयी ।
कुण्डले अस्याः स्त इति कुण्डलिनी ।
मूलाधारस्थवन्हयात्मतेजोमध्ये व्यवस्थिता ॥

(ಯೋಗಕುಂಡಲಿ ಉಪನಿಷತ್)

मूलाधारे आत्मशक्तिः कुण्डली परदेवता ।
शायिता भुजगाकारा सार्धत्रिवलयान्विता ॥

(ಘೇರಂಡ ಸಂಹಿತಾ)

मूलाधारे मूलविद्यां विद्युत्कोटिसमप्रभाम् ।
सूर्यकोटिप्रतीकाशां चन्द्रकोटिद्रवां प्रिये ॥

(ಜ್ಞಾನಾರ್ಣವ ತಂತ್ರ)

कुण्डली कुटलाकारं सर्पवत् परिकीर्तिता ।
सा शक्तिश्चलिता येन स युक्तो नाम संशयं ॥

(ಹಠಯೋಗ ಪ್ರದೀಪಿಕಾ)

ಇದರಂತೆ ಯೋಗದೃಷ್ಟಿಯನ್ನು ಬಲಿಸಿಕೊಂಡಿದ್ದ ಕನ್ನಡ ವಚನ
ಕಾರರಾದ ಅಲ್ಲಮಪ್ರಭು ಸಿದ್ಧರಾಮ ಷಣ್ಮುಖಸ್ವಾಮಿ ಸ್ವತಂತ್ರ
ಸಿದ್ಧ ಲಿಂಗೇಶ್ವರ ತೋಂಟದ ಸಿದ್ಧಲಿಂಗಯತಿ ಮೊದಲಾದವರು, ಕನ್ನಡದ
ಋಷಿ ಕವಿಗಳಾದ ನಿಜಗುಣ ಸರ್ಪಭೂಷಣ ಶಿವಯೋಗಿಗಳು ಚಿದಾನಂದ
ಶಂಕರಾನಂದ ಅವಧೂತರು ಮುಂತಾದವರು ತಮ್ಮ ತಮ್ಮ ವಚನಗಳಲ್ಲಿ
ತಮ್ಮ ತಮ್ಮ ಕೈವಲ್ಯ ಪದ್ಧತಿಗಳಲ್ಲಿ, ತಮ್ಮ ತಮ್ಮ ಹಾಡುಗಬ್ಬಗಳಲ್ಲಿ
ಈ ಕುಂಡಲಿನಿಯನ್ನು ಬಲು ಸುಂದರವಾಗಿ ವರ್ಣಿಸಿರುವರು.

ಆರೈದು ನೋಡಿದರೆ ಯೋಗಶಾಸ್ತ್ರದಲ್ಲಿ ವರ್ಣಿತವಾದ ಸಮತೆ
ಶಾಂತತೆಗಳಿಗೆ ಕಾರಣವಾದ ಈ ಕುಂಡಲಿನಿಯ ಲಕ್ಷಣಗಳೆಲ್ಲ ಈಗಿನ
ಶಾಸ್ತ್ರೀಯ ಪ್ರಯೋಗದಿಂದರಿತ ವಿದ್ಯುತ್ ಶಕ್ತಿಯ ಲಕ್ಷಣಗಳಿಗೆ ಸರಿ
ಹೋಗುವವು. ಇವುಗಳಲ್ಲಿ ಒಂದು ಪಿಂಡದಲ್ಲಿ ತೋರುವ ವೈಚಿತ್ರ್ಯಕ್ಕೆ
ಸಂಬಂಧವಾದುದಾದರೆ ಇನ್ನೊಂದು ಬ್ರಹ್ಮಾಂಡದಲ್ಲಿ ಕಂಗೊಳಿಸುವ
ಬೆಡಗಿಗೆ ಸಂಬಂಧಪಟ್ಟುದು. ಈ ವಿದ್ಯುತ್ತಿನ ದೆಸೆಯಿಂದ ಪಿಂಡಬ್ರಹ್ಮಾಂಡ
ಗಳಲ್ಲಿಯ ಸಾಮರಸ್ಯದ ಸೊಬಗೂ ವ್ಯಕ್ತವಾಗುವದು.

ವಿದ್ಯುತು (ಮಿಂಚು) ಅಪ್ರತಿಹತ ಪ್ರಭಾವಶಾಲಿಯಾಗಿಯೂ
ಅಪ್ರತಿಮ ಪ್ರಕಾಶಮಯವಾಗಿಯೂ ಇದ್ದು ಸ್ವಭಾವತಃ ಅತಿ ಶೀತಲವಾಗಿ
ಶಾಂತವಾಗಿ ಇರುವದೆಂದು ಆಧುನಿಕ ವಿಜ್ಞಾನಿಗಳು ಹೇಳುವವರು ಅದನ್ನೆ
ಯೋಗಶಾಸ್ತ್ರವು ಕುಂಡಲಿನಿಯು ವಿದ್ಯುತ್‌ಕೋಟಿ ಪ್ರಭೆಯಿಂದ
ಕೂಡಿದುದೂ ಕೋಟಿ ಸೂರ್ಯ-ಚಂದ್ರರಿಗೆ ಸಮವಾದ ಪ್ರಕಾಶವುಳ್ಳುದು
ಎಂದು ಹೇಳುತ್ತದೆ. ವಿದ್ಯುತ್‌ಲತೆಯು ಬಳ್ಳಿಬಳ್ಳಿಯಾಗಿ ಮಡಲಿರಿಯ
ತ್ತಿರುವದು; ಕುಂಡಲಿನಿಯೂ ಕುಟಿಲಾಕಾರವಾಗಿರುವದು. ಪ್ರಪಂಚದ
ಪಡಿಪದಾರ್ಥಗಳಿಗೆ ವಿದ್ಯುತ್ ಶಕ್ತಿಯೇ ಮೂಲಾಧಾರವಾಗಿರುವದು
ಅದರಂತೆ ಮಾನವ ಪಿಂಡ ದೃಷ್ಟಿಯಿಂದ ಈ ಕುಂಡಲಿನಿಯು
ಮೂಲಾಧಾರದಲ್ಲಿ ಮೂಲಾಧಾರಮಧ್ಯಸ್ಥವಾಗಿದೆ—ಎಂದು ಹೇಳುತ್ತಾರೆ
ಕುಂಡಲಿನಿಯು ಸರ್ಪದ ಹಾಗೆ ಇರುವದೆಂದು ಯೋಗಶಾಸ್ತ್ರವು ತಿಳಿಸುತ್ತದೆ
ಈ ವೈಖರಿಯಲ್ಲಿಯ ಔಚಿತ್ಯವನ್ನು ಕಾಣಬೇಕು. ಬಾಲವನ್ನು ತನ್ನ
ಬಾಯಲ್ಲಿ ಕಚ್ಚಿಕೊಂಡು ಮಂಡಲಾಕಾರವಾಗಿ ಹಾವು ಮಲಗುವದು

ಬಾಯಿ ಬಾಲಗಳು ವಿಜಾತೀಯವಾದವುಗಳು. ಬಾಯಿ ಬಾಯಿ, ಬಾಲ ಬಾಲ ಇವು ಸಜಾತೀಯವಾದವುಗಳು. ಸಜಾತೀಯ ಮತ್ತು ವಿಜಾತೀಯ ವಿದ್ಯುತ್ ಶಕ್ತಿಗಳು ಪರಸ್ಪರ ಆಕರ್ಷಿಸಿ ಸಮತೆಯನ್ನು ತಾಳಿಕೊಳ್ಳುವಂತೆ ಕುಂಡಲಿನಿಯ ಇಬ್ಬಗೆಯಾದ ವೃತ್ತಿಯಿಂದ ಸಮತೆಯನ್ನು ಕಾಯ್ದುಕೊಳ್ಳುವದನ್ನು ಕಾಣಬೇಕು. ಹಾವಿಗೆ ಎರಡು ನಾಲಗೆಗಳು ಎಂಬುದನ್ನರಿತಾಗ ಕುಂಡಲಿನಿಯ ಇಬ್ಬಗೆಯಾದ ವೃತ್ತಿಗೆ 'ಸರ್ಪವತ್' ಎಂದು ಹೇಳುವ ಔಚಿತ್ಯವು ಇನ್ನೂ ಸ್ಪಷ್ಟವಾಗುವದು.

ಕುಂಡಲಿನಿಯನ್ನು ಜಾಗ್ರತಗೊಳಿಸುವಲ್ಲಿ ಪ್ರಾಣಾಯಾಮವನ್ನು ಆಚರಿಸುತ್ತಾರಷ್ಟೇ ! ಆಗ ಉಸಿರೆಳೆದುಕೊಳ್ಳುವಾಗೆಲ್ಲ ವಿದ್ಯುತ್‌ಪ್ರಸಾರವುಳ್ಳ ವಾಯುವಿನ ಮುಖಾಂತರವಾಗಿ ವಿದ್ಯುತ್‌ಕಣಗಳು ಒಳಸೇರುತ್ತವೆ. ಇವುಗಳಿಂದ ದೇಹದಲ್ಲಿ ನರದ್ರಾವಕವು ವಿಪುಲವಾಗಿ ನಿರ್ಮಾಣವಾಗುವದು, ನರಗಳನ್ನೆಲ್ಲ ತುಂಬುವದು; ವಿದ್ಯುತ್‌ಕಣಗಳಿಂದ ಮಿದುಳನ್ನು ಮೀಯಿಸಿ ಮಿನುಗುವಂತೆ ಮಾಡುವದು; ದಿವ್ಯದೃಷ್ಟಿಯೊಂದು ದೊರೆಕೊಳ್ಳುವಂತೆ ನೋಡಿಕೊಳ್ಳುವದು. ಈ ದಿವ್ಯದೃಷ್ಟಿಗೆ ಯೋಗದಲ್ಲಿ ಅನಿಮಿಷ ದೃಷ್ಟಿ — ಎವೆಯಿಕ್ಕದೆ ಎಲ್ಲವನ್ನೂ ಆಕಲನಮಾಡುವ ನೋಟ—ಎಂದು ಕರೆಯುವರು. ಅನಿಮಿಷವೆಂದರೆ ಮೀನ; ಆದುದರಿಂದ ಅನಿಮಿಷ ದೃಷ್ಟಿಗೆ ಮೀನಕಣ್ ಎಂದು ಹೆಸರು. ಈ ಮೀನ ಕಣ್ಣು ಯೋಗಬಲದಿಂದ ಮಾನವನು ಪಡೆಯುವ ಶ್ರೇಷ್ಠತರಗತಿಯ ಸಂಸ್ಕೃತಿಯೊಂದನ್ನು ಸೂಚಿಸುವದು. ಯೋಗಿಯ ಪಿಂಡವು ಅನುಪಮವಾದ ವಿದ್ಯುತ್‌ನಿಲಯವೆಂಬ ಮಾತು ಆಗ ಸ್ಪಷ್ಟವಾಗುವದು. ಇಂಥ ಯೋಗಿಯು ದೃಷ್ಟಿ-ಧ್ಯಾನ-ಸ್ಪರ್ಶಗಳಿಂದ ಶಿಷ್ಯನಲ್ಲಿ ವಿದ್ಯುತ್ ಪ್ರಭೆಯನ್ನು ಪಸರಿಸಿ ಸಮತೆ – ಸಮರಸಗಳ ಸೊಬಗನ್ನು ಪುಟಗೊಳಿಸುವನೆಂಬ ಮಾತು ಇನ್ನೂ ಅತ್ಯಂತ ಸ್ಪಷ್ಟವಾಗುವದು. ಒಳಗಿನಿಂದ ಹೊರಹೊಮ್ಮುವ ಸೃಷ್ಟಿಯು ದೃಷ್ಟಿಯ ಸಂಗಮದಿಂದ, ಅನಿಮಿಷ ದೃಷ್ಟಿಯ ನೋಟದಿಂದ ಮಂಗಳಮಯವಾಗಿ ಕಂಗೊಳಿಸುವದೆಂಬ ಮಾತು ಆಗ ಸತ್ಯವಾಗಿ ಪರಿಣಮಿಸುವದು.

ಅನಿಮಿಷ ದೃಷ್ಟಿಯ ಯೋಗವು ಬಹು ಪುರಾತನ ಕಾಲದಿಂದ ಜನರಿಗೆ ಗೊತ್ತಾಗಿತ್ತೆಂದು ಹೇಳಬಹುದು. ಮೀನಕಣ್ ಎಂಬ ಪದಪ್ರಯೋಗವು

೫೦೦೦ ವರುಷಗಳ ಹಿಂದಿನ ಐತಿಹಾಸಿಕ ಅವಶೇಷಗಳಲ್ಲಿ ಕಂಡುಬರುತ್ತ
ಪ್ರಾಚ್ಯ ಸಂಶೋಧನ ಶಾಖೆಯವರು ಸಿಂಧೂ ನದಿಯ ಕೊಳ್ಳವನ್ನು ಅಗ
ಹಚ್ಚಿದಾಗ ಮೊಹೆಂಜೊದಾರೊ ಮತ್ತು ಹರಪ್ಪ ಎಂಬ ಎರಡು ಪುರಾ
ಪಟ್ಟಣಗಳಲ್ಲಿ ದೊರೆತ ಅವಶೇಷಗಳು ಪ್ರಾಚೀನ ಸಂಸ್ಕೃತಿಯ ದೃಷ್ಟಿಯಿ
ಅತ್ಯಂತ ಅದ್ಭುತರಮ್ಯವಾಗಿವೆ. ಅವುಗಳ ಬಗೆಗೆ ಸರ್ ಜಾನ್ ಮಾರ್ಶ
ಅವರ ಅನುಭವ ಪೂರ್ಣವಾದ ಅಭ್ಯಾಸದ ಫಲವಾಗಿ ಹೊರಬಿದ್ದ ಎ
ಉದ್ಗ್ರಂಥಗಳು ಮಹೋಪಕಾರಿಯಾಗಿವೆ. ಈ ಸಂಸ್ಕೃತಿಯಿಂದ ಸ
ನವನಾಗರಿಕತೆಯಲ್ಲಿ ಕಂಡುಬರುವ ಅನೇಕ ಸುಖಸೌಲಭ್ಯಗಳು ಆಗಿನ ಜನ
ದೊರೆತಿದ್ದುವೆಂಬುದು ತಿಳಿದು ಬರುವದಲ್ಲದೆ ಸೂರ್ಯ ಶಿವ ವೃಷಭ
ಈ ಮುಂತಾದ ಬಳಕೆಯ ಪದಗಳಿಂದ ಆಗ ಬೇರೆ ಬೇರೆ ದೈವಭಕ್ತ
ಪೂಜಕರೂ ಇದ್ದರೆಂಬುದು ವ್ಯಕ್ತವಾಗುವದು—ಎಂದು ಮಾರ್ಶ
ಆವರು ಅಭಿಪ್ರಾಯ ಪಡುವರು. ಮತ್ತು ಈ ಸಂಸ್ಕೃತಿಯು ಈಚಿಗಿನ ಆರ್ಯ
ಸಂಸ್ಕೃತಿಗಿಂತಲೂ ಭಿನ್ನವಾದ ಭವ್ಯವಾದ ಒಂದು ಸಂಸ್ಕೃತಿಯ
ವ್ಯಕ್ತಗೊಳಿಸುವದೆಂದೂ ಅವರು ತಿಳಿಸಿರುವರು. ಡಾಕ್ಟರ ಪ್ರಾಣನಾ
ಅವರು ಈ ಅವಶೇಷಗಳನ್ನು ಎದುರಿಗಿರಿಸಿಕೊಂಡು ಸ್ವತಂತ್ರವ
ಅಭ್ಯಾಸಮಾಡಿ ತಿಳಿಸಿರುವ ಮಾತು ಇನ್ನೂ ಮಹತ್ವದವಾಗಿವೆ. ಶಿವ-
ಯರ ಪೂಜೆಯು ಕಂಚಿನಯುಗಕ್ಕಿಂತ ಮೊದಲು ಎಂದರೆ ಕ್ರಿಸ್ತ ಶಕಕ್ಕ
ಪೂರ್ವದಲ್ಲಿ ೩೦೦೦ ವರುಷಗಳ ಹಿಂದೆಯೇ ಪ್ರಾರಂಭವಾಗಿತ್ತೆಂ
ಎಲ್ಲ ಪಂಥಗಳಲ್ಲಿ ಶೈವರ ಭಕ್ತಿ ಪಂಥವು ಅತಿ ಪುರಾತನ ಕಾಲದಿಂದ ನಡೆ
ಬಂದುದೆಂದೂ ಅವರ ಮತ. ಸರ್ ಜಾನ್ ಮಾರ್ಶಲ್ ಅವರಾ
ಡಾಕ್ಟರ ಪ್ರಾಣನಾಥ ಅವರಾಗಲಿ ಈ ಅವಶೇಷಗಳ ಬಹಿರಂಗ ಪರೀಕ್ಷೆ
ವಿಶೇಷ ಗಮನ ಕೊಟ್ಟಂತೆ ಕಾಣುತ್ತದೆ. ಆದರೆ ಫಾದರ ಹಿರಾಸ ಅವ
ಈ ಸಂಸ್ಕೃತಿಯ ಅಂತರಂಗ ಪರೀಕ್ಷಣೆ ಮಾಡಿ ತಿಳಿಸಿರುವ ಮಾತು
ಮಾನವ ಜನಾಂಗದ ಸಂಸ್ಕೃತಿಯ ಅಭ್ಯಾಸದಲ್ಲಿ ಹೊಸದೊಂದು ಕ್ರಾ
ಯನ್ನೇ ಒಡಮೂಡಿಸಿರುವವು. ಆರ್ಯರ ಸಂಸ್ಕೃತಿಯು ಅತಿ ಪ್ರಾಚೀ
ವಾದುದು ಎಂಬ ಭ್ರಮೆಯನ್ನು ದೂರಗೊಳಿಸಿರುವವು. ಅಲ್ಲಿ ರೂಢವಾ

ಸಂಸ್ಕೃತಿಯು ಅಚ್ಚ ದ್ರಾವಿಡರದು, ಅದು ಹೆಮಿಟಿಕೊ ಮೆಡಿಟರೇನಿಯನ್ ಜನಾಂಗಕ್ಕೆ ಸೇರಿದ್ದು, ಆರ್ಯರ ಸಂಸ್ಕೃತಿಗೆ ಎಷ್ಟೂ ಸಂಬಂಧವಿಲ್ಲದ್ದು– ಎಂದು ಅವರು ಉಲ್ಲೇಖಿಸಿದ್ದಾರೆ. ದ್ರವಿಡರು ಶುದ್ಧ ಶೈವರು. ಅವರ ಉಚ್ಚವಾದ ಧಾರ್ಮಿಕ ಕಲ್ಪನೆ, ಅಧ್ಯಾತ್ಮದೃಷ್ಟಿ, ಅನುಭಾವದ ನಿಲವು ಇವು ಅಗಾಧವಾದವುಗಳು. ತಮ್ಮ ಈ ಅಭಿಪ್ರಾಯವನ್ನು ಸಿದ್ಧಗೊಳಿಸುವಾಗ ಅವರು ಅಲ್ಲಲ್ಲಿ ಉದಾಹರಿಸಿದ ಆಗಿನ ಶಾಸನಗಳಲ್ಲಿಯ 'ಬಾನ್ ತೇರ್ ಒರ್ ಮೀನಕಣ್ ವೇಳ್' (ಒಬ್ಬ ಮೀನ ಕಣ್ಣಿನವನು ಬಾನನ್ನು ಮುಟ್ಟಿದ ಬಳಿಕ ಆನಂದವನ್ನು ಪಡೆಯಲಿ) ಈ ಬಗೆಯಾದ ಮಾತುಗಳು ಒಳ್ಳೆ ಮಹತ್ವವುಳ್ಳವಾಗಿವೆ. ಬಾನು ತೇರು ಒರ್ ಮೀನಕಣ್ ಇತ್ಯಾದಿಯಾದ ಪದಗಳು ಕನ್ನಡ ಭಾಷೆಗೆ—ಸಾಮಾನ್ಯವಾಗಿ ದ್ರಾವಿಡ ಭಾಷೆಗಳಿಗೆ ಪರಿಚಿತ ವಾದವುಗಳು. ಈ ಬಗೆಯಾದ ಅವತರಣಿಕೆಗಳಲ್ಲಿ ಬರುವ ಮೀನಕಣ್ಣಿ ನವರು — ಮೀನರು — ಯಾರು? ಆಗಸವನ್ನು ಮುಟ್ಟಿ ಆನಂದ ಪಡೆಯುವದು ಎಂದರೇನು? — ಇವನ್ನೆಲ್ಲ ಕುರಿತು ಆಲೋಚಿಸಬೇಕು. ಸಿಂಧೂ ನದಿಯ ಕೊಳ್ಳದ ಈ ಸಂಸ್ಕೃತಿಯಲ್ಲಿ ಸಿಗುವ ಆನ್ ಆನಿಲ್ ಅಮ್ಮಾ ಅತ್ತಮ್ ಈ ಪದಗಳ ಜೊತೆಗೆ ಮೀನಕಣ್ ಬಾನ ಬಳಿ ತೇರು ಈ ಪದಗಳನ್ನಿರಿಸಿ ಅರ್ಥೈಸಿದಾಗ ಇವುಗಳಲ್ಲಿ ಹುದುಗಿದ ಆಧ್ಯಾತ್ಮಿಕ ಸೌಂದರ್ಯವು ಒಳ್ಳೇ ಸ್ಪಷ್ಟವಾಗುವದು. ಮೀನಕಣ್ಣುಳ್ಳವರು ಅನಿಮಿಷ ದೃಷ್ಟಿಯನ್ನು ಪಡೆದ ಅಧ್ಯಾತ್ಮ ಯೋಗಿಗಳು; ಯೋಗ ಬಲದಿಂದ ಆಗಸದತ್ತ ಸಾರುವರು; ದಹರಾಕಾಶವನ್ನು ಸೇರುವರು; ಅಲ್ಲಿ ಅವರು ನಿತ್ಯ ತೃಪ್ತರಾಗಿ ಉಳಿಯುವರು – ಎಂಬುದನ್ನು ತಿಳಿದಾಗ ೫೦೦೦ ವರುಷಗಳ ಹಿಂದೆಯೂ ಯೋಗ ಶಾಸ್ತ್ರವು ಜನಮನವನ್ನು ಎನಿತೊಂದು ಸೆಳೆದ್ದಿತೆಂಬುದು ವ್ಯಕ್ತವಾಗುವದು. ಸಿಂಧೂ ನದಿಯ ಕೊಳ್ಳದಲ್ಲಿ ದೊರೆತ ಅವಶೇಷಗಳಲ್ಲಿ ಆಸನಬದ್ಧರಾಗಿ ನಿಟಿಲಭ್ರೂಮಧ್ಯದಿ ನೆಟ್ಟ ನೋಟವುಳ್ಳ ಯೋಗಿಗಳ ಪ್ರತಿಮೆಗಳು ದೊರೆತಿರುತ್ತವೆಂಬುದನ್ನು ನೆನಿಸಿದರೆ ಯೋಗಿಗಳ ಬಗೆಗೆ ಅತಿಶಯವಾದ ಆದರ ಭಾವವು ಆಗಿನ ಜನಸಾಮಾನ್ಯರಲ್ಲಿತ್ತೆಂಬುದು ವ್ಯಕ್ತವಾಗುವದು. ಯೋಗಿಗಳು ಪಡೆಯುವ ಈ ದಿವ್ಯದೃಷ್ಟಿಗೆ ಮೀನಕಣ್ ಎಂದು ಹೆಸರು.

ಮೀನದ ವಿಷಯುವಾಗಿ ಪ್ರತಿಯೊಂದು ದೇಶದವರೂ ಬಗೆಬಗೆಯಾ
ಆಲೋಚಿಸುವರು. ಭಾರತೀಯರು ಕಲ್ಪಿಸಿರುವ ವಿಷ್ಣುವಿನ ದಶಾವತಾ
ಗಳಲ್ಲಿ ಮತ್ಸ್ಯಾವತಾರವೆ ಮೊದಲಿನದು. ಪುರಾಣದ ಈ ಕಲ್ಪನೆಯನ್ನ
ಪ್ರಾಣಿಗಳ ಜೀವನದ ಇಲ್ಲವೆ ಮಾನವ ಬುದ್ಧಿಯ ವಿಕಾಸದ ಪರವಾ
ವಿವರಿಸುವರು. ಸುಪ್ರಸಿದ್ಧ ವಿಕಾಸವಾದಿಯಾದ ಡಾರ್ವಿನ್ನನ
ಮಾನವಾವ ತಾರ' (Decent of Man) ಎಂಬ ತನ್ನ ಉದ್ಗ್ರಂಥದ
ಮಂಗನಿಂದ ಮನುಷ್ಯನುಂಟಾದನೆಂದು ಹೇಳುತ್ತಾನೆ. ಆದರೆ ಅಮೇರಿಕೆ
ಡಾಕ್ಟರ ಟಿನ್‌ಲೆ ಎಂಬವನು ಈ ಸಿದ್ಧಾಂತವನ್ನು ಅಲ್ಲಗಳೆದು ಮೀನದಿಂ
ಮಾನವನುದಿಸಿದನೆಂದು ಪ್ರತಿಪಾದನೆ ಮಾಡಿದ್ದಾನೆ. ಮಾನವಾವತಾ
ಕಲ್ಪನೆಗೆ ಮತ್ಸ್ಯಾವತಾರವೇ ಮೊದಲು ಎಂಬ ಪೌರಾಣಿಕ ಕಲ್ಪನೆಯನ್ನ
ಈ ಮಾತು ಎತ್ತಿಹಿಡಿಯುತ್ತಿದೆಯಲ್ಲವೆ ?

ಪ್ರಾಣಶಾಸ್ತ್ರದ ವಿಚಾರವು ಏನೇ ಇರಲಿ ಮೀನ ಪ್ರಪಂಚ
ಮಥಿತಾರ್ಥವನ್ನು ಕಂಡಾಗ ಇದರಿಂದ ಎರಡು ತತ್ವಗಳು ಮಾತ್ರ ಎದುರಿ
ಸಿಲ್ಲುತ್ತವೆ. ಸಮುದ್ರದಲ್ಲಿ ಸಣ್ಣ ಮೀನವನ್ನು ತಿಂದು ದೊಡ್ಡ ಮೀನುಗ
ಬದುಕುತ್ತವೆ. ದೊಡ್ಡ ಮೀನುಗಳನ್ನು ತಿಂದು ಬದುಕುವ ಇನ್ನೂ ಕೆಲವ
ಜಲಚರಗಳೂ ಇರುತ್ತವೆ. ಇದರಿಂದ ಬಲವುಳ್ಳವನೇ ಬಾಳುವನು ಎಂಬ
ಸಿದ್ಧಾಂತವು ಹೊರಡುತ್ತದೆ – ಎಂದು ಪಾಶ್ಚಿಮಾತ್ಯರ ಮತ. ಆದರೆ
ಈ ಸಿದ್ಧಾಂತವು ಸಂಪೂರ್ಣ ಸತ್ಯವಲ್ಲ; ಏಕಪಕ್ಷೀಯವಾದುದು. ಯಾಕಂದರೆ
ಮೀನುಗಳು ಮೀನುಗಳನ್ನು ತಿಂದುಕೊಂಡೇ ಬದುಕ ಬೇಕೆಂದಿದ್ದರೆ ಮೀನಗಳ
ಉಳಿಯ ಬಾರದಾಗಿತ್ತು. ಆ ಮೀನಗಳು ಇನ್ನೂ ಇದ್ದೇ ಇರುತ್ತವೆ.
ಆದುದರಿಂದ ಬಲವುಳ್ಳವನೇ ಬಾಳುವನು ಎಂಬ ಈ ಸಿದ್ಧಾಂತವು
ಆತ್ಯಂತಿಕವಲ್ಲ. ಮೀನದ ವಿವೇಚನೆಯಿಂದ ಇನ್ನೊಂದು ಸ್ವರೂಪವು
ವ್ಯಕ್ತವಾಗುವದು ಹೀಗೆ: ನೀರಿನಲ್ಲಿಯ ಮೀನವು ತತ್ತಿಯನ್ನಿರಿಸಿ ಗಾಢವಾದ
ಪ್ರೇಮದಿಂದ ಅದನ್ನು ನೋಡುವದು, ಆಗ ಅದರೊಳಗಿಂದ ಮರಿಗಳು
ಹೊರಬೀಳುವವು ಎಂದು ಹೇಳುತ್ತಾರೆ. ಮೀನಗಳ ಉತ್ಪತ್ತಿಯ ಬಗೆಗೆ ಪ್ರಾಣಿ
ಶಾಸ್ತ್ರಜ್ಞರ ಅಭಿಪ್ರಾಯವು ಯಾವುದಿದ್ದರೂ ಒಂದು ತತ್ವವು ಮಾತ್ರ ಸ್ಪಷ್ಟ
ವಾಗುವದು. ತಾಯಿಯು ಕಟ್ಟೆಳ್ಳರದಿಂದ ಕಂಡಾಗ ತತ್ತಿಯೊಡೆದು ಮೀನದ

ಮರಿಯು ಹೊರಗೆ ಬರುವದೆಂಬ ಮಾತಿನಲ್ಲಿ ತಾಯಿಯ ಪ್ರೇಮ ದೃಷ್ಟಿಯೇ ಜೀವನಾಧಾರ. ಪ್ರಪಂಚಕ್ಕೆ ಬಲವೇ ಮೂಲವಲ್ಲ. ಒಲವು ಮೂಲ ವಾದುದು. ಒಲವು ಪ್ರಪಂಚದ ಜೀವಾಳ. ಬಲವು ಜೀವನವನ್ನು ಅಂಪಗೆಡಿಸಿ ಬಿಟ್ಟರೆ ಒಲವು ಅದನ್ನು ಕೊನರಿಸಿ ಅಂದಗೊಳಿಸುವದು. ನಿರತಿಶಯವಾದ ಈ ಪ್ರೇಮದಲ್ಲಿ ವಿಶ್ವ ಜೀವನದ ಸಾಮರಸ್ಯವೂ ಇದೆ! ಎಂಬುದು ಸ್ಪಷ್ಟವಾಗುತ್ತದೆ. ಈ ಪ್ರೇಮದೃಷ್ಟಿಗೆ ಈ ಕಡುನೇಹದ ನೋಟಕ್ಕೆ ಅನಿಮಿಷ ದೃಷ್ಟಿ, ಮೀನಕಣ್ ಎಂದು ಹೆಸರು. ಈ ಹಿಂದೆ ತಿಳಿಸಿದಂತೆ ನಿರ್ನಿಮಿಷ ದೃಷ್ಟಿಯನ್ನು ಸಂಪಾದಿಸಿಕೊಂಡು ವಿಶ್ವಜೀವನದ ಸಮರಸದ ಸಕೀಲವನ್ನರಿತ ಸದ್ಗುರುವು ನೋಟ ಮಾತ್ರದಿಂದ ಶಿಷ್ಯೋತ್ತಮನಿಗೆ ಕಾರುಣ್ಯವನ್ನು ನೀಡಿ ಶಕ್ತಿಪಾತವನ್ನು ಮಾಡಿ ಸಮರಸವನ್ನೂಡ ಬಲ್ಲನು. ಇದರಿಂದ ಈ ಮೀನಕಣ್ಣಿನ ಮಹಿಮೆಯು ಅತ್ಯಂತ ಪ್ರಭಾವಶಾಲಿ ಯಾಗಿಹುದೆಂಬ ಸೌಂದರ್ಯಯುಕ್ತವಾದ ಸತ್ಯವು ಸ್ಫುಟವಾಗುವದು.

ಶೈವರ ಸಂಸ್ಕೃತಿಯು ವೀರಶೈವರ ಸಂಸ್ಕೃತಿಗೆ ಹಿನ್ನೆಲೆಯಾಗಿರುತ್ತದೆ. ಅದರಿಂದ ೫೦೦೦ ವರುಷಗಳಿಂದಲೂ ಸಾಗಿ ಬಂದ ಮೀನಕಣ್ಣಿನ ಸಂಸ್ಕೃತಿ ಅನುಭಾವವನ್ನು ಅಂಗವಿಸಿಕೊಳ್ಳಲು ವೀರಶೈವರಿಗೆ ಸುಲಭವೆನಿಸುತ್ತದೆ. ೧೨ ನೆಯ ಶತಮಾನದಲ್ಲಿ ಶಿವಶರಣರು, ವಿಶೇಷವಾಗಿ ಅಲ್ಲಮ ಪ್ರಭುದೇವರು ಈ ಮೀನಕಣ್ಣಿನ ಮಹತ್ವವನ್ನರಿತು ಯೋಗದ ನಿಲವನ್ನಂಗವಿಸಿಕೊಳ್ಳಲು ಅನೇಕ ವಿಧವಾಗಿ ಯತ್ನಿಸಿದ್ದರು. ಆ ಕಾಲಕ್ಕೆ ಶೈವ ಪರಂಪರೆಯ ಸಿದ್ಧ ನಾಥರ ಪಂಥಗಳೂ ಈ ಕಾರ್ಯದಲ್ಲಿ ಒಳ್ಳೇ ಮುಂದುವರಿದಿದ್ದುವೆಂದು ತಿಳಿದು ಬರುತ್ತದೆ. ನಾಥರ ಪರಂಪರೆಯಲ್ಲಿ ಮತ್ಸ್ಯೇಂದ್ರನಾಥನು ಬಹು ಪ್ರಮುಖ ನಾದವನು. ಅಲ್ಲಮ ಪ್ರಭುದೇವರಿಗೆ ಅನಿಮಿಷಯ್ಯನು ಗುರುವೆಂದು ವೀರಶೈವರಲ್ಲಿ ಪ್ರತೀತಿಯಿದೆ. ಅಲ್ಲಮ ಪ್ರಭುದೇವರು ಮೇಲಿನ ತರಗತಿಯ ಒಬ್ಬ ಹಠಯೋಗಿಯಾಗಿದ್ದರೆಂದು ಹಠಯೋಗ ಪ್ರದೀಪಿಕೆಯಲ್ಲಿ ಹೇಳಿರುತ್ತದೆ. ಮತ್ಸ್ಯೇಂದ್ರ ಅನಿಮಿಷಯ್ಯ ಇವುಗಳಲ್ಲಿ ಅರ್ಥಸಾಮ್ಯವಿರು ವದರಿಂದ ಇವೆರಡೂ ಹೆಸರು ಒಬ್ಬ ವ್ಯಕ್ತಿಗೆ ಅನ್ವಯಿಸುತ್ತಿವೆಯೆ? ಇದಕ್ಕೆ ಇನ್ನೂ ಆಳವಾದ ಅಭ್ಯಾಸ ಬೇಕು. ಯೋಗಾನುಭವದಿಂದ ಅಲ್ಲಮಪ್ರಭು

ದೇವರು ಪ್ರ್ಯೇಮಕಾಯಸಿದ್ಧಿಯನ್ನು ಂಟು ಮಾಡಿಕೊಂಡಿದ್ದರೆಂದು ವೀರಶೈವರ ಗ್ರಂಥಗಳಿಂದ ಗೊತ್ತಾಗುತ್ತದೆ. ಮತ್ತು ನಾಥಪರಂಪರೆಗೆ ಸೇರಿದ ವಜ್ರಶರೀರಿಯಾದ ಗೋರಕ್ಷನೊಡನೆ ಯೋಗಶಕ್ತಿಯ ಪರೀಕ್ಷೆಗೆ ನಿಂತಾಗ ತನ್ನ ಬಯಲೊಡಲಿನ ಪ್ರಭಾವದಿಂದ ಗೋರಕ್ಷನನ್ನು ಗೆದ್ದು ಅವನಿಗೆ ತನ್ನ ಅನುಭವ ರಹಸ್ಯವನ್ನು ನೀಡಿದನೆಂದೂ ಆ ಗ್ರಂಥಗಳಿಂದ ತಿಳಿಯುತ್ತದೆ. ಮತ್ಸ್ಯೇಂದ್ರನಾಥ ಅನಿಮಿಷಯ್ಯ ಮತ್ತು ಗೋರಕ್ಷ ಇವರ ಐತಿಹ್ಯದಲ್ಲಿ ಸಂಶೋಧನೆಯಾಗಬೇಕಾಗಿದೆ. ಆದರೆ ಅಲ್ಲಮಪ್ರಭುವಿನ ಚರಿತ್ರೆಯ ಬಗೆಗೆ ಭಿನ್ನಾಭಿಪ್ರಾಯವು ಇದ್ದಂತೆ ತೋರುವದಿಲ್ಲ. ಈ ಇತಿಹಾಸದ ಅಂಶವನ್ನು ತುಸು ಬದಿಗಿರಿಸಿ ತಾತ್ವಿಕ ದೃಷ್ಟಿಯಿಂದ ಪ್ರಭುದೇವರ ಜೀವನಕ್ಕಿರುವ ಘನತೆಯನ್ನು ಅಳೆದರೆ ಅನಿಮಿಷಯೋಗದಿಂದ (ಮೀನಕಣ್ಣಿನಿಂದ) ಅವರಿಗೆ ಉಂಟಾಗಿದ್ದ ಅಧ್ಯಾತ್ಮಿಕದ ನಿಲವು ಅನ್ವಾಯ್ಯವಾಗಿತ್ತೆಂದು ಹೇಳಬಹುದು. ಪ್ರಭುಲಿಂಗ ಲೀಲೆಯಲ್ಲಿ ಇಲ್ಲವೆ ಶೂನ್ಯಸಂಪಾದನೆಯಲ್ಲಿ ಕಾಣುವ ಅನಿಮಿಷಯ್ಯನ ವರ್ಣನೆಯು ಕೇವಲ ಒಂದು ಮಿಗಿಲಾದ ಯೋಗರಹಸ್ಯವನ್ನೇ ತೆರೆದಿದೆ ಎಂದು ಹೇಳಬಹುದು.

"ಅಂತರಂಗದೊಳು ಗುರುಭಾವ ತಲೆದೋರುತ್ತಿರ್ದ ಅಲ್ಲಮಪ್ರಭುದೇವರು ತಮ್ಮ ಮೂಲಜ್ಞಾನದಿಂದ ಅನಿಮಿಷದೇವರ ಸಮಾಧಿಯಂ ಕಂಡು, ಒಳಪೊಕ್ಕು ನೋಳ್ಪಾಗಳು, ಒಂದು ದೀಪ್ತಿ ಬೆಳಗುತ್ತಿರೆ ಕಂಡು ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ಕರಸ್ಥಲದೊಳು ಅಮೃತ ಲಿಂಗಮಂ ಪಿಡಿದು ಆ ಲಿಂಗದೊಳು ಆಲಿಂಗನವಾಗಿ, ಕರಣಂಗಳೆಲ್ಲ ನಿಃಕರಣವನ್ನೈದಿ, ಭಾವ ನಿರ್ಭಾವದೊಳ್ನಿಂದು, ನೋಟ ನಟ್ಟು, ದೃಷ್ಟಿ ನೈಷ್ಠಿಸಿ, ಎವೆ ಹಳಚದ ಅರಿವು ಕರಿಗೊಂಡು, ತಾನೆಂಬುದು ತರಹರವಾಗಿ, ನೀನೆಂಬುದು ನಿಃಪತ್ತಿಯಾಗಿ, ಉಭಯ ಸಂದು ಅಡಗಿ, ಸ್ವಯವಾಗಿ ಮನೋಲಯ ಸ್ಥಾನದೊಳು ಸರ್ವಚೈತನ್ಯಮನ್ನೈದಿ, ತನು ಪರಮ ಕಾಷ್ಟಯೊಳು ಪರವಾಗಿ ತನ್ನ ನಿಜಸಮಾಧಿಯೊಳು ಮೂರ್ತಿಗೊಂಡಿರ್ಪ ಆ ಸದ್ಗುರುವ ಕಂಡು...." ಶೂನ್ಯಸಂಪಾದನೆಯ ಈ ಮಾತುಗಳಲ್ಲಿ (ಅನಿಮಿಷ ದೃಷ್ಟಿಯ ಮೀನಕಣ್ಣಿನ ನಿಲವು ವ್ಯಕ್ತವಾಗುವದಲ್ಲದೆ ವೀರಶೈವರು ಕಂಡ ಕರಸ್ಥಲ

ಲಿಂಗವಿಡಿದು ಸಂಪಾದಿಸಿದ ಶಿವಯೋಗದ ರಹಸ್ಯವೂ ವಿದಿತವಾಗುವದು.

ಅಲ್ಲಮ ಪ್ರಭುವು ಅನನ್ಯವಾದ ಯೋಗಸಾಮರ್ಥ್ಯದಿಂದ ಅನುಪಮವಾದ ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ಸಮ್ಯಕ್‌ದೃಷ್ಟಿಯನ್ನು ಪಡೆದು ಭಾವದ ಆಳದಲ್ಲಿ ಮೂಡಿ ಮುಳುಗುತ್ತಿರುವ, ಏಳಿಳಿಯುತ್ತಿರುವ ವೃತ್ತಿಯ ಕವಲುಗಳನ್ನು ಅಮೃತಲಿಂಗದ ಅವಿರಳವಾದ ನೋಟದಿಂದ ಪರಿಹರಿಸಿಕೊಂಡು, ವೃತ್ತಿಗಳ ಒತ್ತಡ – ವ್ಯತ್ಯಾಸಗಳಿಂದೊದಗುವ ವಿಷಮತೆಯನ್ನು ನಿವಾರಿಸಿಕೊಂಡು ನಿಃಶಬ್ದ ನೀರವವಾದ ಭಾವಗಭೀರತೆಯನ್ನಳವಡಿಸಿಕೊಂಡಿದ್ದನು; ಆತ್ಮಸೂರ್ಯನ ತೇಜದಿಂದ ಪ್ರಭವಿಸುವ ವಿದ್ಯುತ್ ಪ್ರಭೆಯನ್ನು ಪರ್ಯಟನಕಾಲಕ್ಕೆ ತನ್ನ ಕವಿಯಲ್ಲಿ ಬಂದ ಸದ್‌ಭಕ್ತರಲ್ಲಿ ಹರಿಬಿಟ್ಟಿದ್ದನು; ಸಮತೆಯ ಸೊಬಗನ್ನು ಪ್ರಕಟಗೊಳಿಸಿ ಸಾಮರಸ್ಯದ ನಿಲವನ್ನು ನಿಲಿಸಿದ್ದನು; ಅವನು ಪಡೆದು ಕೊಂಡಿದ್ದ ಮೀನಕಣ್ಣಿನ ನಿಲವಿನಲ್ಲಿ ಅಂಥದೊಂದು ಪ್ರಭಾವವಿತ್ತು; ಅಂಥದೊಂದು ಪ್ರತಿಭೆಯಿತ್ತು. — ಎಂದು ಇದರಿಂದ ಸ್ಪಷ್ಟವಾಗುವದು. ಅನಿಮಿಷ ದೃಷ್ಟಿಗೆ ಪ್ರಾತಿಭಚಕ್ಷುಸ್ ಎಂದು ಪರ್ಯಾಯ ನಾಮವುಂಟು. ಪ್ರತಿಭೆಯು ಪ್ರತಿಕ್ಷಣಕ್ಕೂ ಹೊಚ್ಚಹೊಸತು; ಅಂತೆಯೇ ಅದಕ್ಕೆ ನವನವೋನ್ಮೇಷಶಾಲಿನಿ ಎಂದು ಹೆಸರು. ಈ ಪ್ರತಿಭೆಯ ಅಂಶವು ಬೇರೆ ಬೇರೆ ವ್ಯಕ್ತಿಗಳಲ್ಲಿ ಭಿನ್ನಭಿನ್ನವಾಗಿ ಪ್ರಕಟವಾಗುವದು. ಕವಿಯಲ್ಲಿ, ವಾಗ್ಮಿಯಲ್ಲಿ, ಗಾಯಕನಲ್ಲಿ, ಶಿಲ್ಪಿಯಲ್ಲಿ, ಚಿತ್ರಗಾರನಲ್ಲಿ, ಜ್ಞಾನಿಯಲ್ಲಿ, ವಿಜ್ಞಾನಿಯಲ್ಲಿ, ತತ್ವವೇತ್ತಿಯಲ್ಲಿ, ಭಕ್ತನಲ್ಲಿ, ಅನುಭಾವಿಯಲ್ಲಿ ಅವರವರ ಸ್ವಭಾವ ಧರ್ಮಗಳಿಗನುಸಾರವಾಗಿ ಆ ಪ್ರತಿಭೆಯು ಬಗೆಬಗೆಯಾಗಿ ಹೊರಹೊಮ್ಮುವದು. ಸೃಷ್ಟಿಯ ಸೌಂದರ್ಯವೂ ಅದನ್ನು ಕಾಣುವ ದೃಷ್ಟಿಯ ಸೌಂದರ್ಯವೂ ಬೆರೆತು ವ್ಯಕ್ತಿ-ವಿಶ್ವಗಳ ಜೀವನ ಸಾಮರಸ್ಯವು ರೂಪು ಗೊಳ್ಳಬೇಕು. ಇದಕ್ಕಾಗಿ ಈ ಪ್ರತಿಭೆಯು ಕವಿಯಲ್ಲಿ ರಸವತ್ ಕಾವ್ಯರೂಪವಾಗಿ ಹೊರಹೊಮ್ಮುವದು: ವಾಗ್ಮಿಯಲ್ಲಿ ಓತಪ್ರೋತವಾಗಿ ಮೂಡುವ ವಾಕ್‌ಲಹರಿಯಾಗಿ ಪ್ರಸಾದವಾಣಿಯಾಗಿ ತೇಲಾಡುವದು; ಗಾಯಕನಲ್ಲಿ ನಾದಬ್ರಹ್ಮವಾಗಿ ನಲಿದಾಡುವದು; ಶಿಲ್ಪಿಯಲ್ಲಿ ಅವನ ಕೈಚಳಕದ ಚಾತುರ್ಯದಿಂದ ಕಲ್ಲಿನಲ್ಲಿ ಜೀವ ಕಳೆಯು ಮೂಡುವದು; ಚಿತ್ರಕಾರನಲ್ಲಿ ಮುಗಿಲಿನ

ಬಣ್ಣಗಳ ಮುಖಾಂತರ ಸೌಂದರ್ಯ ಸಿದ್ಧಿಯನ್ನು ತೋರುವದು; ಜ್ಞಾನಿಯಲ್ಲಿ ಅಲುಗಾಡದ ನಿರತಿಶಯ ಪ್ರಶಾಂತಭಾವದಲ್ಲಿ ಅಡಕಗೊಳ್ಳುವದು; ವಿಜ್ಞಾನಿಯಲ್ಲಿ ಪ್ರಯೋಗಮುಖದಲ್ಲಿ ಪ್ರಾದುರ್ಭವಿಸುವದು; ತತ್ವವೇತ್ತಿಯಲ್ಲಿ ತರ್ಕಶಕ್ತಿಯ ಮುಖಾಂತರ ಕಾರ್ಯಗೆಯ್ಯುವದು; ಭಕ್ತನಲ್ಲಿ ಜೀವದೇವರ ಅಚಿಂತ್ಯವಾದ ಪ್ರೇಮಭಾವದಲ್ಲಿ ಒಡಮೂಡುವದು; ಮತ್ತು ಅನುಭಾವಿಯಲ್ಲಿ ಮಾತುಮನಂಗಳಿಗೆ ನಿಲುಕದ ಅಚ್ಚ ಅನುಭವ ಸಾಮರಸ್ಯದಲ್ಲಿ ವಿಶ್ರಾಂತಿಯನ್ನೈದುವದು. ಇವರೆಲ್ಲರಲ್ಲಿ ಸ್ವಲ್ಪಾಂಶದಿಂದ ತೋರುವ ಪ್ರತಿಭೆಯು ಪ್ರಭುವಿನಲ್ಲಿ (ವಿಭೂತಿಯಲ್ಲಿ, ಪರಮಗುರುವಿನಲ್ಲಿ, ಅನಿಮಿಷಯ್ಯನಲ್ಲಿ) ಸಮಗ್ರವಾಗಿ ಸೂಸುವದು. ಒತ್ತಡ ವ್ಯತ್ಯಾಸವಿಲ್ಲದ ಮೂಲಕ ಅವನ ಪ್ರಾತಿಭಚಕ್ಷುವಿನಲ್ಲಿ (ಆ ಅನಿಮಿಷ ದೃಷ್ಟಿಯಲ್ಲಿ) ಕಲ್ಪಕವೃತ್ತಿಯೂ ಕರ್ತೃತ್ವಶಕ್ತಿಯೂ ಸಮವಾಗಿ ಸೇರಿಕೊಳ್ಳುವವು. ಅಲ್ಲಿ ಕಲ್ಪನೆಯೇ ಕಾರ್ಯ, ಕಲ್ಪನೆ ಕಾರ್ಯಗಳಲ್ಲಿ ಅವಾಂತರ ಅಭ್ಯಂತರಗಳಿಲ್ಲ. ನೋಟಮಾಟಗಳಲ್ಲಿ ಬೇಟವಿಲ್ಲ. ಅಲ್ಲಿ ನೋಟವೆ ಮಾಟವಾಗಿ ಪರಿಣಮಿಸುವದು. ಜ್ಞಾನವೆ ಕ್ರಿಯೆಯಾಗಿ ಕಂಗೊಳಿಸವದು. ಅನಿಮಿಷದೃಷ್ಟಿಗೆ ಸೃಷ್ಟಿಯಲ್ಲಿ ಜರುಗುವ ಸಕಲ ಘಟನೆಗಳನ್ನು ಅರಿಯುವ ಕಲ್ಪಕವೃತ್ತಿಯು ಅಳವಟ್ಟಿರುವುದಲ್ಲದೆ ಆ ಘಟನೆಗಳ ಓಟವನ್ನರಿತು ಕಾರ್ಯಗೆಯ್ಯುವ ಕರ್ತೃತ್ವಶಕ್ತಿಯೂ ಅಂಗವಿಸಿರುವದು. ಇಂಥ ಅನಿಮಿಷದೃಷ್ಟಿ ಸಂಪಾದಕನು ಕುರುಹುವಿಡಿದು ಕಾರ್ಯಗೆಯ್ಯುವ ಕಲಾಕೋವಿದನು. ತನ್ನಲ್ಲಿ ವಿಶ್ವವನ್ನು ವಿಶ್ವದಲ್ಲಿ ತನ್ನನ್ನು ಕಂಡುಕೊಂಡು ವಿಶ್ವಸಮರಸಿಯಾಗಬಲ್ಲ ಪ್ರತಿಭಾನ್ವಿತನು. ಅವನಲ್ಲಿರುವದು ಬರಿಯ ಲಲಿತಕಳೆಯಲ್ಲ, ದಿವ್ಯವಾದ ಭವ್ಯವಾದ ಕಳೆ. ಇದುವೆ ಆ ಮೀನಕಣ್ಣಿನಿಂದ ದೊರೆವ ಅಪಾರವಾದ ಪ್ರತಿಫಲ.

---

# ಎರಡು ಕೋಟಿ

ಅಸತೋ ಮಾ ಸದ್ಗಮಯ |
ತಮಸೋ ಮಾ ಜ್ಯೋತಿರ್ಗಮಯ |
ಮೃತ್ಯೋರ್ಮಾ ಅಮೃತಂ ಗಮಯ ||

ಅಸತ್ಯದಿಂದ ಸತ್ಯದೆಡೆಗೆ, ಕತ್ತಲೆಯಿಂದ ಜ್ಯೋತಿಯ ಕಡೆಗೆ, ಮರಣದಿಂದ ಅಮೃತತ್ವದ ಬಳಿಗೆ ನಡೆಯಿಸೈ—ಎಂದು ಪುರಾತನ ಋಷಿಗಳು ದೇವರನ್ನು ಕುರಿತು ಪ್ರಾರ್ಥಿಸಿದರು. ಪ್ರಾರ್ಥನೆಯೆಂದರೆ ಬೇಡಿಕೆ. ಆದರೆ ಬರಿಯ ಬೇಡಿಕೆಯು ಪ್ರಾರ್ಥನೆಯಾಗಲಾರದು. ಪ್ರಬಲವಾದ ಭಾವಪೂರ್ಣ ಬೇಡಿಕೆಯೇ ಪ್ರಾರ್ಥನೆ. ಪ್ರಾರ್ಥನೆಯು ಬುದ್ಧಿಯ ಪ್ರದರ್ಶನವಲ್ಲ; ಆದರೆ ಭಾವನೆಯ ಸಮರ್ಥನೆ. ತೀವ್ರವಾದ ಭಾವನಾ ಶಕ್ತಿಗೆ ತೀವ್ರವಾದ ಫಲ: ಇದೇನೊ ನಿಸರ್ಗದ ನಿಯಮ. ಭಾವಕರು ಅಥವಾ ಭಕ್ತರು ತಮ್ಮ ತೀವ್ರವಾದ ತೀಕ್ಷ್ಣವಾದ ಭಾವನಾಶಕ್ತಿಯ ಬಲದಿಂದ ಬುದ್ಧಿಗೆ ನಿಲುಕದ ಅದೆಷ್ಟೋ ಸಮಸ್ಯೆಗಳನ್ನು ಬಿಡಿಸಿರುವರು; ನಿಸರ್ಗದ ಒಡಲೊಳಗಡಗಿದ ಅದೆಷ್ಟೋ ರಹಸ್ಯಗಳನ್ನು ಹುಡುಕಿರುವರು; ಮಾನವನ ಪಿಂಡದೊಳಗೆ ಹುದುಗಿದ ಅದೆಷ್ಟೋ ಶಕ್ತಿಗಳ ನೆಲೆಕಲೆಗಳನ್ನು ನಿರ್ಧರಿಸಿರುವರು. ಈ ಪ್ರಾರ್ಥನೆಯು ಕೇವಲ ಸ್ತುತಿರೂಪದಿಂದಲೇ ಇರಬೇಕಾಗಿಲ್ಲ; ಭಾವಭರಿತ ಜ್ಞಾನಪೂರ್ಣ ಇಚ್ಛೆಯೇ ಪ್ರಾರ್ಥನೆಯು. ಇಂತಹ ಇಚ್ಛಾಪ್ರಾಬಲ್ಯದಿಂದ ಯೋಗಿಗಳು ಅನೇಕ ಪವಾಡಗಳನ್ನು ಮೆರೆಸಿರುವರು. ಪ್ರಾರ್ಥನೆಯು ಪ್ರಬಲವಾದ ಭಾವಪೂರ್ಣ ಬೇಡಿಕೆ ಯಾದರೆ ಬೇಡುವದು ಏನನ್ನು ? ವ್ಯಕ್ತಿಗಳ ರಾಜಸ ಇಲ್ಲವೆ ತಾಮಸ ತೃಪ್ತಿಯನ್ನಲ್ಲ, ಸಾತ್ವಿಕ ಶಕ್ತಿಗಳ ವಿಕಸನವನ್ನು ! ಸಾಮಾನ್ಯವಾಗಿ ಲೋಕದಲ್ಲಿ ಕಾಣಿಸಿಕೊಳ್ಳುವ ಪ್ರಾರ್ಥನೆಯು ರಾಜಸ - ತಾಮಸ ವೃತ್ತಿಗಳ ತೃಪ್ತಿಗಾಗಿ ಇರುತ್ತದೆ. ಅದು ನಿಜವಾದ ಪ್ರಾರ್ಥನೆಯಲ್ಲ ! ಸಾತ್ವಿಕ ಶಕ್ತಿಗಳ ವಿಕಸನಕ್ಕಾಗಿ, ಪ್ರಾತಿಭಚಕ್ಷುವಿನ ಉನ್ಮೀಲನಕ್ಕಾಗಿ ಹಂಬಲಿಸಿ ಹಲುಬಿದರೆ ಅದುವೆ ಹದುಳ, ಅದುವೆ ಪ್ರಾರ್ಥನೆ. ಹಾಗಾದರೆ ಬೇಡುವದು ಯಾರನ್ನು ?

ದೇವನನ್ನು ! ಬೇಡಿದುದನ್ನು ನೀಡುವ ಸಾಮರ್ಥ್ಯವುಳ್ಳ ಶಕ್ತಿಗೇ ದೇವ ಎಂದು ಹೆಸರು. ಕಾಡಿ ಬೇಡಿದರೂ ಮಾನವ ನೀಡಲಾರನು. ಆದರೆ ಬೇಡುವ ಮೊದಲೆ ಮಾನವನಿಗೆ ಬೇಕಾದ ಅನುಕೂಲತೆಗಳನ್ನು ದೇವನು ನೀಡಿರುವನಲ್ಲ! ಅಹಹಾ, ದೇವನು ಎಂತಹ ದಾನಿ ! ಅನುಭಾವಿಗಳು ಅವನನ್ನು ಮಹಾದಾನಿ ಎಂದು ಕೊಂಡಾಡಿರುವರು. ದೇವನು ಮಹಾದಾನಿಯಾಗಿರು ವಂತೆ ನ್ಯಾಯನಿಷ್ಠುರನೂ ಆಗಿರುವನು. ಅವನ ದಾನದಲ್ಲಿ ಉಚ್ಛೃಂಖಲ ವೃತ್ತಿಯು ಕಂಡುಬಾರದು. 'ಕಾಲನ ಗಂಡನೂ ಕರ್ಮದ ಮಿಂಡನೂ' ಆದ ದೇವನು ಕಾಲಕರ್ಮದ ಕಟ್ಟಳೆಗನುಸರಿಸಿ ಸೃಷ್ಟಿಯನ್ನು ನಡೆಸುವನು; ಅವರವರ ಕರ್ತೃತ್ವಶಕ್ತಿ ಕಲ್ಪಕವೃತ್ತಿ ಇವುಗಳಿಗನುಗುಣವಾಗಿ ಜೀವರಿಗೆ ನ್ಯಾಯದಾನ ಮಾಡುವನು. ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಒಂದು ಕಾಣಿಯ ಸೋಲದೆ ಒಂದು ಕಾಣಿಯ ಗೆಲ್ಲದೆ ತೂಕಕ್ಕೆ ಸಮತೂಕವಾಗಿ ಕಾರ್ಯಕ್ಕೆ ತಕ್ಕ ಫಲ ದೊರೆಯುವಂತೆ ನೋಡಿಕೊಳ್ಳುವನು. ಸಾತ್ವಿಕ ಶಕ್ತಿಗಳ ವಿಕಸನಕ್ಕಾಗಿ, ಸದ್ಗುಣ ಸಂಪತ್ತಿಗಾಗಿ ಮಹಾದಾನಿಯಾದ, ಆದರೂ ನ್ಯಾಯನಿಷ್ಠುರನಾದ ದೇವನನ್ನು ಕುರಿತು ಶ್ರೀ ನಿಜಗುಣಶಿವ ಯೋಗಿಗಳು ಸುಂದರವಾದ ಸುಬೋಧಪರವಾದ- ಪ್ರಾರ್ಥನೆಯೊಂದನ್ನು ಗೈದಿರುವರು. ಅದರ ಕೊನೆಯಲ್ಲಿ 'ನಿಮ್ಮಡಿಯ ಭಕ್ತಿಯನು' ನೀಡೆಂದು ಬೇಡಿರುವರು. ಕಷ್ಟ ಕಾಲದಲ್ಲಿ ಅಡ್ಡಿ ಆತಂಕಗಳು ಒಡ್ಡಿದಾಗ ಮಾನವನು ಎದೆಗುಂದುವನು; ಸಿರಿವಂತಿಕೆಯ ಸಮಯದಲ್ಲಿ ದುಡ್ಡಿನ ಮದದಿಂದ ಕೊಬ್ಬುವನು; ಯೌವ್ವನ ಕಾಲದಲ್ಲಿ ವಿಕಾರಕ್ಕೆ ಒಳಗಾಗುವನು; ಧ್ಯೇಯ ಸಾಧನೆಗಾಗಿ ಹೋರಾಡುವಾಗ ನಿಷ್ಠೆಗೆಡುವನು. ಹೀಗಾಗುವದು ಸಹಜ ವೆಂದೂ, ಸ್ವಾಭಾವಿಕವೆಂದೂ ನಾವು ಸಾಧಿಸುವೆವು; ಮನಸ್ಸಿಗೆ ಸಮಾಧಾನ ವನ್ನು ಹಚ್ಚಿಕೊಳ್ಳುವೆವು. ಯಾವುದಕ್ಕೆ ನಾವು ಮಾನವ ಪ್ರಕೃತಿಯ ಸಹಜಧರ್ಮವೆಂದೂ ಸ್ವಭಾವವೆಂದೂ ಸಂಬೋಧಿಸುವೆವೊ ಅದು ಮಲಾವರಣ ಅಥವಾ ತಮಸ್ ಅಲ್ಲದೆ ಮತ್ತೇನು ಅಲ್ಲ. ವಿಜ್ಞಾನದಲ್ಲಿ ಅದಕ್ಕೆ Inertia ಎಂದೆನ್ನುವರು. ನಾವು ಪ್ರಕೃತಿಗತವಾದ ಈ ತಮಸ್ಸನ್ನು ಪುರುಷ ಪ್ರಯತ್ನದಿಂದ, ಬುದ್ಧಿಯ ಬಲದಿಂದ ಗೆಲ್ಲಬೇಕು. ಈ ಗೆಲವಿಗಾಗಿ ದೇವನ ನೆರವು, ಅವನ ಕರುಣೆ ಇವು ಅವಶ್ಯವಾಗಿ ಬೇಕು.

ಅದಕ್ಕಾಗಿ ನಾವು ಅವನನ್ನು ಪ್ರಾರ್ಥಿಸುವದು ! ಮಾನವನ ಅಧಃಪ್ರವೃತ್ತಿ ಊರ್ಧ್ವಪ್ರವೃತ್ತಿ ಇವೆರಡರಲ್ಲಿ ಒಂದು ಬಗೆಯ ಹೋರಾಟವೇ ಪ್ರಾರಂಭ ವಾಗುವದು. ತಮೋಗುಣ ಪ್ರಧಾನವಾದ ಸಹಜ ಪ್ರವೃತ್ತಿಗಳಿಗೂ ರಜೋಗುಣ ಪ್ರಧಾನವಾದ ಬುದ್ಧಿಗೂ ಕಲಹವೇಳುವದು. ಸಾಕ್ಷಾತ್ಕಾ ರಕ್ಕಾಗಿ ಹಂಬಲಿಸುವ ಸಾಧಕನ ಆಂತರಿಕ ಜೀವನವು ಆರಂಭದಲ್ಲಿ ಇಂತಹ ಕಲಹದ ಕುಳಿಯೇ ಆಗಿರುವದು. ಈ ಕಲಹವನ್ನು ಕಳೆಯನ್ನಾಗಿ ಮಾರ್ಪಡಿಸಲು ದೇವನ ಕರುಣೆ ಖಂಡಿತವಾಗಿ ಬೇಕು.

ಅಲ್ಲಮ ಪ್ರಭುದೇವರು ತಮ್ಮದೊಂದು ಬೆಡಗಿನ ವಚನದಲ್ಲಿ " ನೀರು ನೆಳಲನೆ ಕುಡಿದು ಮೇರುವೆಂಬುದ ನುಂಗಿ ಶಾರದೆ. ಎಂಬವಳ ಬಾಯಕಟ್ಟೆ ಕಾರಮೇಘದ ಬೆಳಸ ನೀರಹರಿ ನುಂಗಲು ದಾರಿ ಮೃತ್ಯುವ ನುಂಗಿ ನಗುತ್ತಿರ್ದಿತು........" ಎಂದು ಸರಸವಾಗಿ ಹಾಡಿರುವರು. ಇಲ್ಲಿ ಸಂಸಾರ ವಿಷಯ ರಸದ ಸವಿಸುಖದಲ್ಲಿ ಮುಳುಗಿ ಸಂಕಲ್ಪ ವಿಕಲ್ಪಗಳಿಗೆ ಈಡಾದ, ಮತ್ತು ಪ್ರಾಣವಾಯುವಿನ ಸ್ಪಂದದ ದೆಸೆಯಿಂದ ಚಂಚಲವಾಗಿ ಮೋಹ ಮರವೆಗಳಿಗೆ ಈಡಾದ ಮನವನ್ನು ನೀರಿಗೆ ಹೋಲಿಸಿದ್ದಾರೆ. ಮನದ ಈ ವ್ಯವಹಾರವು ಅಡಗಬೇಕು ಅಂದರೆ ಅದಕ್ಕಿದ್ದ ಅಧಃಪ್ರವೃತ್ತಿಯು ನಾಶವಾಗಿ ಅದು ಊರ್ಧ್ವಪ್ರವೃತ್ತಿಯುಳ್ಳದಾಗಬೇಕು ಎಂದು ತಿಳಿಸಿದ್ದಾರೆ. ಈ ಮಾತುಗಳಲ್ಲಿ ಬಳಸಿದ 'ಕಡಿದು' 'ನುಂಗಿ' 'ಬಾಯಕಟ್ಟೆ' 'ನುಂಗಲು' ಇತ್ಯಾದಿ ಪದಗಳು ಅಧಃಪ್ರವೃತ್ತಿ ಊರ್ಧ್ವಪ್ರವೃತ್ತಿಗ ಳೊಳಗಿನ ಹೋರಾಟವನ್ನು ಸೂಚಿಸುವಂತಿವೆ. ಕೊನೆಗೆ ಅಧಃಪ್ರವೃತ್ತಿಯು ಊರ್ಧ್ವಪ್ರವೃತ್ತಿಗೆ ಬಾಗುವದೆಂಬುದನ್ನು ವ್ಯಕ್ತಗೊಳಿಸುವಂತಿದೆ.

ತಮೋಗುಣಪ್ರಧಾನವಾದ ಸಹಜ ಪ್ರವೃತ್ತಿಗಳಿಗೆ ಮನೋ ವಿಶ್ಲೇಷಣಶಾಸ್ತ್ರವು (instincts) ಎಂದು ಕರೆಯುತ್ತದೆ. ಈ ಸಹಜ ಪ್ರವೃತ್ತಿಗಳು ಮಾನವ ಜೀವನದ ಅಸ್ತಿವಾರ; ಇವಿಲ್ಲದಿದ್ದರೆ ಮಾನವನು ಕಾರ್ಯೋನ್ಮುಖನಾಗುತ್ತಿರಲಿಲ್ಲ. ಇವುಗಳಿಂದಲೇ ಅವನಿಗೆ ಕೆಲಸಮಾಡುವ ಹುರುಪು ಬರುತ್ತದೆ. ಆದರೆ ಇವು ಅಸಂಸ್ಕೃತವಾಗಿವೆ. ಮಾನವನ ಮನವು ಅಸಂಸ್ಕೃತವಾದ ಇಂಥ ಅನೇಕಾನೇಕ ಅಂತಃಪ್ರವೃತ್ತಿಗಳ ಆಗರ. ಮಾನಸಿಕ ಜೀವನದಲ್ಲಿ ಅವು ಜನ್ಮತಃ ಬಂದ ಸಹಜಪ್ರವೃತ್ತಿಗಳು.

ಮಾನವನು ಅವುಗಳನ್ನು ಹೊಸದಾಗಿ ಸಂಪಾದಿಸಲಾರನು. ಹಾಗೆಯೇ ಇದ್ದವುಗಳ ನಾಶವನ್ನೂ ಮಾಡಲಾರನು. ಮಾನವನು ಸಂಘಜೀವಿ ಸಮಾಜದಲ್ಲಿ ಅವನು ಅನ್ಯರೊಡನೆ ವ್ಯವಹರಿಸ ಬೇಕಾಗುವದು. ಸಹಜಪ್ರವೃತ್ತಿಗಳ ಬಳವಳಿಕೆಯೇ ಸಮಾಜ ಜೀವನಕ್ಕಾಧಾರ. ಅವುಗಳನ್ನು ಹೊಸದಾಗಿ ಗಳಿಸಬೇಕಾಗಿಲ್ಲ. ಇದ್ದವುಗಳನ್ನೂ ನಾಶಮಾಡಬೇಗಿಲ್ಲ ಹಾಗಾದರೆ ಅವುಗಳನ್ನು ಬಳಸುವದೆಂತು? ಅವುಗಳಿಗೆ ಸರಿಯಾದ ನಿರ್ಗಮನ ಮಾರ್ಗವನ್ನು ಕಲ್ಪಿಸಿಕೊಡುವದೊಂದೇ ಇದಕ್ಕೆ ಉಪಾಯ ಅಸಂಸ್ಕೃತವಾದ ಅಂತಃಪ್ರವೃತ್ತಿಗಳಿಗೆ ಸಮಾಜಜೀವನದಲ್ಲಿ ಸರಿಯಾದ ನಿರ್ಗಮನದ ಅನುವನ್ನು ಮಾಡಿಕೊಡುವದೆ ಸಂಸ್ಕೃತಿಗೆ ಮೆಟ್ಟಲು. ಮಾನವನ ಆಳವಾದ ಮನಸ್ಸಿನಲ್ಲಿ ಅದೆಷ್ಟೋ ಅತೃಪ್ತವಾಸನೆಗಳು ಅಡಗಿಕೊಂಡಿವೆ. ಈ ಅತೃಪ್ತವಾದ ಆದರೂ ಅತ್ಯಂತ ಪ್ರಬಲವಾದ ವಾಸನೆಗಳು ತಮ್ಮ ತೃಪ್ತಿಗಾಗಿ ಅನುಸರಿಸುವ ಹಂಚಿಕೆಗಳಲ್ಲಿಯೇ ಧರ್ಮ ನೀತಿ ತತ್ವಜ್ಞಾನ ಕಾವ್ಯ ಕಲೆ ಮೊದಲಾದವುಗಳ ಉಗಮವಿದೆ ಎಂದು ಮನೋವಿಶ್ಲೇಷಣ ಶಾಸ್ತ್ರವು ಸಾರುವದು. ಅಂತೆಯೇ ಧರ್ಮ ಮೊದಲಾದವುಗಳಿಗೆ ಇದಕ್ಕಿಂತ ಹೆಚ್ಚಿನ ಬೆಲೆಯಿಲ್ಲ. ಮನಸ್ಸಿನಲ್ಲಿ ಜ್ಞಾತ ಅಜ್ಞಾತವೆಂದು, ಜಾಗ್ರತ ಅಜಾಗ್ರತವೆಂದು ಎರಡು ವಿಭಾಗಗಳು ಇರುವವು ಇವೆರಡರಲ್ಲಿ ಪರಸ್ಪರ ವಿರೋಧವು ಅಥವಾ ತಿಕ್ಕಾಟವು ತಲೆದೋರುವದು. ಮನುಷ್ಯನಿಗೆ ಧರ್ಮ ಅಧರ್ಮದ ತಿಳಿವಳಿಕೆಯುಂಟಾಗುವದೂ ಈ ವಿರೋಧದ ಪರಿಣಾಮವುಂಟಾದಾಗ !

ನಾವು ದಾರಿಯಲ್ಲಿ ಹೋಗುತ್ತಿರುವಾಗ ಸುಂದರವಾದ ಒಂದು ಮಾವಿನ ತೋಟವು ನಮಗೆ ಕಾಣಿಸಿತೆಂದು ಇಟ್ಟುಕೊಳ್ಳುವಾ. ಆಗ ಅದರಲ್ಲಿಯ ರಸದುಂಬಿದ ಮಾವಿನಹಣ್ಣುಗಳನ್ನು ನೋಡಿ ಅವುಗಳನ್ನು ತಿನ್ನಬೇಕೆಂಬ ಆಸೆಹುಟ್ಟುವದು ಸ್ವಾಭಾವಿಕ. ಆದರೆ ಕೂಡಲೆ ನಾವು ಆ ಹಣ್ಣುಗಳನ್ನು ಹರಿದು ತಿನ್ನುವದಿಲ್ಲ. ಭೋಗ್ಯವಸ್ತುಗಳನ್ನು ಕಂಡಾಗ ಭೋಗಿಸಬೇಕೆಂಬ ಆಸೆಹುಟ್ಟಿದರೂ ಅದನ್ನು ಕೊನೆಗಾಣಿಸದಿರಲಿಕ್ಕೆ ಹಲವು ಕಾರಣಗಳುಂಟು. ಒಂದನೆಯದಾಗಿ ಸಮಾಜದ ಭಯ. ಆ ತೋಟವು ನಮ್ಮದಲ್ಲ; ಅದರಲ್ಲಿಯ ಹಣ್ಣುಗಳ ಮೇಲೆ ನಮ್ಮ ಅಧಿಕಾರವಿಲ್ಲ; ಅವನ್ನು ಹರಿದು

ತಿಂದರೆ ಎರಡನೆಯವರು ಏನೆಂದಾರೆಂಬ ಭಯ. ಎರಡನೆಯದಾಗಿ ಸರಕಾರದ ಭಯ. ಆ ವಸ್ತು ಬೇರೊಬ್ಬರದು; ಅದನ್ನು ನಾವು ಉಪಯೋಗಿಸಿ ದರೆ ಸರಕಾರ ನಮ್ಮನ್ನು ದಂಡಿಸಬಹುದೆಂಬ ಅಂಜಿಕೆ. ಮೂರನೆಯದಾಗಿ ವಿವೇಕದ ಭಯ. ಸಮಾಜದ ಭಯವನ್ನು ಧಿಕ್ಕರಿಸಿ, ಸರಕಾರದ ಕಣ್ಣು ತಪ್ಪಿಸಿ, ಪರರ ವಸ್ತುವನ್ನು ಉಪಭೋಗಿಸಲಣಿಯಾದಾಗ ಒಳಗಿ ನಿಂದ ದನಿಯೊಂದು—ಇದು ನಿನ್ನ ಸೊಮ್ಮು ಅಲ್ಲ;ನಿನ್ನದಲ್ಲದನ್ನು ನೀನು ವಿನಿಯೋಗಿಸಿದರೆ ನಿನ್ನ ಆತ್ಮಗೌರವಕ್ಕೆ ಕುಂದು—ಎಂದು ಹೇಳುವದು. ಈ ಮೂರರಲ್ಲಿ ಯಾವದೇ ಒಂದು ಕಾರಣದಿಂದ ಮನಸಿನಲ್ಲಿ ಹುಟ್ಟಿದ ಆಸೆ ಯನ್ನು ನಾವು ತಡೆಯಬಹುದು; ಅದನ್ನು ತಳ್ಳಬಹುದು. ಹಾಗೆ ತಳ್ಳಿದಾಗ ಈ ಆಶೆ, ಈ ಆಕಾಂಕ್ಷೆ, ಈ ಅಪೇಕ್ಷೆ ಅಳಿದು ಹೋಗುವದೇ ಇಲ್ಲವೆ ಉಳಿದು ಬಿಡುವದೇ ? ಈ ಆಶೆಆಕಾಂಕ್ಷೆಗಳು ಅಳಿಯದೆ ಆಳವಾದ ಮನದಲ್ಲಿ ಅಥವಾ ಮನಸ್ಸಿನ ತೀರ ಕೆಳಗಿನ ಪದರಿನಲ್ಲಿ ಅಡಗಿಕೊಳ್ಳುವವೆಂದು ಮನೋವಿಶ್ಲೇಷಣ ಶಾಸ್ತ್ರವು ಹೇಳುವದು ಈ ಆಶೆ-ಪ್ರತ್ಯಾಶೆಗಳು ಕಾರಣಾಂತರ ದಿಂದ ಈಡೇರದಿದ್ದರೂ ಇವು ಸಂಪೂರ್ಣವಾಗಿ ನಾಶವಾಗಿ ಹೋಗುವದಿಲ್ಲ. ಜಾಗರಿತ ಮನದಿಂದ ಇವನ್ನು ತಳ್ಳಿದಾಗ ಅಜಾಗರಿತ ಅಂದರೆ ಸುಪ್ತವಾದ ಮನಸ್ಸಿನೊಳಗೆ ಪ್ರವೇಶಿಸಿ ಅಲ್ಲಿ ಮನೆಮಾಡಿಕೊಳ್ಳುವವು. ನಮ್ಮಲ್ಲಿ ಕೋಪ-ತಾಪಗಳು, ಖೇದ-ಮೋದಗಳು, ದ್ವೇಷ-ಅಸೂಯೆಗಳು, ಕಾಮ-ಪ್ರೇಮಗಳು, ಹಸಿವೆ-ಬಾಯಾರಿಕೆಗಳು ಹುಟ್ಟಿದಾಗ ಹೊರಗೆ ಹೋಗಲಿಕ್ಕೆ ಇವುಗಳಿಗೆ ಒಂದು ದಾರಿಯನ್ನು ತೋರಿಸಬೇಕು ಇಲ್ಲವೆ ಇವನ್ನು ಉಪಶಮನ ಮಾಡಬೇಕು; ಹಾಗೆ ಮಾಡದೆ ಇವನ್ನು ಅದುಮಿ ಬಿಟ್ಟರೆ ಇವು ಸುಮ್ಮನೆ ಇರುವದಿಲ್ಲ; ಹೊರಗೆ ತಳ್ಳಿದರೆ ಹೋಗಿಬಿಡುವದಿಲ್ಲ. ಆಗಿನ ಮಟ್ಟಿಗೆ ಮಾತ್ರ ಹೋದಂತೆ ಕಂಡರೂ ಇವು ನಾಶವಾಗದೆ ನಮ್ಮ ಗಮನಕ್ಕೆ ಬಾರದಂತೆ ಮನಸ್ಸಿನ ಒಳಭಾಗದಲ್ಲಿದ್ದುಕೊಂಡು,ಸಮಯವರಿತು ಹೊರಬೀಳು ತ್ತವೆ. ಹೀಗೆ ಈಡೇರದ ಆಶೆ-ಆಕಾಂಕ್ಷೆಗಳಿಗೂ ವ್ಯಕ್ತವಾಗದ ಕೋಪ-ತಾಪಗಳಿಗೂ ಆಶ್ರಯಸ್ಥಾನವಾದ ಮನಸ್ಸಿನ ಭಾಗಕ್ಕೆ ಸುಪ್ತಚೇತನ ಅಥವಾ ಅಜಾಗ್ರತ ಮನವೆಂದು ಹೆಸರು. ಸುಲಭವಾಗಿ ಕಾರ್ಯಕಾರಣ ಭಾವವನ್ನು ಅರಿಯುವ ಮನೋಭಾಗಕ್ಕೆ ಜಾಗ್ರತ ಮನವೆಂದು ಕರೆಯುತ್ತಾರೆ.

ಇದು ಹೊರಗಿನ ಸನ್ನಿವೇಶಗಳಿಗೆ ಹೊಂದಿಕೊಂಡು ಹೋಗಲು ಹವಣಿಸುವ
ಕೈಲಾದಮಟ್ಟಿಗೆ ಕಾರ್ಯಗಳನ್ನು ತರ್ಕಬದ್ಧವಾಗಿ ನಡೆಸಲು ತವಕಿಸುವ
ಅಲ್ಲದೆ ಇದು ಧರ್ಮಾಧರ್ಮದ ಕಲ್ಪನೆಗೆ ಒಳಪಟ್ಟಿರುವದು. ಆದರೆ ಈ
ಮನಸ್ಸಿನಲ್ಲಿ ಇದು ಕೇವಲ ಸ್ವಲ್ಪ ಭಾಗ ಮಾತ್ರ ಸುಪ್ತಚೇತನವೇ
ಮನಸ್ಸಿನ ಬಹು ಭಾಗವನ್ನು ವ್ಯಾಪಿಸಿರುತ್ತದೆ.

ಸುಪ್ತಚೇತನ ಅಥವಾ ಅಜಾಗ್ರತ ಮನವು ಜಾಗ್ರತ ಮನಸ್ಸಿ
ತೀರ ಭಿನ್ನವಾಗಿದೆ. ಅದಕ್ಕೆ ಕಾರ್ಯಕಾರಣ ಭಾವದ ಪರಿವೆಯಿಲ್ಲ; ಧರ್ಮಾ
ಧರ್ಮದ ಕಲ್ಪನೆಯಿಲ್ಲ; ಹೊರಗಿನ ಸನ್ನಿವೇಶಗಳಿಗೆ ಹೊಂದಿಕೊಂ
ಹೋಗುವ ಹದನವಿಲ್ಲ. ಒಟ್ಟಾರೆ, ಸುಪ್ತ ಮನಸ್ಸಿನ ವರ್ತನೆಯು ಪಶು
ವರ್ತನೆಯನ್ನು, ಅನಾಗರಿಕ ಮಾನವನ ವರ್ತನೆಯನ್ನು, ಶಿಶುವರ್ತನೆಯ
ಹೋಲುತ್ತದೆ. ಅದು ಯಾವ ವಿಧವಾದ ತಡೆಯನ್ನು ಲೆಕ್ಕಿಸದೆ ಸ್ವೈರತ್ವ
ಯಲ್ಲಿ ವಿಹರಿಸುತ್ತದೆ. ಧರ್ಮಾಧರ್ಮದ ಕಲ್ಪನೆ ಇಲ್ಲದೆ ಕೇವಲ ಸ್ವಾಭಾವಿ
ಪ್ರಚೋದನೆಗೆ ಒಳಪಟ್ಟು ವ್ಯವಹರಿಸುವ ಈ ಸುಪ್ತಚೇತನವು ಪ್ರಚ
ಶಕ್ತಿಯುಳ್ಳದ್ದಿರುತ್ತದೆ. ಅದರಲ್ಲಿ ಅತೃಪ್ತವಾಸನೆಗಳು ತಪ್ತಗೊಂಡು ತೃಪ್ತಿಗಾ
ಹಾತೊರೆಯುತ್ತಿರುವದರಿಂದ ಸುಪ್ತಚೇತನವು ಕಾದ ಕುಲಿಮೆಯ
ರಕ್ತರಂಜಿತವಾಗಿರುವದು. ಆದುದರಿಂದ ತ್ವರಿತಕೋಪ ಇಲ್ಲವೆ ತಡೆ
ಲಾರದ ಕಾಮು—ಇವು ಎರಡೇ ಅದಕ್ಕೆ ಆಶ್ರಯಸ್ಥಾನ. ಆದರೂ ಸುಪ್ತ
ಚೇತನದ ಈ ಆವೇಗವು ಈ ಉದ್ವೇಗವು ಸಮಾಜ ಜೀವನದಲ್ಲಿ ವಿಫಲವಾ
ವದರಿಂದ ಜಾಗ್ರದವಸ್ಥೆಯಲ್ಲಿ ಸಮಾಜದ ಭಯ, ಸರಕಾರದ ಭಯವಿರುವ
ಕನಸಿನಲ್ಲಿ ಸದಸದ್ವಿವೇಕದ ಭಯವುಂಟು ಈ ಸದಸದ್ವಿವೇಕಕ್ಕೆ ಫ್ರಾಯಿಡ
ದಂಡಧಾರಿ ಅಥವಾ Censor ಎಂದು ಹೆಸರಿಟ್ಟದ್ದಾನೆ. ಕನಸಿನಲ್ಲಿಯ
ಕೂಡ ಕಂಡ ಕಂಡ ಹಾಗೆ ಅತೃಪ್ತ ಆಶೆ-ಆಕಾಂಕ್ಷೆಗಳು ತಾಂಡವನ
ಹತ್ತಿದರೆ ನಿದ್ರಾಭಂಗವಾಗುವದು; ಆದುದರಿಂದ ನಿದ್ರೆಗೆ ಭಂಗಬಾರದಂತೆ ಸುಪ್ತ
ಚೇತನದಿಂದ ಹೊರಗೆ ಬಂದು ನಲಿದಾಡಬೇಕೆಂದಿರುವ ಕುರುಡು ಕಾಮ
ಗಳನ್ನು ತಡೆಗಟ್ಟುತ್ತಾನೆ ಈ ದಂಡಧಾರಿ. ಆದರೂ ಒಮ್ಮೊಮ್ಮೆ ಇವ
ವೈಮರೆತಿದ್ದಾಗ ಆ ಬರಡು ಬಯಕೆಗಳು ಮುಂದೆ ನುಗ್ಗಿಬರುವದುಂಟು
ಎಂದರೆ, ಬಹಳ ಆಯಾಸವಾದಾಗ, ವಿಶೇಷವಾಗಿ ಜ್ವರಬಂದಾಗ ಇಲ್ಲ

ಮನಸ್ಸಿಗೆ ಜಾಡ್ಯವಾದಾಗ, ಹತ್ತಿಕ್ಕಲ್ಪಟ್ಟ ಈ ಆಶೆ–ಆಕಾಂಕ್ಷೆಗಳು ಇದ್ದಕ್ಕಿದ್ದಂತೆ ಜಾಗ್ರದಲ್ಲಾಗಲಿ ಸ್ವಪ್ನದಲ್ಲಾಗಲಿ ಪ್ರಕಟವಾಗುವವು. ಯಾಕಂದರೆ ದಂಡಧಾರಿಯು ಎಚ್ಚತ್ತಿರುವ ಸಮಯದಲ್ಲಿ ಆ ಅತೃಪ್ತವಾಸನೆಗಳು ತಮ್ಮ ನಿಜರೂಪದಲ್ಲಿ ಬಂದರೆ ದಂಡಧಾರಿಯು ತಡೆಯುವನು. ಅದಕ್ಕಾಗಿ ವೇಷವನ್ನು ಬದಲಿಸಿಕೊಂಡು ರಂಗಸ್ಥಳಕ್ಕೆ ಬರಲು ಯೋಗ್ಯರಾದವರಂತೆ ಇವು ಬಣ್ಣ ಬಟ್ಟೆ ಹಾಕಿಕೊಂಡು ಮುಂದೆಬರುವವು. ದಂಡಧಾರಿಯು ಇವರೂ ಯಾವದೋ ಒಂದು ಪಾತ್ರವಹಿಸಿದ್ದಾರೆಂದು ಬಗೆದು ಅವುಗಳನ್ನು ತಡೆಯದೆ ಬಿಟ್ಟು ಬಿಡುವನು. ಹೀಗೆ ಇವು ರೂಪಾಂತರಗೊಳ್ಳದಿದ್ದರೆ ಸುಪ್ತಚೇತನದಿಂದ ಸ್ವಪ್ನಾವಸ್ಥೆಗೆ ಬಂದು ಸಾರ್ಥಕ್ಯವನ್ನು ಹೊಂದಲು ಸಾಧ್ಯವಾಗುವಂತಿಲ್ಲ. ಆದುದರಿಂದಲೇ ರೂಪಾಂತರವಾಗಬೇಕು. ಕನಸುಗಳೆಲ್ಲವೂ ಅತೃಪ್ತ ವಾಸನೆಯ ರೂಪಾಂತರವಾಗಲಿಕ್ಕಿಲ್ಲ; ಆದರೆ ಕನಸುಗಳ ಬಹು ಭಾಗವು ಅದರ ರೂಪಾಂತರವೆಂಬದು ಮಾತ್ರ ನಿಃಸಂಶಯ. ಕನಸು ಸತ್ಯವಾಗಿರಬಹುದು ಇಲ್ಲವೆ ಮಿಥ್ಯವಾಗಿರುಬಹುದು ಆದರೆ ಅದರ ಪರಿಣಮವಾಗಿ ನಮಗೆ ಉಂಟಾಗುವ ಭಯ-ಶೋಕ ಮುಂತಾದ ಭಾವಗಳು ಮಾತ್ರ ದಿಟವಾಗುವವು. ಜಾಗ್ರದವಸ್ಥೆಯಲ್ಲಿ ಮಾನವನ ನಡತೆ ಸರಿಯಾಗಿದ್ದರಷ್ಟೇ ಸಾಲದು; ಅವನ ಸುಪ್ತಚೇತನವೂ ಶುದ್ಧವಾಗಿರಬೇಕು; ಅದನ್ನು ಶುದ್ಧಿಗೊಳಿಸಲು ಕನಸುಗಳು ಸಹಾಯಮಾಡುವವು; ಆದುದರಿಂದ ಅವುಗಳ ನಿರ್ದೇಶ ನಿರೂಪ ಇವನ್ನು ಅರಿತು ಮಾನವನು ತನ್ನ ನಡತೆಯನ್ನು ತಿದ್ದಿಕೊಂಡು ಸಚ್ಚಾರಿತ್ರನಾಗಬೇಕೆಂಬುದೇ ಮನೋವಿಶ್ಲೇಷಣ ಶಾಸ್ತ್ರದ ಮನಿಷೇ. ಜಾಗ್ರ-ಸ್ವಪ್ನ ಇವೆರಡರ ನಡುವಿನ ವಿರೋಧವನ್ನು ಅಳಿಸಿ ಮನಸ್ಸನ್ನು ನಿರೋಗಗೊಳಿಸುವದೇ ಮನೋವಿಶ್ಲೇಷಣದ ನಿರಿ ಗುರಿ.

ಮಾನಸಿಕ ರೋಗಗಳ ಕಾರಣಗಳನ್ನು ಕಂಡು ಹಿಡಿದು ಅವುಗಳ ನಿವಾರಣೆಯನ್ನು ಸೂಚಿಸಿ ಮಾನವನ ಅದೇಷ್ಟೋ ರೋಗಗಳನ್ನು ವಾಸಿಮಾಡಿದುದಕ್ಕಾಗಿ ಮನೋವಿಶ್ಲೇಷಣ ಶಾಸ್ತ್ರಕ್ಕೆ ನಾವು ತುಂಬಾ ಉಪಕೃತರಾಗಿದ್ದೇವೆ. ಆದರೆ ಮಾನವನ ಮನಸ್ಸಿನ ಸ್ವರೂಪವು ಅದರ ಜ್ಞಾತಾಜ್ಞಾತ ಭಾಗದಲ್ಲಿ ಅಷ್ಟೇ ಪರ್ಯವಸಾನ ಹೊಂದುವದಿಲ್ಲ. ಮನಸ್ಸಿನ ಅಜ್ಞಾತ ಅಥವಾ ಸುಪ್ತ ಭಾಗ ಒಂದಿದೆ ಎಂದು ಭಾರತೀಯ

ಶಾಸ್ತ್ರಕಾರರಿಗೆ ಗೊತ್ತುಂಟು. ಅದನ್ನೇ ಅವರು ಸುಷುಪ್ತಿ ಎ
ಕರೆಯುತ್ತಾರೆ. ಸುಷುಪ್ತಿಯಲ್ಲಿ ನಡೆವ ಕಾರ್ಯಗಳ ಸುಳುಹು ಜಾಗ್ರ
ಅವಸ್ಥೆಗೆ ನಿಲುಕದು. ಸುಷುಪ್ತಿಯಲ್ಲಿ ಅಥವಾ ಅಜ್ಞಾತ ಮನಸ್ಸಿ
ಹುದುಗಿದ ಹಂಬಲ - ಹವಣಿಕೆಗಳು, ಆಶೆ - ಆಕಾಂಕ್ಷೆಗಳು ವೇಷಾಂ
ತಳೆದು ಕನಸಿನಲ್ಲಿ ಕಾಣಿಸಿಕೊಳ್ಳುವವೆಂಬ ಮಾತು ನಮ್ಮ ಮನೋವಿಜ್ಞಾ
ಗಳಿಗೂ ಸಮ್ಮತವಿದೆ. ಮಾನವನು ಜಾಗ್ರ - ಸ್ವಪ್ನ-ಸುಷುಪ್ತಿ ಎ
ತ್ರಿವಿಧಾವಸ್ಥೆಗಳುಳ್ಳವನೆಂಬ ವಿಚಾರ ಭಾರತೀಯ ಹಾಗು ಐರೋ
ಮನೋವಿಜ್ಞಾನಿಗಳಿಗೆಲ್ಲರಿಗೂ ಸಮನಾಗಿದೆ. ಆದರೆ ತ್ರಿವಿಧಾವಸ್ಥೆಗಳ
ಮೀರಿ ತುರೀಯ ಅಥವಾ ನಾಲ್ಕನೆಯ ಅವಸ್ಥೆಯೊಂದುಂಟೆಂಬ ಬಗೆಯ
ಪಡುವಣದ ಮನೋವಿಜ್ಞಾನಿಗಳಿಗೆ ನಂಬುಗೆ ಇಲ್ಲ. ಮಾನಸಿಕ ಉಪಕ
ಒಂದಿರುವದೆಂದು ಫ್ರಾಯಿಡನು ಒಪ್ಪಿದರೂ ಅದು ಯಾವ ತರದ ದ್ರ
ದಿಂದುಂಟಾಗಿದೆ ಎಂದು ಕೇಳಿದರೆ ಅವನು ಉತ್ತರ ಕೊಡುವದಿಲ್ಲ. ಇ
ಯಾವದೇ ತರದ ದ್ರವ್ಯದಿಂದಾಗಲೊಲ್ಲದು, ಅದರ ಕಾರ್ಯವನ್ನ
ನಾವು ನೋಡಬೇಕಲ್ಲದೆ ಅದರ ಮೂಲ ದ್ರವ್ಯದ ಪ್ರಶ್ನೆಯು ಗೌಣವಾ
ಎಂದು ಅವನ ಅಭಿಮತ. ಭಾರತೀಯ ಮನೋವಿಜ್ಞಾನಿಗಳು ಮಾ
ಮನಸ್ಸಿನ ಮೂಲ ಸ್ವರೂಪವನ್ನು ಅರಿಯುವದು ಮಾತ್ರ ಅತಿ ಮಹತ್ವ
ಕಾರ್ಯವೆಂದು ಹೇಳುತ್ತಾರೆ. ಈ ಮೂಲಸ್ವರೂಪವೇ ಅದರ ಇನ್ನು
ಸ್ವರೂಪಗಳ ಕಾರ್ಯಕ್ಕೆ ಕಳೆಗೊಡುವದು. ಮನಸ್ಸಿನ ಮೂಲ ಸ್ವರೂಪ
ಬರಿಯ ಜ್ಞಾನವಲ್ಲ, ಅಜ್ಞಾನವಲ್ಲ, ವಿಜ್ಞಾನವೂ ಅಲ್ಲ. ಅದು ಕೇವ
ಪ್ರಜ್ಞಾನ, ಅಥವಾ ಚಿದ್ಘನವಾಗಿಹುದು. ಮನಸ್ಸಿನ ಮೂಲವನ್ನು ಕುರಿ
ಪ್ರಭುದೇವರು ಹೇಳಿದ ವಚನವಿದು: "ಎಲೆ ಮನವೆ, ಎಲ್ಲಿ ಹವಣ
ಬಾರದ ಅಖಂಡ ಬೆಳಗು ತೋರುತ್ತಿಹುದು, ಅದೀಗ ನಿನ್ನ ನಿ
ಎಲೆ ಮನವೆ, ನೀನೆಂಬ ಸೆರೆಹಿಂಗಿ ತಾನೇ ತೋರುತ್ತಿಹುದು, ಅದೀ
ನಿನ್ನ ನಿಜ. ಎಲೆ ಮನವೆ, ನಿನ್ನ ನಿಜವನರಿಯಬಲ್ಲಡೆ ಅದೇ ಬ್ರಹ್ಮಜ್ಞಾ
ಅದೇ ಕೇವಲಮುಕ್ತಿ; ಅದೇ ನಮ್ಮ ಗುಹೇಶ್ವರ ಲಿಂಗವನರಿವ ಸಹಜಭಕ್ತಿ
ಕುಳ ಕಾಣಾ. ಎಲೆ ಮನವೆ, ನೀನಿದ ನಿಶ್ಚಯಿಸಿಕೋ ಮರೆಯದೆ" ಮನಸ್ಸಿ
ಮೂಲ ಸ್ವರೂಪವಾದ ಈ ಪ್ರಜ್ಞಾನದ ಅಥವಾ ಚಿದ್ಘನದ, ಘನಮನ

ಅರಿವು ಆಗುವದು ತುರೀಯದಲ್ಲಿ; ಅಂದರೆ ಮೂರು ಅವಸ್ಥೆಗಳನ್ನು ಮೀರಿ ನಾಲ್ಕನೆಯ ಅವಸ್ಥೆಯಲ್ಲಿ! ರತ್ನಾಕರವರ್ಣಿಯು ಈ ಪ್ರಾಜ್ಞದ ವರ್ಣನೆಯನ್ನು ಬಹಳ ಮಾರ್ಮಿಕವಾಗಿ ಮಾಡಿರುವನು:

'ತಿಳಿವೆಳಗಿನ ತೀರ್ಥರೂಪವೆ ತಿಂಗಳ
ಬೆಳಗಿನೊಳಾದ ಪುತ್ಥಳಿಯೆ
ತಳುವಮಾಡದೆನಗೆ ಸನ್ಮತಿದೋರು ಸುಜ್ಞಾನ
ನಿಳಯ ನಿರಂಜನ ಸಿದ್ಧ

ಆತನ ಈ ಮಾತುಗಳಲ್ಲಿ ತಿಳಿವೆಳಕು—ಎಂದರೆ ಅರುಹೆಂಬ ಬೆಳಕು. ಅರುಹು ಬೆಳಗಿನ ಸ್ವರೂಪವಾಗಿಹುದು. ತುರೀಯದಲ್ಲಿಯ ಪ್ರಾಜ್ಞನೇ ಜ್ಯೋತಿರ್ಮಯನು. ಆ ಅರುಹಿನ ಬೆಳಕಿನಿಂದಲೇ ಎಲ್ಲ ಪದಾರ್ಥಗಳೂ ಅವಸ್ಥೆಗಳೂ ಬೆಳಗುವವು. ಅದು ತಿಳಿವೆಳಗಿನ ತೀರ್ಥರೂಪ ಎಂದರೆ ಪವಿತ್ರ ರೂಪ; ತಿಂಗಳ ಬೆಳಗಿನೊಳಾದ ಪುತ್ಥಳಿ ಎಂದರೆ ಪ್ರಶಾಂತ ರೂಪ.

ಹೀಗೆ ಜಾಗ್ರ—ಸ್ವಪ್ನ—ಸುಷುಪ್ತಿಗಳೆಂಬ ಈ ತ್ರಿವಿಧ ಅವಸ್ಥೆಗಳನ್ನು ಮೀರಿ ತುರೀಯದಲ್ಲಿ ತಳವೂರಿದ ಆ ಪ್ರಜ್ಞಾನವು ಜಾಗ್ರದವಸ್ಥೆಯಲ್ಲಿಯ ಮನಕ್ಕೆ ದೇವನಾಗಿ ತೋರುವದು. ತುರೀಯದಲ್ಲಿಯ ಅಥವಾ ತುಟ್ಟ ತುದಿಯಲ್ಲಿಯ ಮನವು ದೇವನಾದರೆ ಜಾಗ್ರದಲ್ಲಿಯ ಅಥವಾ ಮೂಲ ತಳದಲ್ಲಿಯ ಮನವು ಭಕ್ತನಾಗುವದು. ಒಂದು ಕೋಟಿಯಲ್ಲಿ ಅಂದರೆ ತುದಿಯಲ್ಲಿ ಮನವು ಶಿವನಾದರೆ, ಇನ್ನೊಂದು ಕೋಟಿಯಲ್ಲಿ ಆ ಮನವು ಜೀವನಾಗುವದು. ಒಂದು ಕೋಟಿಯಲ್ಲಿ ಮನವು ಸ್ವಾಮಿಯಾದರೆ ಇನ್ನೊಂದು ಕೋಟಿಯಲ್ಲಿ ಅದು ಭೃತ್ಯನಾಗುವದು. ಒಂದು ಕೋಟಿಯಲ್ಲಿ ಮನವು ಪೂಜ್ಯನಾದರೆ ಇನ್ನೊಂದು ಕೋಟಿಯಲ್ಲಿ ಅದು ಪೂಜಕನಾಗುವದು. ಇವೇ ಎರಡು ಕೋಟಿ! ಈ ಎರಡು ಕೋಟಿಗಳ ಮಾಟವೇ ದೇವ-ಭಕ್ತ ಸಂಬಂಧ; ಸ್ವಾಮಿ-ಭೃತ್ಯ ಸಂಬಂಧ; ಪೂಜ್ಯ-ಪೂಜಕ ಸಂಬಂಧ. ಈ ಎರಡು ಕೋಟಿಗಳು ಒಂದನ್ನೊಂದು ಕೂಡುವ ತವಕದಲ್ಲಿರುವವು, ಎಂದರೆ ಅವು ಒಂದನ್ನೊಂದು ಆಕರ್ಷಿಸುವವು. ಶಿವ-ಜೀವರು, ದೇವ-ಭಕ್ತರು ಈ ಆಕರ್ಷಣದ ಎರಡು ಕೋಟಿಗಳು ಅರ್ಥಾತ್ ತುದಿಗಳು. ಒಂದು ಧನ್ನ ವಿದ್ಯುತ್ತಿನ ತುದಿ, ಇನ್ನೊಂದು ಋಣ ವಿದ್ಯುತ್ತಿನ ತುದಿ. ವಿದ್ಯುತ್ತಿನ ಎರಡು ತುದಿಗಳು ಮಿಳಿತವಾದಾಗ

ಬೆಳಕು ಪುಳಕಗೊಳ್ಳುವದು. ಹಾಗೆಯೇ ದೇವ-ಭಕ್ತರೆಂಬ ಎರಡು ಕೋಟಿಗಳು
ಕೂಡಿದಾಗ ಚಿತ್‌ಪ್ರಭಾಮಯವಾದ ಆನಂದದ ಹೊನಲು ಹರಿಯುವದು.
ಆಗ ಅನುಭಾವಿಗೆ ರಸನಿಮಿಷವು ಕ್ಷಣಿಕವಾಗಿರದೆ ಸಂತತ ಧಾರೆಯಾಗುವದು
ಅರೈದು ನೋಡಿದರೆ ವಿಶ್ವವೆಲ್ಲ ಆತ್ಮನ ಆವಿರ್ಭಾವವು. ಆತ್ಮನು ವಿಶ್ವ
ಅದೃಶ್ಯವಾದ ಏಕಾಕಿಯಾದ ನಿಯಾಮಕನು. ಯಾವ ಅರುಹುಮಯ ಚೈತ
ನ್ಯಾತ್ಮಕನ ನಿಯಮನದಿಂದ ಸೃಷ್ಟಿಯ ಸಕಲ ವ್ಯವಹಾರಗಳು ಸಾಗಿರುವವೋ
ಅಂತಹ ಶಕ್ತಿಯೊಡನೆ ಧ್ಯಾನದಿಂದ ಒಡಿವೆರೆದು ಒಂದಾಗಿ ಆದರಿಂ
ಸ್ಫೂರ್ತಿಗೊಂಡು, ಆದರ ಸವಿಯನುಂಡು ಆದರ ಚಿತ್‌ಪ್ರಭಾಚೈತನ್ಯ
ಸಾಮರ್ಥ್ಯವನ್ನು ತನ್ನ ದೈನಂದಿನ ಬಾಳು-ಬಳಕೆಯಲ್ಲಿ ಕೆಲಸ-ಬೊಗಸೆಗಳಲ್ಲಿ
ಪ್ರಕಟಗೊಳಿಸಲೆಳಸುವನು ಅನುಭಾವಿಯು. ಹೀಗೆ ಪ್ರಕಟಗೊಳಿಸಲಣಿಯಾ
ಗುವದೇ ಅನುಭಾವಿಯ ಧರ್ಮ; ಅಪರೋಕ್ಷಜ್ಞಾನಿಯ ಮರ್ಮ. ಇದೇ
ಮಾನವ ಜನ್ಮದ ಸಾರ್ಥಕ್ಯ ! ಇದೇ ನಿಜವಾದ ಮಾನವತೆಯ ಸಾಫಲ್ಯ !

ಇಂತಹ ಅನುಭಾವಿಗಳು, ಅಪರೋಕ್ಷಜ್ಞಾನಿಗಳು ಆ ದೇವನ ನಿಲವ
ನೆಂತು ವರ್ಣಿಸಿರುವರು ? ಅವನು ಅನಂತಗುಣ ಪರಿಪೂರ್ಣನೂ ಏಕಾತ
ಪ್ರತ್ಯಯಸಾರನೂ ಚಿತ್‌ಪ್ರಭಾಪುಂಜನೂ ಸುಜ್ಞಾನಭಾಸ್ಕರನೂ ಪರಕಾಯ
ಸುಳುಹು ಪ್ರವೇಶಿತನೂ ಆಗಿರುವನೆಂದು ಅವನನ್ನು ಬಗೆಬಗೆಯಾಗಿ ಬಣ್ಣಿಸಿ
ರುವರು. ಆ ದೇವನ ಅದ್ಭುತರಮ್ಯಗುಣಗಳನ್ನು ಅನುಭಾವಿಗಳು ಪರಸ್ಪರ
ವಿರೋಧವಾದ ಪದಗಳಲ್ಲಿಯೂ ಪವಣಿಸಿರುವರು. ಅವನು ಅತಿಶಯ ಸುಸ
ರೂಪವುಳ್ಳವನಿದ್ದರೂ ರೂಪಾತೀತನು, ಚಿನ್ಮಯಾಂಗನಿದ್ದರೂ ಮತಿಗತೀತನು
ಸಂಗದೊಳಗಿದ್ದರೂ ನಿಸ್ಸಂಗನು, ಕಡೆಯಿಲ್ಲದ ಅಮೃತಸಂಪದವ ತನ್ನೊಳಿಂಬಿ
ಟ್ಟುಕೊಂಡಿದ್ದರೂ ಕಡುಬಡವನು ಎಂದು ಹೇಳಿರುವರು. ಅನುಭಾವಿಗಳ
ಭಾವವು ಉಜ್ವಲವಿದ್ದಂತೆ ಅವರ ಭಾಷೆಯು ಉದಾತ್ತವಾಗಿದೆ. ರತ್ನಾಕರ
ವರ್ಣಿಯ ಅನುಭಾವದ ಬೆಡಗು ನೋಡಿರಿ ಅವನ ಈ ಪದಗಳಲ್ಲಿ:

ನಿಂದಲ್ಲಿ ನುಡಿದಲ್ಲಿ ಕುಳಿತಲ್ಲಿ ಸರ್ವತ್ರ
ಕುಂದದೆ ಕುಶಲ ಲೀಲೆಯೊಳು
ಸಂಧಿಸುವಭವ ನನ್ನೆದೆಯೊಳಗಿರು ಚಿದಾ–
ನಂದ ಚಿದಂಬರ ಪುರುಷ

ಕಾಣನರ್ಥವ ಕಾಣಿಸುವ ಪರಂಜ್ಯೋತಿ ನೀ
ಮಾಣಬೆ ಎನ್ನದೆ ಎಂಬ
ಕೋಣೆಯೊಳಿರು ಹೋದೆಯಾದರೆ ನಿನಗೆ ನಿ–
ನ್ನಾಣೆ ಚಿದಂಬರ ಪುರುಷ

ಇಲ್ಲಿ ರತ್ನಾಕರವರ್ಣಿಯ ಔಚಿತ್ಯವನ್ನು ನಾವು ಗಮನಿಸಬೇಕು. ಆಣೆ ಇದು ಆಜ್ಞೆ ಇದರ ತದ್ಭವ. ಆಜ್ಞೆಯನ್ನು ಮಾಡುವದು ತನಗಿಂತ ಕಿರಿಯರಿಗಲ್ಲವೆ? ಆದರೆ ದೇವನು ಎಲ್ಲರಿಗಿಂತ ಹಿರಿಯನಾಗಿ ಪೂಜ್ಯನಾಗಿ ಇರುವದರಿಂದ ಅವನಿಗೆ ಆಜ್ಞೆಮಾಡುವರಾರು ? ಭಕ್ತರು ! ಅಂತೆಯೇ ರತ್ನಾಕರವರ್ಣಿಯು ದೇವಾ ನಿನಗೆ ನಿನ್ನಾಣೆ ಎಂದು ಹಾಡಿಕೊಂಡನು.

ಇಂತು ಭಕ್ತನ ಭಾವದಲ್ಲಿ ದೇವನು ನೆಲಸಿಹನು. ಅವರೀರ್ವರಲ್ಲಿ ಪೂಜ್ಯ–ಪೂಜಕಭಾವವಿರುವದೇನೋ ನಿಜ. ಭಕ್ತನಿಗಾಗಿ ದೇವನು ಹಾರೈಸಿದರೆ ದೇವನಿಗಾಗಿ ಭಕ್ತನು ಹಾತೊರೆಯುವನು. ಮನೋವಿಶ್ಲೇಷಣ ಶಾಸ್ತ್ರಜ್ಞರಾದರೂ ಅಂತಃಪ್ರೇರಕಗಳಲ್ಲಿಯೂ ಬಾಹ್ಯ ಉತ್ತೇಜಕಗಳಲ್ಲಿಯೂ ಒಂದು ಬಗೆಯ ಪರಸ್ಪರ ಎಳೆತ, ಸೆಳೆತ ಇಲ್ಲವೆ ಆಕರ್ಷಣ ಇದೆ ಎಂದು ತೋರಿಸಿಕೊಟ್ಟದ್ದಾರೆ. ಈ ಆಕರ್ಷಣದ ಪರಿಣಾಮವಾಗಿಯೇ ಮನಸ್ಸಿಗೆ ಸುಖದುಃಖಗಳ ಪ್ರತೀತಿಯಾಗುವದೆಂದೂ ಅವರು ಸಿದ್ಧಮಾಡಿದ್ದಾರೆ. ಆದರೆ ಸುಖದುಃಖಗಳ ಆಚೆಗೆ ಆವರು ಒಲಿಯಲಿಲ್ಲ. ಸತ್ ತತ್ವವನ್ನು ಅವರು ಗ್ರಹಿಸಲಿಲ್ಲ ಅನುಭಾವಿಗಳು ಮಾತ್ರ ಅದನ್ನು ಅರಿತು ಅಂಗವಿಸಿಕೊಂಡರು. ದೇವ-ಭಕ್ತರಲ್ಲಿ ಒಂದು ತರಹದ ಎಳೆತ, ಸೆಳೆತ ಅಥವಾ ಆಕರ್ಷಣ ಇದೆಯೆಂದು ಅವರು ಮನಗೊಂಡರು. ಒಂದೆಡೆ ದೇವ ಇನ್ನೊಂದೆಡೆ ಭಕ್ತ, ಒಂದೆಡೆ ಶಿವ ಇನ್ನೊಂದೆಡೆ ಜೀವ—ಇವರೀರ್ವರಲ್ಲಿ ಪರಸ್ಪರ ಆಕರ್ಷಣವು ಸಂತತವಾಗಿ ಸಾಗಿರುವದು. ಈ ಆಕರ್ಷಣೆಯ ಫಲವೇ ದೇವ–ಭಕ್ತರ ಸಂದರ್ಶನ, ಸಂಭಾಷಣ, ಸಮರತಿ, ಸಮಕಳೆ ಸಂಸ್ಪರ್ಶನ, ಸಾಮರಸ್ಯ. ಈ ಸಾಮರಸ್ಯವು ಅನುಭಾವಿಗಳ ಅಂತಿಮ ಗುರಿ.

ಈ ಎಳೆತ, ಸೆಳೆತ ಅಥವಾ ಆಕರ್ಷಣವು ಭೌತಿಕ ಮಾನಸಿಕ ಅಧ್ಯಾತ್ಮಿಕ– ಈ ಎಲ್ಲ ಕ್ಷೇತ್ರಗಳಲ್ಲಿಯೂ ಬಳಕೆಯಲ್ಲಿರುವದು. ಅಣು ಅಣುಗಳಿಂದ ಮೊದಲುಗೊಂಡು ಅಖಂಡವಾದ ಖಗೋಲದವರೆಗೂ ಹಬ್ಬಿ

ಹರಿವರಿದಿಹುದು. ಈ ಎಳೆತ-ಸೆಳೆತವೇ ಗುರುತ್ವಾಕರ್ಷಣವೆಂದೂ ನಿಯ
ಯೆಂದೂ ಪ್ರಾಕ್ತನಕರ್ಮವೆಂದೂ ಬಗೆಬಗೆಯಾಗಿ ಹೆಸರು ತಳೆದಿಹುದು.
ಬಂಗಾರದಲ್ಲಿ ಬಣ್ಣವಾಗಿಯೂ ಎಳ್ಳಿನಲ್ಲಿ ಎಣ್ಣೆಯಾಗಿಯೂ ಪುಷ್ಪದಲ್ಲಿ
ಪರಿಮಳವಾಗಿಯೂ ಹಣ್ಣಿನಲ್ಲಿ ರುಚಿಯಾಗಿಯೂ ಗಂಡಹೆಂಡರಲ್ಲಿ
ರತಿಯಾಗಿಯೂ ತಾಯಿಮಕ್ಕಳಲ್ಲಿ ವಾತ್ಸಲ್ಯವಾಗಿಯೂ ಆಳು ಅಳ್ಳನಲ್ಲಿ
ಧರ್ಮವಾಗಿಯೂ ಮೇಲುಕೀಳುಗಳಲ್ಲಿ ದಂಭವಾಗಿಯೂ ಕಂಗೊಳಿಸುವದು
ಈ ಆಕರ್ಷಣವೇ ನೆಲದಲ್ಲಿ ಧಾರಣಶಕ್ತಿಯಾಗಿಯೂ ನೀರಿನಲ್ಲಿ ಆಪ್ಯಾಯನ
ಶಕ್ತಿಯಾಗಿಯೂ ಬೆಂಕಿಯಲ್ಲಿ ಜ್ವಲನಶಕ್ತಿಯಾಗಿಯೂ ಗಾಳಿಯಲ್ಲಿ ಸಂಚಲನ
ಶಕ್ತಿಯಾಗಿಯೂ ಬಯಲಲ್ಲಿ ವ್ಯಾಪನಶಕ್ತಿಯಾಗಿಯೂ ಆತ್ಮನಲ್ಲಿ ಬುದ್ಧಿಶಕ್ತಿ
ಯಾಗಿಯೂ ಪರಮಾತ್ಮನಲ್ಲಿ ಚಿತ್‌ಶಕ್ತಿಯಾಗಿಯೂ ತೋರುವದು
ದೇವನಲ್ಲಿ ಅಪಾರವಾದ ಕರುಣೆಯಾಗಿಯೂ ಭಕ್ತನಲ್ಲಿ ಆತುರದ ಕರುಳಾ
ಗಿಯೂ ಕಂಗೊಳಿಸುವದು ಈ ಆಕರ್ಷಣೆಯೆ ! ಅಂತೆಯೇ ಭಕ್ತನು ದೇವನ
ಕರುಣೆಗಾಗೆ ಕಾಯುವನು; ಅವನ ಒಲಿಮೆಗಾಗಿ ಓಲೈಸುವನು. ದೇವನನ್ನೊ
ಲಿಸುವದು ಸುಲಭ ಕೆಲಸವಲ್ಲ, ಸಾಮಾನ್ಯ ಸಂಗತಿಯಲ್ಲ. ಧೂಪ-ದೀಪಾರ
ಗಳಿಂದ ವ್ರತ-ನಿಯಮಗಳಿಂದ ಆಸನ-ಮುದ್ರಾದಿಗಳಿಂದ ಪ್ರಾಣಾಯಾಮ-
ಪ್ರತ್ಯಾಹಾರಾದಿಗಳಿಂದ ಅದೇಕೆ, ಧ್ಯಾನ-ಮೌನಗಳಿಂದ ದೇವನು ಒಲಿಯನು.
ಅವನಾಗಿಯೇ ಭಕ್ತನಿಗೆ ಒಲಿಯಬೇಕು. ಇಲ್ಲವೆ ಭಕ್ತನು ದೇವನನ್ನು
ಆತ್ಮಾಕ್ಷ್ಯ ದೃಷ್ಟಿಯಿಂದ ಅರಿಯಬೇಕು. ಧೂಪದೀಪಾರತಿಗಳು ಧ್ಯಾನ
ಮೌನಾದಿಗಳು ದೇವನನ್ನು ಒಲಿಸುವದು ಸಾಧ್ಯವಿಲ್ಲ: ಅವು ಚಿತ್ತಶುದ್ಧಿಗಾಗಿ
ಸಹಾಯಕವಾದುವುಗಳೇ ಹೊರತು ಅವೇ ಸಿದ್ಧಿಗಳಲ್ಲ. ಈ ಮಾತಿನ
ಸತ್ಯತೆಯನ್ನು ಅಕ್ಕ ಮಹದೇವಿಯವರ ಒಂದು ವಚನದಲ್ಲಿ ನಾವ
ಕಾಣಬಹುದು. ಅವನು ತಾನಾಗಿಯೇ ಒಲಿಯ ಬೇಕು ಎಂದು ಆಕೆಯು
ತಿಳಿಸುತ್ತಾಳೆ. ಅನುಭಾವಿಗಳ ಇಂತಹ ವಚನಗಳು ಗೀತಗಳು ಪದ್ಯಗಳು
ಕಿವಿಗೆ ಇಂಪನ್ನು ಕಣ್ಣಿಗೆ ಸೊಂಪನ್ನು ಮನಸ್ಸಿಗೆ ಪೆಂಪನು ನೀಡುವವು!

ಹೀಗೆ ದೇವನೊಲಿದ ಭಕ್ತನು ಕೃತಾರ್ಥನಾಗುವನು; ಧನ್ಯತೆಯನ್ನು
ಪಡೆಯುವನು. ದೇವನ ಒಲುಮೆಯು ಬಗೆಬಗೆಯ ಮುಂಗುರುತುಗಳಲ್ಲಿ ಕಾಣಿ
ಕೊಳ್ಳುವದು. ನಾದ-ಬಿಂದು-ಕಳೆಗಳು, ಶಬ್ದ-ಸ್ಪರ್ಶ-ರೂಪು-ರಸ-ಗಂಧಗಳೆಂಬ

ಪಂಚತನ್ಮಾತ್ರಗಳ ಸೂಕ್ಷ್ಮಾತ್ ಸೂಕ್ಷ್ಮತರ ರೂಪಗಳು ಭಕ್ತನಿಗೆ ಗೋಚರಿಸುವವು. ಅವುಗಳನ್ನು ಕಂಡು ಭಕ್ತನು ಆನಂದವನ್ನೂ ಆಶ್ಚರ್ಯವನ್ನೂ ಕೃತಜ್ಞತೆಯನ್ನೂ ವ್ಯಕ್ತಪಡಿಸುವನು. ಕೃತಾರ್ಥತೆಯನ್ನು ಪಡೆದ ಅನುಭಾವಿಯ ಪರಿಣಾಮಗಳು ಅನೇಕ ವಿಧವಾಗಿವೆ. ಅವನು ಲೌಕಿಕ ಜೀವನದಲ್ಲಿಯೇ ಶಾಶ್ವತ ಆನಂದವನ್ನೂ ಪರಮಶಾಂತಿಯನ್ನೂ ಪಡೆಯುವನು. ಸರ್ವಾತ್ಮಭಾವವು ಅವನಿಗೆ ಸಹಜವಾಗಿ ಅಳವಡುವದು. ಅವನು ನಿಸ್ಪೃಹನೂ ನಿರ್ಭಯನೂ ಆಗಿ ವ್ಯವಹರಿಸುವನು. ಆಪ್ತಕಾಮನಾಗಿ ಅತುಲ ಪ್ರೇಮಿಯಾಗಿ ಪ್ರೂರೈಸುವನು. ಜಗದ ಜಂಜಡದಲ್ಲಿ ಕಂಗೆಟ್ಟು ಅಲೆದಾಡುವ ಜೀವರಿಗೆ ದೇವನ ದಾರಿದೋರುವ ಉನ್ನತವಾದ ದೀಪಸ್ತಂಭವಾಗಿಯೂ ಬೆಳಗುವನು. ಅನುಭಾವಿಗಳಲ್ಲಿ ಕೆಲವರು ಧ್ಯಾನಪ್ರಿಯರು ಕೆಲವರು ಕಾರ್ಯಪ್ರಿಯರು ಇರಬಹುದು. ಅದು ಅವರವರ ಪ್ರಕೃತಿಧರ್ಮ. ಆದರೆ ಆದರ್ಶ ಅನುಭಾವಿಗಳೆಂಬವರಲ್ಲಿ ಮಾತ್ರ ಧ್ಯಾನಕ್ರಿಯೆಗಳೆರಡೂ, ಅಂತರಂಗ ಬಹಿರಂಗಳೆರಡೂ ಬಲು ಅಂದವಾಗಿ ಹೊಂದಿಕೊಂಡಿರುವವು. ಸಮಸ್ತ ಕ್ರೈಸ್ತ ಅನುಭಾವಿಗಳಲ್ಲಿ ಇಗ್ನೆಶಿಯಸ್ ಲಾಯಲಾ ಒಬ್ಬನೇ ಲೌಕಿಕ ಪಾರಮಾರ್ಥಿಕಗಳೆರಡನ್ನು ಒಂದುಗೂಡಿಸಿದ ಆದರ್ಶ ಅನುಭಾವಿಯೆಂದು ವಿಲಿಯಮ್ ಜೇಮ್ಸನು ಅಭಿಪ್ರಾಯಪಟ್ಟಿರುವನು. ಆದರೆ ಅಂತರಂಗ-ಬಹಿರಂಗ, ಕ್ರಿಯಾ-ಜ್ಞಾನ ಐಹಿಕ-ಪಾರಮಾರ್ಥಿಕ ಇವೆರಡನ್ನು ಒಂದುಗೂಡಿಸಿದ ಅನೇಕ ಅನುಭಾವಿಗಳು ಭಾರತದಲ್ಲಿ ಆಗಿಹೋಗಿದ್ದಾರೆ. ಈಗಲೂ ಕಾಣಲು ಸಿಗುತ್ತಾರೆ. ಅದೇಕೆ ಇವೆರಡನ್ನು ಒಂದುಗೂಡಿಸುವದೇ ಭಾರತೀಯರ ಅನುಭಾವವಿದ್ಯೆಯ ರಹಸ್ಯವು. ಕೆಲವು ಅನುಭಾವಿಗಳು ಕೇವಲ ಒಂದೇ ಮಾರ್ಗಕ್ಕೆ ಒಲಿದಿರಬಹುದು. ಬಿಲ್ವ ಬೆಳವಲ ಕಾಯ ಒಂದಾಗಿ ಹಿಡಿಯಲು ಬಾರದಯ್ಯ ಎಂದು ಹಾಡಿದ ಅವರಿಗೆ ಐಹಿಕ ಪಾರಮಾರ್ಥಿಕಗಳನ್ನು ಕೂಡಿ ನಡೆಸುವದು ಸಾಧ್ಯವಾಗಿರಲಿಕ್ಕಿಲ್ಲ. ಆದರೆ ಬಸವಣ್ಣನಂಥವರು ಇಹಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಎಂದು ಹಾಡಿ ಐಹಿಕ ಪಾರಮಾರ್ಥಿಕಗಳೆರಡನ್ನು ಒಂದುಗೂಡಿಸಿರುವರು. ಮಾಟವೆಲ್ಲವೂ ದೇವನ ನೋಟ-ಕೂಟವಾಗಿ ಪರಿಣಮಿಸಿದ ಕ್ರಿಯಾತತ್ಪರದ ಅನುಭಾವಿಗಳೇ ಐಹಿಕ ಪಾರಮಾರ್ಥಿಕವೆಂಬ ಎರಡು ಕೋಟೆಗಳನ್ನು ಒಂದು ಗೂಡಿಸಬಲ್ಲರು

# ನಮಗಿಂದು ಬೇಕಾದ ಗಂಟು

ಈಗ ನಾವಿರುವದು ವಿಜ್ಞಾನಯುಗದಲ್ಲಿ. ದಿನದ ಬಳಕೆಯಲ್ಲಿ ನಾ
ಉಪಯೋಗಿಸುವ ವಿದ್ಯುತ್‌ದೀಪ ರೇಡಿಯೋ ಮೋಟರ ಉಗಿಯ
ವಿಮಾನ ಇತ್ಯಾದಿಗಳು ವಿಜ್ಞಾನದ ಫಲಗಳು. ವಿಜ್ಞಾನ ಎಂಬ ಶ
ವಿಶೇಷ ಜ್ಞಾನ ಅಥವಾ ಅಸಾಮಾನ್ಯವಾದ ತಿಳಿವಳಿಕೆ ಎಂದು ಅರ್ಥವಾ
ವದು. ನಮ್ಮ ದಿನದ ವ್ಯವಹಾರಕ್ಕೆ, ಅನೇಕ ವಿಷಯಗಳ ಜ್ಞಾನ ಅ
ವಾಗಿರಬೇಕು. ಅವುಗಳಲ್ಲಿ ವಿಶೇಷವಾದುದನ್ನು ವಿಜ್ಞಾನ ಎಂದು ಕ
ಲಾಗುವದು. ನಾವು ಉಪಯೋಗಿಸುವ ನೀರು ಕೆರೆ ಭಾವಿ ಹೊಳೆ
ಗಳಿಂದ ದೊರಕುವದೆಂದು ಎಲ್ಲರಿಗೂ ಗೊತ್ತು. ಇದು ಸಾಮಾನ್ಯ
ವಳಿಕೆ. ಆದರೆ ಬಾವಿಯಲ್ಲಿ ನೀರು ಹೇಗೆ ಬಂತು ನಳದಿಂದ ನೀರು ಬ
ಕಾರಣವಾವುದು ? ಈ ಮೊದಲಾದ ಪ್ರಶ್ನೆಗಳ ಉತ್ತರವು ವಿಶೇಷ ಜ್ಞ
ವೆನಿಸಿಕೊಳ್ಳುವದು. ಇದರಿಂದ ಸಾಮಾನ್ಯ ಸಂಗತಿಗಳ ಕಾರ್ಯ-ಕಾ
ಭಾವವನ್ನು ಅರಿಯುವದೇ ವಿಜ್ಞಾನ-ವಿಶೇಷಜ್ಞಾನ ; ಸಾಮಾ
ಜ್ಞಾನಕ್ಕೂ ವಿಜ್ಞಾನಕ್ಕೂ ಇರುವ ವ್ಯತ್ಯಾಸವು ಅತ್ಯಲ್ಪ. ಕಾಲಾನು
ದಲ್ಲಿ ವಿಜ್ಞಾನವು ಸಾಮಾನ್ಯ ಜ್ಞಾನವಾಗಿಯೂ ಪರಿಣಮಿಸುವದು ಎ
ಹೇಳಬಹುದು. ಹಾಗೆ ಪದಾರ್ಥಗಳ ಕಾರ್ಯಕಾರಣ ಭಾವವನ್ನು
ಯುವ ಮನೋವೃತ್ತಿಗೆ ವೈಜ್ಞಾನಿಕ ಧರ್ಮವೆಂದು ಹೆಸರು.

ಶೀರ ಶೈಶವಾವಸ್ಥೆಯಲ್ಲಿ ಮಾನವ ಜನಾಂಗವು ಈ ಬಗೆಯ ವೈ
ನಿಕ ಮನೋವೃತ್ತಿಯನ್ನು ತಳೆದಿರುವದು ಅತಿ ಅಪರೂಪ. ಸೃಷ್ಟಿ
ಯಾವ ಘಟನೆಯೇ ಜರುಗಲಿ, ಅದಕ್ಕೆ ನಿಸರ್ಗ ದೇವತೆಯ ಕೋಪ
ವಾಗಲಿ ಅನುರಾಗ ಪ್ರೀತಿಯಾಗಲಿ ಕಾರಣವೆಂದು ಆಗ ತಿಳಿಯಲ್ಪಡುತ್ತಿ
ಇಂತಹ ತಿಳಿವಳಿಕೆಗೆ ಸಾಮಾನ್ಯವಾಗಿ ದೈವವಾದವೆಂದು ಹೇಳುತ್ತಾ
ಪುರಾತನ ಗ್ರೀಕ ಗ್ರಂಥಗಳಲ್ಲಾಗಲಿ ಭಾರತೀಯರ ವೇದಗಳಲ್ಲಾ
ಯಹೂದ್ಯರ ತಾಲಮಡ್‌ದಲ್ಲಾಗಲಿ ಝುರೋಸ್ಟ್ರಿಯನರ ಝುಂಡಾ
ದಲ್ಲಾಗಲಿ ಅದೇಕೆ, ಕ್ರೈಸ್ತರ ಬಾಯಬಲ್ಲಿನಲ್ಲಾಗಲಿ ಈ ದೈವವಾ

ಅಥವಾ ಪುರಾಣ ದೃಷ್ಟಿಯು (Mythological view) ಕಾಣ ಸಿಗುವದು. ಪ್ರಪಂಚದ ಪ್ರಭಾತ ಸಮಯದಲ್ಲಿ ಜೀವಿಸಿದ್ದ ಜನರೆಲ್ಲ ಬಾಲರಿಗೆ ಸಹಜವಾದ ಸರಳತೆಯನ್ನೂ ಮುಗ್ಧತೆಯನ್ನೂ ತೋರ್ಪಡಿಸುವರು. ಈ ಸೃಷ್ಟಿಯನ್ನು ಹೊಸದಾಗಿ ಅರಳಿದ ಕಣ್ಣುಗಳಿಂದ ನೋಡಿ ಪ್ರಕೃತಿಯಲ್ಲಿ ಸೌಂದರ್ಯವನ್ನೂ ಪಶುಪಕ್ಷಿಗಳಲ್ಲಿ ಭ್ರಾತೃತ್ವವನ್ನೂ ಮಾನವ ಜೀವನದಲ್ಲಿ ಸಂತುಷ್ಟಿಯನ್ನೂ ಕಾಣುತ್ತಿದ್ದರು. ಇಂತಹ ಪೂರ್ವಜರು ಜೀವನದಲ್ಲಿ ಆಶಾವಾದಿಗಳೇ ಹೊರತು ನಿರಾಶೆಯನ್ನು ಹೊಂದುವವರಲ್ಲ. ಆದರೆ ವೈಜ್ಞಾನಿಕ ಮನೋವೃತ್ತಿಯು ಸಾರ್ವತ್ರಿಕವಾಗಿ ಕಂಗೊಳಿಸಿದುದು ಇತ್ತೀಚೆಗೆ. ಪೌರಾಣಿಕದೃಷ್ಟಿ ವೈಜ್ಞಾನಿಕದೃಷ್ಟಿ ಇವೆರಡರಲ್ಲಿ ಆಗಾಗ ಕಲಹವೇಳುತ್ತಿದ್ದಿತೆಂಬುದು ಸರ್ವಶ್ರುತವಾಗಿದೆ. ಹಿಂದಣ ಕಾಲದ ಪಂಡಿತರು ಪುಸ್ತಕ ಗುಲಾಮರಾಗಿ ಎಂತಹ ಸಣ್ಣ ಘಟನೆಯ ಕಾರಣವನ್ನಾದರೂ ಬಾಯಬಲ್ಲಿನಲ್ಲಿ ಇಲ್ಲವೆ ಅರಿಸ್ಟಾಟಲನ ಗ್ರಂಥಗಳಲ್ಲಿ ಹುಡುಕುತ್ತಿದ್ದರು ಪ್ರಮಾಣ ಜ್ಞಾನವನ್ನವರು ಅರಸುತ್ತಿರಲಿಲ್ಲ ಎಂಬುದು ೧೪೩೨ ರಲ್ಲಿ ರೋಮು ನಗರದಲ್ಲಿ ನೆರೆದ ಪಂಡಿತರ ಪರಿಷತ್ತಿನ ಕಾರ್ಯ ಕಲಾಪಗಳಿಂದ ತಿಳಿದು ಬರುತ್ತದೆ. ಪರಂಪರಾಗತ ಪೌರಾಣಿಕ ದೃಷ್ಟಿಯು ವೈಜ್ಞಾನಿಕ ವೃತ್ತಿಯನ್ನು ಎಷ್ಟೇ ವಿರೋಧಿಸುತ್ತ ಬಂದರೂ ಕೊನೆಗೆ ಗೆಲವನ್ನು ಪಡೆದು ಗಟ್ಟಿಗೊಂಡುದು ವೈಜ್ಞಾನಿಕ ದೃಷ್ಟಿಯೇ ಎಂಬುದು ಪ್ರಕೃತ ಐತಿಹ್ಯದಿಂದ ವ್ಯಕ್ತವಾಗುತ್ತಿದೆ.

ಇಂತಹ ವೈಜ್ಞಾನಿಕ ಮನೋಧರ್ಮದ ಲಕ್ಷಣಗಳ ಪ್ರಾಮುಖ್ಯವಾದುದು ಯಥಾರ್ಥಜ್ಞಾನ. ಇದ್ದ ವಿಷಯವನ್ನು ಇದ್ದಕ್ಕಿದ್ದಂತೆ ತಿಳಿದುಕೊಳ್ಳುವದೂ ಹಾಗು ಇದ್ದ ಹಾಗೆ ಹೇಳುವದೂ ಯಥಾರ್ಥಜ್ಞಾನ. ಹೀಗೆ ಮಾಡುವದು ಇದೇನು ಮಹಾವಿಷಯವೆನ್ನಬಹುದು. ಆದರೆ ನಾವು ನಮ್ಮ ಮನಸ್ಸನ್ನು ತುಸು ಒಳಹೊಕ್ಕು ಪರೀಕ್ಷೆ ಮಾಡಿಕೊಂಡರೆ ಈ ಯಥಾರ್ಥ ಜ್ಞಾನವು ಅದೆಷ್ಟು ಕಷ್ಟಸಾಧ್ಯವೆಂಬುದನ್ನು ತಟ್ಟನೆ ತಿಳಿದುಕೊಳ್ಳಬಹುದು. ಯಾಕಂದರೆ ಯಥಾರ್ಥಜ್ಞಾನವು ಮನುಷ್ಯನಿಗೆ ನೈಜವಾಗಿ ಹುಟ್ಟಿ ಬಂದ ಪ್ರವೃತ್ತಿಯಲ್ಲ. ಅದನ್ನವನು ವಿಶೇಷವಾದ ಪರಿಶ್ರಮದ ಫಲವಾಗಿ ಪಡೆಯತಕ್ಕದ್ದು. ಮಾನವನು ಬಾಲ್ಯದಿಂದಲೇ ಅನೇಕ ತೆರನಾದ ಅಭಿಮಾನ ಪರಂಪರೆಗೆ ಒಳಗಾಗಿದ್ದಾನೆ. ನಾನು ನನ್ನದು ನನ್ನ ಜಾತಿ ನನ್ನ ಮನೆ ಇತ್ಯಾದಿ

ಯಾದ ಅಹಂಕಾರ ಮಮಕಾರಗಳು ಮಾನವನನ್ನು ಆವರಿಸಿಕೊಂಡಿರು
ಈ ಅಭಿಮಾನ ಈ ಮಮತೆ ಒಂದು ದೃಷ್ಟಿಯಿಂದ ಸಂಸಾರಿಕ ಜೀವ
ಸಾಮಾಜಿಕ ವ್ಯವಹಾರಕ್ಕೆ ಅವಶ್ಯವೆನಿಸಿದರೂ ವೈಜ್ಞಾನಿಕ ದೃಷ್ಟಿಗೆ
ವಾದುದು. ವೈಜ್ಞಾನಿಕ ವೃತ್ತಿಗೆ ಹೊರತಾದ ಈ ಮಮಕಾರವು
ದೃಷ್ಟಿಯನ್ನು ಎರಡು ಬಗೆಯಾಗಿ ವಕ್ರಗೊಳಿಸುವದು. ನಮಗೆ ಬೇಡ
ಅಂಶಗಳನ್ನು ನಮ್ಮ ದೃಷ್ಟಿಯಿಂದ ಮರೆಮಾಡುವದು; ಇದಕ್ಕೆ ಅನವೇ
(Non-observation) ಎಂದು ಹೆಸರು. ನಮಗೆ ಬೇಕಾದ ಅಂಶಗ
ನಮ್ಮ ಕಣ್ಣೆದುರಿಗೆ ನೆಡುವದು; ಇದಕ್ಕೆ ಅತ್ಯವೇಕ್ಷಣವೆಂದು(Mal-obser
tion) ಎಂದು ಕರೆಯಬಹುದು. ಬೇಕಾದ ಮಾತನ್ನು ಬೆಲ್ಲಕ್ಕಿಂತ
ಮಾಡಿ ಹೇಳುವ ಬೇಡಾದ ಮಾತನ್ನು ಬೇವಿಗಿಂತ ಕಹಿಮಾಡಿ ಹೇ
ಈ ಅನವೇಕ್ಷಣ ಅತ್ಯವೇಕ್ಷಣಗಳೆಂಬ ಕವಲುಗಳಿಂದಾಗಿ ವಸ್ತು
ಯಥಾರ್ಥಜ್ಞಾನವು ನಿಲುಕದು.

ಅಹಂಕಾರ ಮಮಕಾರಗಳನ್ನು ತಡೆದು ಯಥಾರ್ಥ ಜ್ಞಾನ
ಸಾಧಿಸಿದ ಮಾತ್ರಕ್ಕೆ ಸತ್ಯಸಾಕ್ಷಾತ್ಕಾರವೂ ಪೂರ್ಣವಾಗುವದಿಲ್ಲ.
ಪೂರ್ಣವಾಗಬೇಕಾದರೆ ಕಂಡುದನ್ನು ಕಂಡಹಾಗೆ ಹೇಳುವ ಧೈರ್ಯ
(Moral courage) ಬೇಕು. ಇದ್ದುದನ್ನು ಇದ್ದಂತೆ ನುಡಿದುದ
ಅದೆಷ್ಟೋ ಜ್ಞಾನಿಗಳೂ ವಿಜ್ಞಾನಿಗಳೂ ಸುಧಾರಕರೂ ಸತ್ಯಸಂಧ
ಸಾವುನೋವುಗಳಿಗೆ ಈಡಾಗಬೇಕಾಯಿತು. ತಮಗೊದಗಿದ ಕಷ್ಟ
ಗಳಿಗೆ, ವ್ಯಸನ ವಿಡ್ಡುರಗಳಿಗೆ ಅಡ್ಡಿ ಆತಂಕಗಳಿಗೆ ತಲೆಬಾಗದೆ ಬಾಳಬೇ
ಯಿತು; ಶಿರಕ್ಕೆ ಸಾವ ಸುತ್ತಿ ಸತ್ಯವನ್ನು ಅಪ್ಪಿಕೊಳ್ಳಬೇಕಾಯಿತು; ಸಾವ
ಹೂವಾಗಿ ಮುಡಿದುಕೊಳ್ಳಬೇಕಾಯಿತು. ಸತ್ಯಪ್ರತಿಪಾದನೆ
ಸಾಕ್ರೆಟಸನಿಂದ ಗಾಂಧೀಜಿಯವರಿಗೆ ಅನೇಕ ಧುರೀಣರು ಮರಣದಂಡ
ಗುರಿಯಾದ ಉದಾಹರಣೆಗಳು ಇತಿಹಾಸದಲ್ಲಿ ಕಡಿಮೆಯಿಲ್ಲ. ಆದ
ಆ ಮಹಿಮರು ಸತ್ಯವನ್ನಾಡದೆ ಬಿಡಲಿಲ್ಲ.

ಸತ್ಯದಲ್ಲಿ ಪ್ರೀತಿಯೂ ಇರಬಹುದು; ನಿಜವ ನುಡಿಯುವ ಧೈರ್ಯ
ಇರಬಹುದು. ಅಷ್ಟುಮಾತ್ರಕ್ಕೆ ಒಬ್ಬನು ಗ್ಯಾಲಿಲಿಯೊನಂತಹ ವಿಜ್ಞಾ
ಯಾಗಲಾರನು. ಸತ್ಯಪ್ರೇಮವು ನಿಜವಾಗಿ ಫಲದಾಯಕವಾಗಬೇಕಾಗಿದ್ದ

ವಿಜ್ಞಾನಿಗೆ ವಿಶೇಷವಾದ ಮನದ ಜಾಗ್ರತಿ (Presence of mind) ಉಂಟಾಗಿರಬೇಕು. ಅವನ ಕೆಲಸ ಕೊನೆಗಾಣಬೇಕಾದರೆ ಮನಸ್ಸು ಯಾವಾಗಲೂ ಎಚ್ಚರಗೊಂಡಿರಬೇಕು. ಸಾಮಾನ್ಯವಾಗಿ ನಮ್ಮ ಮನಸ್ಸು ತೂಕಡಿಸುವದು; ಆದುದರಿಂದ ಅನುಕರಣ ಭಾವವು ಹೆಚ್ಚಾಗಿರುವದು. ಅದನ್ನು ತಡೆದು ಅನ್ವೇಷಣ ಶಕ್ತಿಯನ್ನು ಬೆಳೆಸಬೇಕು. ಆದೆಷ್ಟೋ ಊಹೆಗಳು ಸಿದ್ಧಾಂತದ ಸೋಗಿನಿಂದ ಮನವನ್ನು ಮರುಳುಗೊಳಿಸುತ್ತಿರುವವು. ಆ ಸಿದ್ಧಾಂತಗಳನ್ನು ವಿಜ್ಞಾನಿಯು ಪ್ರತ್ಯಕ್ಷ ಪ್ರಮಾಣದ ಒರೆಗಲ್ಲಿಗೆ ತಿಕ್ಕಿ ನೋಡಬೇಕು. ಸರಿಯಾದ ರುಜುವಾತುಗಳಿಂದ ಅವನ್ನು ತೂಗಿ ನೋಡಬೇಕು. ಆ ಮೇಲೆ ಅದನ್ನು ಸಿದ್ಧಾಂತವೆಂದು ನಿಷ್ಕರ್ಷಿಸಬೇಕು. "ರುಜುವಾತಿನ ಎಲ್ಲೆಯನ್ನು ಮೀರಿದ ಸಿದ್ಧಾಂತವು ಬರಿಯ ಪ್ರಮಾದವಲ್ಲ, ಅದು ಒಂದು ದೊಡ್ಡ ಪಾತಕ" ಎಂದು ಹಕ್ಸಲೇ ಹೇಳಿರುವನು.

ಹಾಗೆ ವಿಜ್ಞಾನವು ಪ್ರಮಾಣ ಜ್ಞಾನವನ್ನು (Valid knowledge) ಒಪ್ಪುವದು. ಆದರೆ ಆದರ ಪ್ರಮಾಣ ಜ್ಞಾನವು ಪ್ರತ್ಯಕ್ಷದ ಸೀಮೆಗೆ ಸಂಬಂಧಪಟ್ಟದು. ಅಂದರೆ ಇಂದ್ರಿಯ ಗೋಚರವಾದ ಜ್ಞಾನವೇ ಆದಕ್ಕೆ ಪ್ರಮಾಣ ಜ್ಞಾನ. ಮಾನವನಿಗೆ ಈ ಪ್ರಪಂಚದ ಜ್ಞಾನವಾಗುವದು ಪಂಚಜ್ಞಾನೇಂದ್ರಿಯಗಳಿಂದಲೇ! ಈ ಜ್ಞಾನೇಂದ್ರಿಯಗಳ ಶಕ್ತಿಯು ಪರಿಮಿತವಾಗಿರುವದೆಂದು ಮಾನವನು ಅರಿತು ಯಂತ್ರಗಳನ್ನು ರಚಿಸಿ ಅವುಗಳ ಸಹಾಯದಿಂದ ತನ್ನ ಇಂದ್ರಿಯವ್ಯಾಪಾರವನ್ನು ವಿಸ್ತರಿಸಲು ಮೊದಲು ಮಾಡಿದನು. ಮಾಯಕ್ರೊಸ್ಕೋಪ (ಸೂಕ್ಷ್ಮದರ್ಶನಿ), ಟೆಲೆಸ್ಕೋಪ (ದೂರದರ್ಶಿನಿ), ವಾಯರಲೆಸ್, ರೇಡಿಯೊ (ಧ್ವನಿವಾಹಕ) ಮುಂತಾದ ಉಪಕರಣಗಳು ಇಂದ್ರಿಯಗಳ ನಿಖರತೆಯನ್ನು ಪ್ರಖರತೆಯನ್ನು ವಿಶಾಲತೆಯನ್ನು ವಿಸ್ತಾರವನ್ನು ಸೂಚಿಸುವವೇ ಹೊರತು ಆತೀಂದ್ರಿಯ ವಸ್ತುವಿನ ಇರವನ್ನು ಹೇಳಲಾರವು. ಸೂಕ್ಷ್ಮದರ್ಶಿನಿಯ ಸಹಾಯದಿಂದ ಮಾನವನು ಸೂಕ್ಷ್ಮಾತ್ ಸೂಕ್ಷ್ಮತರವಾದ ಪದಾರ್ಥಗಳನ್ನು ಕಂಡು ಹಿಡಿದನು; ಅಣುವನ್ನು ಭೇದಿಸಿ ಪರಮಾಣುವನ್ನೂ ಆದನ್ನು ಛಿದ್ರಿಸಿ ಪ್ರೋಟಾನ್ ಇಲೆಕ್ಟ್ರಾನ್‌ಗಳನ್ನೂ ಅವನ್ನು ವಿಂಗಡಿಸಿ ಪಾಸಿಟ್ರಾನ್ ನ್ಯೂಟ್ರಾನ್‌ಗಳನ್ನೂ ಹುಡುಕಿದನು. ಇಷ್ಟಾದರೂ ಮೂಲವಸ್ತುವು ಅಣುವಿಗಿಂತ

ಅಣುವೆನಿಸಿ ಸೂಕ್ಷ್ಮಕ್ಕಿಂತ ಸೂಕ್ಷ್ಮವಾಗಿಯೇ ಉಳಿಯಿತು. ಹಾಗೆಯೇ ದೂರದರ್ಶಿನಿಯ ಸಹಾಯದಿಂದ ಈ ವಿಶ್ವವು ಬಹು ದೊಡ್ಡ ಗೋಲವಾಗಿರುವದೆಂದೂ, ಪ್ರತಿ ಎರಡು ಅಬ್ಜ ವರುಷಕ್ಕೊಮ್ಮೆ ಅದು ಇಮ್ಮಡಿಯಾಗುವದೆಂದೂ ಅಂತೆಯೇ ಖಗೋಲಕ್ಕೆ ವಿಸ್ತಾರಗೊಳ್ಳುವ ವಿಶ್ವ (Expanding Universe) ಎಂಬ ಹೆಸರು ಬಂದಿದೆಯೆಂದೂ ಖಗೋಲ ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ. ಮಹತ್ತಿಗಿಂತ ಮಹತ್ತೆನಿಸಿದ ಮೂಲ ವಸ್ತುವು ಅದೆಂತಹ ಜಿನಸುಗಾದ ಉಪಕರಣಗಳ ಸಹಾಯದಿಂದಲಾದರೂ ಇಂದ್ರಿಯಗಳ ಉರುಳಿಗೆ ಸಿಲುಕದೆ ಅಣುವಿಗಿಂತ ಅಣುವಾಗಿ ಮಹತ್ತಿಗಿಂತು ಮಹತ್ತಾಗಿಯೇ ಉಳಿಯುವದೆಂದು ಇದರಿಂದ ಸಿದ್ಧವಾಗುವದು.

ವಿಜ್ಞಾನವು ಕಳೆದ ೩೦೦–೪೦೦ ವರುಷಗಳಿಂದ ಸತತ ಪರಿಶ್ರಮಪಟ್ಟರೂ ಸೃಷ್ಟಿಯ ಮೂಲವು ಅಜ್ಞೇಯವಾಗಿಯೇ ಉಳಿಯಿತು. ಇಂತಹ ಮೂಲ ವಸ್ತುವು ವಿಜ್ಞಾನದ ಎಲ್ಲೆಯನ್ನು ಮೀರಿ ಅನುಭಾವದ ಎಲ್ಲೆಗೆ ಒಳಪಟ್ಟಿರುವದು. ಅನುಭಾವಿಗಳು (Mystics) ಈ ಮೂಲ ವಸ್ತುವು ಅಣೋರಣೀಯಾನ್, ಮಹತೋ ಮಹೀಯಾನ್, ಅತ್ಯತಿಷ್ಠತ್ ದಶಾಂಗುಲ ಭಾವಭರಿತ ಜ್ಞಾನಗಮ್ಯವೆಂದು ಬಗೆಬಗೆಯಾಗಿ ಬಣ್ಣಿಸಿರುವರು. ಈ ಮೂಲ ವಸ್ತುವು ಜ್ಞಾನಗೋಚರ–ಅಂತರ್ ಜ್ಞಾನಗೋಚರವಾಗುವದು; ಒಳಬೋಧೆಗೆ (Intuition) ನಿಲುಕುವದಾಗಿರುವದು. ಪದಾರ್ಥಗಳ ಪರಿವಿಡಿಗೆಯ್ದ ಪ್ರಕೃತಿಯು ಇಂದ್ರಿಯ ಗೋಚರವಾಗಿರುವದು ಹೊರಬೋಧೆಗೆ (Tuition) ನಿಲುಕುವದಾಗಿರುವದು. ವಿಜ್ಞಾನಿಗೆ ಇಂದ್ರಿಯ ಗೋಚರವಾದ ಪ್ರತ್ಯಕ್ಷವೇ ಪ್ರಮಾಣಜ್ಞಾನವಾದರೆ ಅನುಭಾವಿಗೆ ಆತ್ಮಗೋಚರವಾದ ಅಪರೋಕ್ಷ ಜ್ಞಾನವೇ ಪ್ರಮಾಣವು. ಆತ್ಮನನ್ನು ಆತ್ಮನಿಂದಲೇ ಅರಿಯಬೇಕೆಂಬ ಅರ್ಥವಾದರೂ ಇದೇ ಇರುತ್ತದೆ. ಆತ್ಮ ಅಥವಾ ಅಂತರಿಂದ್ರಿಯ ಸಹಾಯದಿಂದ ಆತ್ಮಸಾಕ್ಷಾತ್ಕಾರ ಪಡೆಯುವದೇ ಅನುಭಾವಿಯ ಅನುವು.

ಈ ಅಪರೋಕ್ಷಜ್ಞಾನದ ಮರ್ಮವಾವುದು? ಮೂಲ ವಸ್ತುವಿನ ಅಥವಾ ಪರವಸ್ತುವಿನ ಯಥಾರ್ಥಜ್ಞಾನವೇ ಅಪರೋಕ್ಷಜ್ಞಾನ. ಪರವಸ್ತುವಿನ ಪ್ರತ್ಯಕ್ಷವಾದ ಸರಿಯಾದ ತಿಳಿವಳಿಕೆಗೆ ಸಾಮಾನ್ಯವಾಗಿ ಮೂರು ತಡೆ

ಗಳುಂಟು. ಸಂಶಯ ವಿಪರ್ಯಾಸ ಅನಧ್ಯವಸಾಯವೆಂದು .ಇಲ್ಲವೆ ಜ್ಞಾನಾಭಾವ ಮಿಥ್ಯಾಜ್ಞಾನ ಸಂಶಯವೆಂದೂ ಆ ಮೂರು ತಡೆಗಳನ್ನು ವಿವರಿಸಬಹುದು. ಜಗತ್ತಿನಲ್ಲಿ ಅಸಂಖ್ಯ ಪದಾರ್ಥಗಳುಂಟು; ಅವೆಲ್ಲ ನಮಗೆ ಗೊತ್ತಿರುವದು ಸಾಧ್ಯವಿಲ್ಲ. ಸಮುದ್ರದ ತಳದೊಳಗೂ ಪೃಥ್ವಿಯ ಗರ್ಭದೊಳಗೂ ಆಕಾಶದ ಅಂತರಾಳದೊಳಗೂ ಅಳತೆಗೆ ಸಿಲುಕದಷ್ಟು ಪದಾರ್ಥಗಳು ಇದ್ದರೂ ಅವುಗಳ ಅರಿವು ಮನಸ್ಸಿಗೆ ಇಲ್ಲದೆ ಇರುವದರಿಂದ ಅದಕ್ಕೆ ಜ್ಞಾನಭಾವ ಸ್ಥಿತಿಯೆಂದು ಹೆಸರು. ಯಾವದೊಂದು ಪದಾರ್ಥವು ಗೊತ್ತಿರಬಹುದು. ಆದರೆ ಅದರ ಬಗೆಗೆ ಸರಿಯಾದ ತಿಳಿವಳಿಕೆಯಿಲ್ಲದಿರುವದು ಮಿಥ್ಯಾಜ್ಞಾನ ಅಥವಾ ವಿಪರ್ಯಯವೆನಿಸುವದು. ಹಗ್ಗವನ್ನು ಹಾವೆಂದು, ಮೋಟು ಮರವನ್ನು ಮನುಷ್ಯನೆಂದು ತಿಳಿಯುಂಟಾಗುವದು ಈ ವಿಪರ್ಯಯದ ಪರಿಣಾಮವಾಗಿ. ಯಾವುದೊಂದು ವಸ್ತುವಿನ ಬಗೆಗೆ ಅದು ಇರುವದೆಂಬ ಸಾಮಾನ್ಯ ತಿಳಿವಳಿಕೆಯಿದ್ದರೂ ಅದು ಹೀಗೆಯೇ ಇರುವದು ಅಥವಾ ಇರುವದಿಲ್ಲ ಎಂದು ನಿಶ್ಚಯವಾಗಿ ಗೊತ್ತಿಲ್ಲದಿರುವದೇ ಸಂಶಯವೆನಿಸಿಕೊಳ್ಳುವದು. ನಮ್ಮಲ್ಲಿ ಹಲವರಿಗೆ ಪರವಸ್ತುವಿನ ಕಲ್ಪನೆಯೇ ಇರುವದಿಲ್ಲ; ಇಂತಹವರು ಜ್ಞಾನಾಭಾವ ಸ್ಥಿತಿಯಲ್ಲಿರುವರು. ಇನ್ನು ಕೆಲವರು ಪರವಸ್ತುವಿನ ಇರವನ್ನು ಒಪ್ಪಿದರೂ ಅದರ ಬಗೆಗೆ ವಿಪರೀತವಾದ ಕಲ್ಪನೆಗಳನ್ನು ಮಾಡಿಕೊಂಡಿರುತ್ತಾರೆ; ಇಂತಹವರು ವಿಪರ್ಯಯ ಅಥವಾ ಮಿಥ್ಯಾಜ್ಞಾನ ಭೂಮಿಕೆಯಲ್ಲಿ ಇರುವರು. ಉಳಿದ ಹಲಕೆಲವರು ಪರವಸ್ತುವಿನ ನಿಶ್ಚಿತ ಸ್ವರೂಪವನ್ನು ತಿಳಿಯದೆ ಅದು ಹಾಗೂ ಇರಬಹುದು ಹೀಗೂ ಇರಬಹುದು ಎಂದು ಹೇಳುವರು; ಇಂತಹವರು ಸಂಶಯಸ್ಥಿತಿಯಲ್ಲಿರುತ್ತಾರೆ. ತೀರ ಸ್ವಲ್ಪ ಜನರು ಮಾತ್ರ ಪರವಸ್ತುವಿನ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಂಡಿರುತ್ತಾರೆ. ಇಂತಹ ಜನರೇ ಸಾಕ್ಷಾತ್ಕಾರಿಗಳು, ಅಪರೋಕ್ಷ ಜ್ಞಾನಿಗಳು, ಅನುಭಾವಿಗಳು.

ಪರವಸ್ತುವಿನ ಯಥಾರ್ಥವಾದ ಅನುಭಾವವು ಭಾವಭರಿತ ಜ್ಞಾನದಿಂದಲೆ ಸಾಧ್ಯ. ಬರಿಯ ಜ್ಞಾನದಿಂದಲ್ಲ, ಬರಿಯ ಜ್ಞಾನ ಅಥವಾ ವಿಚಾರ ಶಕ್ತಿಗೆ ಪ್ರಕೃತಿಯ ಪೃಥಃಕ್ಕರಣವು ಸಾಧ್ಯವಾದರೂ ಪರವಸ್ತುವು ಮಾತ್ರ ಅಣುವಿಗೆ ಅಣುವಾಗಿ ಮಹತ್ತಿಗೆ ಮಹತ್ತಾಗಿಯೇ ಉಳಿಯುವದು. ಅವೇ

ಭಾವಭರಿತ ಜ್ಞಾನಕ್ಕೆ ಅಂದರೆ ನಿರ್ಮಲ ಭಾವಬಲದಿಂದ ಪರಿಸ್ಫುಟಗೊಂಡ ವಿಚಾರ ಶಕ್ತಿಗೆ (Intuition) ಮಾತ್ರ ತಿಳಿಯುವದು. ಈ ಸಂಗತಿಯನ್ನು "ಉತ್ತಮಾಂಗವನು ಉರಸ್ಥಲದಲ್ಲಿ ಬಯಚಿಡುವ ಬಯಕೆಯನು ಆರೈದು ನೋಡಾ" ಎಂಬ ಮಾತುಗಳಲ್ಲಿ ಒಬ್ಬ ಶರಣನು ಬಹು ಮಾರ್ಮಿಕವಾಗಿ ಹಾಡಿರುವನು. ಶಿರವನ್ನು ಉರದಲ್ಲಿ ಅಡಗಿಸಬೇಕು. ಜ್ಞಾನವನ್ನು ನಿರ್ಮಲ ವಾದ ಅಂತಃಕರಣದ ಎರಕಕ್ಕೆ ಹೊಯ್ಯಬೇಕು. ಇಂತಹ ಭಾವಬಲದಿಂದ ಎರಕಗೊಂಡ ವಿಚಾರಶಕ್ತಿಯೇ ದೇವನ ಇರವನ್ನು ಕರಗತಮಾಡಿ ಕೊಡುವದು. ದೇವನು ಮಾನವನಿಗೆ ದಯಪಾಲಿಸಿದ ಶಕ್ತಿಗಳಲ್ಲಿ ವಿಚಾರ ಶಕ್ತಿಯೂ ಭಾವನಾಶಕ್ತಿಯೂ ಬಹಳ ಮಹತ್ವವಾದವುಗಳು. ತಲೆಯು ವಿಚಾರಶಕ್ತಿಯ ಕೇಂದ್ರವಾಗಿರುವಂತೆ ಎದೆಯು ಅಥವಾ ಹೃದಯವು ಭಾವನಾಶಕ್ತಿಯ ರಂಗಸ್ಥಳವಾಗಿರುವದು. ಇವೆರಡೂ ಶಕ್ತಿಗಳು ಅನುಕ್ರಮ ಗೊಂಡು ಅರಳುತ್ತ ಹೋದಹಾಗೆ ಮಾನವನ ಉನ್ನತಿಯಾಗುವದು. ಆದರೆ ಈ ವಿಚಾರ ಭಾವನೆಗಳಲ್ಲಿ (Thoughts and feelings) ಒಂದು ಬಗೆಯ ಪರಸ್ಪರ ಹೋರಾಟವೂ ಮೇಲಾಟವೂ ಸಂತತವಾಗಿ ಇದ್ದುದು ಕಂಡುಬರುತ್ತದೆ. ಇವುಗಳಲ್ಲಿಯ ಪರಸ್ಪರ ಹೋರಾಟವನ್ನು ಹುಸಿಗೊಳಿಸಿ ಹೊಂದಿಕೆಯನ್ನುಂಟುಮಾಡಿಕೊಳ್ಳುವದೇ ಮಾನವನು ಗಳಿಸಿಕೊಳ್ಳಬೇಕಾದ ಸಿದ್ಧಿ. ಆದರೆ ಈ ಹೊಂದಿಕೆಯನ್ನು ಪಡೆದುಕೊಳ್ಳುವದು ಸುಲಭ ಸಾಧ್ಯವಲ್ಲ. ಮಾನವನು ನೈಜವಾಗಿ ಭಾವನಾಪ್ರಧಾನವಾದ ಪ್ರಾಣಿಯಾಗಿ ರುವನು. ಭಾವಶಕ್ತಿಯು ಜಾಗ್ರತಗೊಂಡು ಬಗೆಬಗೆಯ ಭಾವನೆಗಳೇಳು ವವು ಮಾನವನ ಮನೋಮಂಡಲದಲ್ಲಿ; ಹಿಂದಿನಿಂದ ವಿಚಾರ ಶಕ್ತಿಯು ಜಾಗ್ರತವಾಗಿ ಆ ಭಾವನೆಗಳಿಗೆ ಒಪ್ಪಹಾಕಿ ರೂಪಿಸುವದು. ಆದುದರಿಂದ ವಿಚಾರ ಶಕ್ತಿಗಿಂತ ಭಾವನಾಶಕ್ತಿಯು ಅಧಿಕವಾದುದು. ಯಥಾರ್ಥಜ್ಞಾನ ಮಾಡಿಕೊಂಡು ಅಪರೋಕ್ಷಾನುಭೂತಿಯನ್ನು ಇಲ್ಲವೆ ಆತ್ಮಾನಂದವನ್ನು ಪಡೆಯಬೇಕೆನ್ನುವವರು ತಮ್ಮ ಭಾವನೆಗಳನ್ನು ಪರಿಶುದ್ಧಗೊಳಿಸಬೇಕು. ಏಕೆಂದರೆ ಭಾವಬಲದಿಂದಲೇ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳು ನಡೆದಿರುವವು; ಭಾವಬಲದಿಂದಲೇ ಸಕಲ ವ್ಯವಹಾರಗಳು ಸಾಗಿರುವವು; ಭಾವಬಲದಿಂದಲೇ ಅಘಟಿತ ಘಟನೆಗಳು ಜರುಗುವವು. ಭಾವಬಲವು

ದುರ್ಬಲವಾಗಿರುವ ಇಂದಿನವರಲ್ಲಿ ಜೀವನವು ಮೂಲದಲ್ಲಿ ಶ್ರದ್ಧೆಯನ್ನೇ ಅವಲಂಬಿಸಿರುವದೆಂಬ ಮಾತಿನಲ್ಲಿ ವಿಶ್ವಾಸವಿಲ್ಲ. ನಿಜಕ್ಕೂ ಜೀವನ ವ್ಯವಹಾರವೆಲ್ಲ ಶ್ರದ್ಧಾಬಲದಿಂದಲೇ ಸಾಗಿರುವದು. ಯಾವದೊಂದು ಕಾರ್ಯವು ಅವ್ಯಾಹತವಾಗಿ ಇಂದಿನವರೆಗೆ ನಡೆದು ಬಂದರೆ ಅದೇ ಕಾರ್ಯವು ಮುಂದೆಯಾದರೂ ನಡೆಯಬಹುದೆಂಬ ಆ ಊಹೆಗೆ ನಾವು 'ಅನುಮಾನ'ವೆಂದು ಕರೆಯುತ್ತೇವೆ. ಆದರೆ ಅದೂ ಸಹ ಮೂಲದಲ್ಲಿ ಶ್ರದ್ಧಾತ್ಮಕವಾಗಿಯೇ ಇರುವದೆಂಬದು ಹೊಳೆಯದೇ ಇರದು. ಭಾವ ಶುದ್ಧಿಗೆ ನೈತಿಕ ಆಚರಣೆಯೂ ಶ್ರದ್ಧಾಬಲವೂ ಅವಶ್ಯವಾಗಿ ಬೇಕು. ಅನುಭಾವಿಗಳು, ಸದ್ಭಕ್ತರು ಈ ಭಾವಬಲದಿಂದಲೇ ಅಥವಾ ಭಾವಭರಿತ ಜ್ಞಾನದಿಂದಲೇ ಆತ್ಮಸಾಕ್ಷಾತ್ಕಾರವನ್ನು ಪಡೆದು ಅದರಿಂದ ಶೋಕ ನಿವೃತ್ತಿಯನ್ನೂ, ನಿರರ್ಗಳವಾದ ಆನಂದವನ್ನೂ, ಸುಲಲಿತವಾದ ಮೃದು ಮಧುರವಾದ ಸಾಮರಸ್ಯವನ್ನೂ ಸಾಧಿಸಿದರು.

ಅನುಭಾವಿಯು, ಅಥವಾ ಅಪರೋಕ್ಷಜ್ಞಾನಿಯು ಸಾಧಿಸಬೇಕಾದುದು ಸಾಮರಸ್ಯ; ಬರಿಯ ರಸವಲ್ಲ. ಸಾಹಿತಿಗೆ ರಸವೇ ಜೀವಾಳವಾದರೆ ಸ್ವಾನುಭಾವಿಗೆ ಸಮರಸವೇ ಜೀವಾಳ. ಸಾಹಿತಿಯ ಆನಂದವು ಅಲೌಕಿಕ ವಾದರೆ ಸ್ವಾನುಭಾವಿಯಾದ ಸದ್ಭಕ್ತನ ಆನಂದವು ಪಾರಲೌಕಿಕ ಅಥವಾ ಪಾರಮಾರ್ಥಿಕವು. 'ದೇವಾ, ನಿಮ್ಮ ಪೂಜಿಸಿ ಸಮರತಿ ಸಮಸುಖ ಸಮಕಳೆಯಾಗದಿದ್ದರೆ ಅದೇತರ ಪೂಜೆ?' ಎಂದು ಬಸವಣ್ಣನು ಕೇಳಿರು ವನು. ವಸ್ತುವಿನ ಅಂತರಂಗದಲ್ಲಿಯೂ ವ್ಯಕ್ತಿಯ ಅಂತರಂಗದಲ್ಲಿಯೂ ಒಂದೇ ಒಂದಾದ ಆತ್ಮತತ್ವವಿದೆ, ಒಂದೇ ಒಂದಾದ ಚಿತ್‌ಪ್ರಭಾಚೈತನ್ಯ ಸಾಮರ್ಥ್ಯವು ಚಿಮ್ಮುತ್ತಿದೆ—ಎಂದರಿತು ಅನುಭವಿಸುವದೇ ಸಾಮರಸ್ಯ. ಇದೇ ಸಮ್ಯಕ್‌ಜ್ಞಾನ, ಇದೇ ಸ್ವಾನುಭಾವ. ಇಂತಹ ಸ್ವಾನುಭಾವದಿಂದ ಸ್ಫುರಣಗೊಂಡ ಮಹತ್ತರವಾದ ಭಾವಶಕ್ತಿಯು ಸ್ಪಂದಿಸುವದು ಶರಣರ ಹಾಗೂ ದಾಸರ ಸಾಹಿತ್ಯದಲ್ಲಿ. ಬಸವಣ್ಣನ ವಚನಗಳಲ್ಲಿಯೇ ಆಗಲಿ, ಮಹಾದೇವಿ ಅಕ್ಕನ ವಚನಗಳಲ್ಲಿಯೇ ಆಗಲಿ, ದಾಸರ ಪದಗಳಲ್ಲಿಯೇ ಆಗಲಿ 'ಭಕ್ತಿಜೀವನ ಸ್ಪಂದನದ ಛಂದೋಗತಿಯು' ಚಲ್ಲವರಿದಿರುವದು. ಹಿಂದಣ ಕವಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುವದು ಲೋಕಾನುಭವವು.

ಅಲ್ಲಿ ಸ್ವಾನುಭಾವವು ಛಾಯಾಮಾತ್ರವಾಗಿ ದೊರೆಯುವದು. ಹಂಪೆಯ
ಹರಿಹರನಲ್ಲಿ ಮಾತ್ರ ಈ ಸ್ವಾನುಭಾವವು ಅವನ ಕೃತಿಗಳ ತುಂಬೆಲ್ಲ ಹಾಸು
ಹೊಕ್ಕಾಗಿ ಹೆಣೆದುಕೊಂಡಿದೆ. ಅವನ ರಗಳೆಗಳ ಇಲ್ಲವೆ ಶತಕಗಳ ಯಾವ
ಪುಟವನ್ನಾದರೂ ತೆರೆದರೆ, ಯಾವ ಕಥಾನಕವನ್ನಾದರೂ ಓದಿದರೆ ಅನು
ಭಾವಗಳು ಅಲೆಅಲೆಗಳಾಗಿ ಉಕ್ಕಿ ಬಂದು ವಿಭಾವಗಳು ಅಚ್ಚೊತ್ತಿದ
ಕೊರೆದು ಕಟೆದು ತೆಗೆದ ಪುತ್ಥಳಿಯಂತೆ ಅಂಗೈಯ ಮೇಲಣ ನೆಲ್ಲಿಯ
ಓದುಗರ ಮನಸ್ಸಿನಲ್ಲಿ ಸ್ಫುಟವಾಗಿ ನೆಟ್ಟುಬಿಡುವವು. ಮೇರೆದಪ್ಪಿ ಹರಿಯು
ಹರಿಹರನ ಭಕ್ತಿರಸ ಪ್ರವಾಹದಲ್ಲಿ ಅಂಕೆಯಿಲ್ಲದ ಬುದ್ಧಿಯು ಮಿಂದು, ತ
ಶಂಕೆಗಳನು ಕಳೆದುಕೊಂಡು ನಿಶ್ಶಂಕ ನಿರ್ಮಲವಾದ ಭಾವಶಕ್ತಿಯಾ
ಪರಿಣಮಿಸುವದು. ಆದ್ದರಿಂದ ಸಾಮಾನ್ಯವಾಗಿ ಸಾಹಿತ್ಯದಲ್ಲಿ ಕಂಡ
ಬಾರದ ಸಾಮರಸ್ಯದ ಸ್ವರಸಮ್ಮೇಳನವು ಭಕ್ತಸಾಹಿತ್ಯದಲ್ಲಿ ಒಡಮ
ಡುವದು. ಅನುಭಾವಿಯ ಆನಂದೋದ್ರೇಕದಿಂದ ಹೊರಹೊಮ್ಮುವ ದೇವ
ನ್ಮಾದದ ದಿವ್ಯರಸದ ಕುಲುಮೆಯಲ್ಲಿ ಮನದ ವಿಕೃತಿಗಳೆಂಬ ಕುಮ
ತತಿಗಳು ಕಮರಿ ಕರಕಾಗಿ ಸೀದು ಸೀಕರಿಯಾಗಿ ಹೋಗುವವು. ಸಂಚಾ
ಭಾವಗಳು ಹುಂಹಂಚಾಗಿ ಸತಿಭಾವವು ಸ್ಥಾಯಿಯಾಗಿ ನಿರ್ಮಲ ಮತಿಯ
ನೆಲೆಗೊಳ್ಳುವದು. ಹೀಗೆ ನೆಲೆಗೊಂಡ ನಿರ್ಮಲ ಮತಿಯ ಯೋಗದಿಂ
ತರ್ಕಾತ್ಮಕ ಬುದ್ಧಿ ಸ್ಫುರಣಾತ್ಮಕ ಭಾವ ಇವುಗಳ ವಿಯೋಗದಿಂದ ದುಷ್ಟ
ವೃತ್ತಿಗಳಳಿದು ಸತ್ಪ್ರವೃತ್ತಿಗಳು ಬೆಳೆಯುವುದು. ಇದೇ ಸದ್ಭಕ್ತ ಸಾಹಿತ್ಯ
ಗೊತ್ತು; ಸ್ವಾನುಭಾವದ ಗುರಿ. ಮತ್ತು ಮಾನವ ಸಂತತಿಯ ಮನೋಭಾವ
ಗಳನ್ನು ರಾಗ ರಸಗಳನ್ನು ಬುದ್ಧಿ ಕಲ್ಪನೆಗಳನ್ನು ಸರಲವಾಗಿ ಸುಲಲಿತವಾ
ವಿವರಿಸುವುದಲ್ಲದೆ ಮಾನವರ ಭಾವಶಕ್ತಿಯು ಅಳಿಯದೆ ಬೆಳೆಯುವಂತೆ ಅವ
ಮೂಲ ಗತಿಮತಿಗಳು ನಿರ್ಮಲವಾಗುವಂತೆ ಅವರಿಗೆ ಬೋಧಿಸಿ ಅವರನ್ನು
ಸನ್ಮಾರ್ಗಕ್ಕೆ ಅಣಿಗೊಳಿಸುವದೇ ಸದ್ಧರ್ಮದ ಸದ್ಭಕ್ತ ಸಾಹಿತ್ಯದ ಮರ್ಮ;

ಈವರೆಗಿನ ವಿವೇಚನೆಯಿಂದ ವಿಜ್ಞಾನ ಮತ್ತು ಅನುಭಾವ ಇವೆರಡಕ್ಕೂ
ನಿರ್ದಿಷ್ಟವಾದ ಗುರಿಗಳಿವೆ, ನಿರ್ದಿಷ್ಟವಾದ ಅನ್ವೇಷಣಗಳಿವೆ ಎಂದ ಹಾಗಾ
ಯಿತು. ನಮ್ಮ ಇಂದ್ರಿಯಗಳಿಗೆ ಗೋಚರವಾದ ವಿಷಯಗಳನ್ನು ಯಥಾರ್ಥ
ವಾಗಿ ತಿಳಿದುಕೊಂಡು ಆ ವಿಷಯಗಳಲ್ಲಿ ಅಡಗಿರುವ ನಿಯಮಗಳನ್ನು

ಸ್ಪಷ್ಟವಾಗಿ ಸೂತ್ರಿಸುವದು ವಿಜ್ಞಾನದ ಕೆಲಸ. ವಿಶ್ವವನ್ನೆಲ್ಲ ಆವರಿಸಿ ಅದನ್ನು ಮೀರಿ ನಿಂತಿರುವ ವಿರಾಟ್ ಪುರುಷನ ಪರಿಚಯವನ್ನು ಮಾಡಿಕೊಡುವದು ಅನುಭಾವದ ಕೆಲಸ. ವಿಜ್ಞಾನವು ಉಪಯೋಗಿಸುವ ಪ್ರಮಾಣಗಳು ಪ್ರತ್ಯಕ್ಷ, ತರ್ಕ, ಪ್ರಯೋಗ. ಅನುಭಾವವು ಉಪಯೋಗಿಸುವ ಪ್ರಮಾಣಗಳು. ಅಪರೋಕ್ಷಜ್ಞಾನ, ಆಪ್ತವಚನ, ಆರಾಧನೆ. ವಿಜ್ಞಾನ ನಿಂತಿರುವದು ವಿಮರ್ಶೆಯ ಮೇಲೆ .ಅನುಭಾವವು ನಿಂತಿರುವದು ಭಕ್ತಿಯ ಮೇಲೆ; ಭಾವ ಶುದ್ಧಿ ಅಥವಾ ಹೃದಯ ನೈರ್ಮಲ್ಯದ ಮೇಲೆ. ತರ್ಕಕ್ಕೊಪ್ಪುವಂತೆ ವಿಷಯಗಳ ವಿನ್ಯಾಸಗೊಳಿಸುವದು ವಿಜ್ಞಾನದ ಉದ್ದೇಶ. ಹೃದಯವನ್ನು ಅರಳಿಸಿ ಅದರಲ್ಲಿ ಉತ್ಸಾಹ ಆನಂದಗಳು ಉಕ್ಕುವಂತೆ ಮಾಡುವದು ಅನುಭಾವದ ಉದ್ದೇಶ. ವಿಜ್ಞಾನದ ಗುರಿ ಶಕ್ತಿ, ಅನುಭಾವದ ಗುರಿ ಶಾಂತಿ.

ಹೀಗೆ ವಿಜ್ಞಾನ ಮತ್ತು ಅನುಭಾವ ಇವೆರಡರ ದೃಷ್ಟಿ-ಧ್ಯೇಯಗಳು, ಪ್ರಮಾಣ-ಪ್ರಮೇಯಗಳು ಬೇರೆಬೇರೆಯಾಗಿರುವದೆಂದು ಕಂಡುಬರುವದು. ಇವುಗಳ ವೈವಿಧ್ಯ ಸ್ವಾಭಾವಿಕವಾಗಿರುತ್ತದೆ. ವೈವಿಧ್ಯತೆಯಿಂದ ವಿರೋಧ ಹುಟ್ಟಬೇಕಾಗಿಲ್ಲ. ಆದರೂ ಅನೇಕ ವೇಳೆ ವಾಸ್ತವವಾಗಿ ವಿವಿಧತೆಯು ವಿರೋಧದಲ್ಲಿ ಪರಿಣಮಿಸುವದು. ತುಂಬಿದ ಜೀವನಕ್ಕೆ ವಿಜ್ಞಾನದ ಫಲವೂ ಬೇಕು, ಅನುಭಾವದ ಫಲವೂ ಬೇಕು. ವಿಶ್ವದ ಒಂದೊಂದು ಪದರನ್ನು ಬಿಡಿಸಿ ಬಿಡಿಸಿ ಅದನ್ನು ಹಿಡಿತಕ್ಕೆ ತಂದು ಕೊಡುವದು ವಿಜ್ಞಾನದ ಉದ್ದೇಶ. ಒಂದು ಗೂಡಿಸುವ ಸೂತ್ರಾತ್ಮನನ್ನು ಸಾಕ್ಷಾತ್ಕರಿಸಿ ಕೊಡುವದು ಅನುಭಾವದ ಉದ್ದೇಶ. ವಿಶ್ವದ ಒಂದೊಂದು ಭಾಗವು ನಮ್ಮ ಅವಗಾಹನೆಗೆ ಬರಬೇಕು; ಅಲ್ಲದೆ ಅದರ ಪೂರ್ಣಸ್ವರೂಪವೂ ಪ್ರಕಾಶಿತವಾಗಬೇಕು. ಅದರ ಹೊರಮೈಯನ್ನು ತಡವಿ ನೋಡಬೇಕು. ಹಾಗೆಯೇ ಅದರ ಆತ್ಮವನ್ನು ಒಳಹೊಕ್ಕು ಕೂಡಬೇಕು. ವಿಶ್ವದ ಹೊರಮೈ ತಿಳಿಯದೆ ಆದರ ಆತ್ಮವನ್ನು ಸಾಧಿಸಲು ಹೊರಟರೆ ನಮಗೆ ಕೊನೆಯಲ್ಲಿ ಸಿಗುವದು ಬರಿಯ ಶೂನ್ಯವೆ. ಅದರ ಆತ್ಮವನ್ನು ಬಿಟ್ಟು ಬರಿಯ ಹೊರಮೈಯನ್ನು ಹುಡುಕಿದರೆ ನಮಗೆ ದೊರೆಯುವದು ಬರಿಯ ಅಸ್ಥಿ ಪಂಜರಗಳೆ! ಜೀವನಸಪೂರ್ಣತೆಗಾಗಿ ವಿಜ್ಞಾನದ ಬಾಹ್ಯಪರೀಕ್ಷಣೆಯೂ ಬೇಕು, ಅನುಭಾವದ ಅಂತರ್ನಿರೀಕ್ಷಣೆಯೂ ಬೇಕು. ವಿಜ್ಞಾನದ

ಸಂಪರ್ಕವಿಲ್ಲದ ಅನುಭಾವವು ಹಗಲುಗನಸಾಗಿ ಪರಿಣಮಿಸುವದು. ಅನು
ವದ ಸಂಪರ್ಕವಿಲ್ಲದ ವಿಜ್ಞಾನವು ಕೊನೆಮೊದಲಿಲ್ಲದ ಕತೆಯಂತೆ
ವಾಗುವದು. ಬರಿಯ ಅನುಭಾವವನ್ನು ಆಶ್ರಯಿಸಿ ಹೋಗುವದು
ನೆಲವನ್ನು ಮರೆತು ಆಗಸವನ್ನು ನೋಡುತ್ತ ನಡೆದಂತೆ ! ಬರಿಯ ವಿಜ್ಞಾ
ವನ್ನೇ ಹಿಡಿದು ಹೋಗುವದೆಂದರೆ ಆಗಸದ ಅಂದವನ್ನು ಮರೆತು ನೆಲವ
ಮೂಸಿ ನೋಡಿಕೊಂಡು ಹೋಗುವ ಮೃಗಗಳಂತೆ, ಅನುಭಾವವನ್ನೆ ಮ
ವಿಜ್ಞಾನದಲ್ಲಿ ಮಗ್ನವಾಗುವದರಿಂದ ಆಗುವ ಅನಾಹುತಕ್ಕೆ ಇಂ
ಪಾಶ್ಚಿಮಾತ್ಯ ಜೀವನದ ಧಾರ್ಮಿಕ ದುರ್ದೆಶೆಯೇ ದೃಷ್ಟಾಂತ. ವಿಜ್ಞಾ
ವಾಸನೆಯಿಲ್ಲದೆ ಬರಿಯ ಧರ್ಮಶ್ರದ್ಧೆಗೆ ಮರುಳಾಗುವದರಿಂದ ಆ
ಅನಿಷ್ಟಕ್ಕೆ ಈಗಿನ ಪೌರ್ವಾತ್ಯರ ಆರ್ಥಿಕ ಮತ್ತು ರಾಷ್ಟ್ರೀಯ ದುರ್ದೆಶೆ
ನಿದರ್ಶನ. ಪ್ರಾಕೃತದ ಪ್ರೇಮ ಮತ್ತು ಪ್ರಾತಿಭಚಕ್ಷು ಇವೆ
ಸಮನ್ವಯವೇ ನಮಗಿಂದು ಬೇಕಾದ ಗಂಟು. ಈ ಸಮನ್ವಯದ ಸಾರವ
ಅಲ್ಲಮಪ್ರಭುದೇವರ ವಚನವೊಂದು ಹೇಗೆ ಹೇಳುತ್ತದೆ :

> ಬೀಜರತ್ನದ ನೆಲೆಯ ಭೂಚರರು ಬಲ್ಲರೆ ?
> ವಾಚಾಳಕರ ಮಾತಿಗಿದು ಸಲ್ಲದು ॥
> ಆಚಾರದನುಭಾವ ಭಕ್ತಿ ನೆಲೆಗೊಂಡವಗೆ
> ಸೂಚಿಸುವುದಾ ಮಹಾ ಪರಮ ಪದವು ॥

ಆಚಾರ ಹೇತುವಾದ ನೀತಿಯ ತಳಹದಿಯ ಮೇಲೆ ವಿಜ್ಞಾನ ಅನುಭಾ
ಳೆರಡೂ ನೆಲೆಗೊಂಡರೇನೇ ಸರ್ವಾಂಗ ಸುಂದರವಾದ ಪ್ರಗತಿಯಾಗುವದೆ
ಪ್ರಭುದೇವರು ಹೇಳಿರುವರು

ಜೀವನವನ್ನು ಸಮನ್ವಯ ದೃಷ್ಟಿಯಿಂದ ನೋಡದ ಕಾರಣ ಮೂ
ಪಡುವಣದವರ್ರೂ ನಿಜವಾದ ಮಾನವ ಪ್ರಗತಿಯನ್ನು ಸಾಧಿಸ
ಹೋದರು. ಇಬ್ಬರೂ ಪ್ರಗತಿಪಥದಲ್ಲಿ ಗೆಲವನ್ನು ಪಡೆಯದೆ ಸೋಲ
ತಿಂದರು. ಪೂರ್ವದೇಶದವರು ಕೇವಲ ಅನುಭಾವದ ಮೇಲೆ ದೈವ
ಪ್ರಭುವಿನ ಪ್ರಸಾದಕ್ಕೆ ಬಾಯ್ದೆರೆದು ಪುರುಷ ಪ್ರಯತ್ನಕ್ಕೆ ತಿಲಾಂಜಲಿನಿ
ದೈವವಾದಿಯಾಗಿ ಕರ್ತವ್ಯ ಮೂಢರಾದರು ಪಶ್ಚಿಮ ದೇಶದವರು ಬರಿ
ಬುದ್ಧಿ ಬಲವೇ ಬಲವೆಂದು ನಂಬಿ ತನ್ನ ಸೋಲಿಗೆ ಕಾರಣಗಳನ್ನು ಅನ್ಯ

ಹುಡುಕಲೆಳಿಸಿದರು ಅದನ್ನು ಸುಧಾರಿಸಲೋಸುಗ ಇಮ್ಮಡಿಯಾದ ಉತ್ಸಾಹದಿಂದ ಹೋರಾಡುತ್ತ ಕೊನೆಗೆ ತಮ್ಮ ಮನಸ್ಸಿನ ಶಾಂತಿಯನ್ನು ಕಳೆದು ಕೊಳ್ಳುವದಲ್ಲದೆ ಅನ್ಯ ಸಮಾಜದಲ್ಲಿ ಆಂದೋಲನವನ್ನು ಹುಡು ವರು. ಇದರಿಂದಾಗಿ ಪೌರ್ವಾತ್ಯರಿಗೆ ಕೊನೆಗೆ ಸ್ಮಶಾನ ಶಾಂತಿ ಸದೃಶವಾದ ನಿವೃತ್ತಿಯೂ, ಪಾಶ್ಚಿಮಾತ್ಯರಿಗೆ ಬಲಾತ್ಕಾರ ಪ್ರವೃತ್ತಿಯೂ ಅನಿವಾರ್ಯ ವಾಗಿ ಬಂದು ಬಿಡುವವು. ಆದರೆ ಇಂತಹ ಪ್ರವೃತ್ತಿ ನಿವೃತ್ತಿಗಳೆರಡೂ ನಿರುಪಯುಕ್ತವಾದುವುಗಳೇ ! ಏಕಂದರೆ ಇವೆರಡಲ್ಲಿಯೂ ಸಮನ್ವಯವಿಲ್ಲ. ವಿಶ್ವದಲ್ಲಿ ಪುರುಷ ಪ್ರಯತ್ನಕ್ಕೂ ಸ್ಥಾನ ಉಂಟು. ಹಾಗೆಯೇ ಪ್ರಭುವಿನ ಪ್ರಸಾದಕ್ಕೂ ಮಾನವುಂಟು ಎಂದರಿತು, ಪ್ರಯತ್ನ ಪ್ರಸಾದಗಳ (Force and Grace) ತತ್ವವನ್ನು ಅರಗಿಸಿಕೊಂಡು ಕಾರ್ಯಪ್ರವೃತ್ತನಾದರೆ ದೈವವಾದಿಯಾಗುವದರಿಂದಾಗುವ ಅಸಹಾಯತೆಯೂ ಬಲಾತ್ಕಾರ ಪ್ರವೃತ್ತಿ ಯಿಂದೊಗೆವ ಮನಸ್ಸಿನ ಅರಾಜಕತೆಯೂ ತೊಲಗುವವು; ಮನಸ್ಸಿನ ಶಾಂತಿಯು ನೆಲೆಸಿ ಪ್ರಗತಿಯು ಸಾಧಿಸುವದು. ಆದುದರಿಂದ ಪ್ರಯತ್ನ ಪ್ರಸಾದಗಳ ವಿಜ್ಞಾನ–ಅನುಭಾವಗಳ ಸಮನ್ವಯವೇ ನಮಗಿಂದು ಬೇಕಾದ ಗಂಟಾಗಿರುವದು.

---

# ಶಿಕ್ಷಣದ ವ್ಯಾಪ್ತಿ

ಮಾನವನಿಗೆ ಜ್ಞಾನವಾಗುವದು ಸಾಮಾನ್ಯವಾಗಿ ಎರಡು ಬಗೆಯಿಂದ: ಒಂದು ಇಂದ್ರಿಯ ಮುಖಾಂತರವಾಗಿ, ಇನ್ನೊಂದು ಆತ್ಮನ ಮುಖಾಂತರ ವಾಗಿ ಇವುಗಳಲ್ಲಿ ಒಂದು ಬುದ್ಧಿಪ್ರಧಾನವಾದುದು, ಇನ್ನೊಂದು ಭಾವನಾಪ್ರಧಾನವಾದುದು. ಮಾನವನು ಇಂದ್ರಿಯಗಳ ಮುಖಾಂತರ ಗಳಿಸಿದ ಬಾಹ್ಯಪ್ರಂಪಚದ ಜ್ಞಾನಕ್ಕೆ ಬೌದ್ಧಿಕ ಉಪಲಬ್ಧಿಯೂ ಆತ್ಮನ ಮುಖಾಂತರ ಸಂಪಾದಿಸಿದ ಅಂತರ್ ಜೀವನದ ಜ್ಞಾನಕ್ಕೆ ಭಾವಿಕ ಉಪ ಲಬ್ಧಿಯೂ ಪ್ರಾಮುಖ್ಯವಾಗಿವೆ. ಒಂದರಿಂದ ಹೊರಬೋಧೆಗೆ ಅವಕಾಶ ವುಂಟಾಗುವದಾದರೆ ಇನ್ನೊಂದರಿಂದ ಒಳಬೋಧೆಗೆ ಅನುವಾಗುತ್ತದೆ. ಹೊರಬೋಧೆಗೆ ಅವಶ್ಯವಾಗಿರುವ ಉಪಕರಣಗಳಲ್ಲಿ ತರ್ಕಸರಣಿ, ತುಲನಾತ್ಮಕದೃಷ್ಟಿ, ಬಾಹ್ಯಪರೀಕ್ಷಣ ಇತ್ಯಾದಿ ಉಚ್ಚಸ್ಥಾನ ಪಡೆದಿವೆ. ಹಾಗೆಯೇ ಒಳಬೋಧೆಗೆ ಅಗತ್ಯವಾಗಿರುವ ಸಾಧನಗಳಲ್ಲಿ ಸ್ಫುರಣಾತ್ಮಕ ವಾಹಿನಿ, ತಾದಾತ್ಮ್ಯದೃಷ್ಟಿ, ಅಂತರ್‌ನಿರೀಕ್ಷಣೆ ಇತ್ಯಾದಿ ಉನ್ನತಸ್ಥಾನ ಪಡೆದಿವೆ. ಬರಿಯ ಬೋಧೆಯಷ್ಟೇ ಶಿಕ್ಷಣವಲ್ಲ; ಅಕ್ಷರಾಭ್ಯಾಸವೇ ಶಿಕ್ಷಣದ ಗುರಿಯಲ್ಲ; ಅಥವಾ ಶಿಕ್ಷಣಕ್ಕೆ ಅದು ಮೊದಲ ಪಾಠವೂ ಅಲ್ಲ. ಮಾನವನಲ್ಲಿ ಹುದುಗಿದ ಅಂತಶ್ಶಕ್ತಿಯನ್ನು–ಆತ್ಮಶಕ್ತಿಯನ್ನು ಒಡಮೂಡಿ ಸುವದು ಶಿಕ್ಷಣದಲ್ಲಿ ಸಮಾವೇಶವಾಗುತ್ತದೆ. ಮೆಯ್, ಮನ, ಆತ್ಮ ಇವುಗಳಲ್ಲಿ ಸಮನ್ವಯವಾದ ಸಂಸ್ಕಾರವನ್ನುಂಟುಮಾಡುವದು ಶಿಕ್ಷಣದಲ್ಲಿ ಸಮಾವೇಶವಾಗುವದರಿಂದ ಶಿಕ್ಷಣದ ಹೊಣೆಯನ್ನು ಹೊತ್ತವರ ಮೇಲೆ ಬಹು ದೊಡ್ಡ ಹೊರೆ ಇರುತ್ತದೆ. ಶಿಕ್ಷಣದ ಅಂಗದಲ್ಲಿ ಬರಿಯ ಹೊರ ಬೋಧೆಯಿಂದಲೂ ಪ್ರಯೋಜನವಿಲ್ಲ, ಬರಿಯ ಒಳ ಬೋಧೆ ಯಿಂದಲೂ ಪ್ರಯೋಜನವಿಲ್ಲ; ಯಾಕಂದರೆ ಶಿಕ್ಷಣದ ಪರಿಣಾಮದಿಂದ ಮಾನವನ ಅಖಂಡವಾದ ಒಳಹೊರಗಿನ ವ್ಯವಹಾರವೇ ಮಾರ್ಪಡ ಬೇಕಾಗುವದು.

ಪಡುವಣದವರು ಬುದ್ಧಿಪ್ರಧಾನ ಜೀವಿಗಳು; ಆದುದರಿಂದ ಅವರ

ಬೌದ್ಧಿಕ ಉಪಲಬ್ಧಿಗೆ (Intellectual attainment) ಗಮನವನ್ನು ಕೊಟ್ಟಿದ್ದಾರೆ. ಆದರೆ ಮೂಡಣದವರು ಭಾವನಾಪ್ರಧಾನ ಜೀವಿಗಳು; ಅದಕ್ಕಾಗಿ ಅವರು ಕೇವಲ ಭಾವನೆಯ ಉಪಲಬ್ಧಿಗೆ (Intuitional attainment) ಮನ್ನಣೆಯನ್ನೀಯುತ್ತ ಬಂದಿದ್ದಾರೆ. ಇದರಿಂದಾಗಿ ಅವರಲ್ಲಿ ವಿಶೇಷವಾಗಿ ಭಾರತೀಯರಲ್ಲಿ ತತ್ವಜ್ಞಾನವು ಬೆಳೆದು ಬಂದು ಅವರು ಕೇವಲ ಬ್ರಹ್ಮಾತ್ಮೈಕ್ಯವಾದ ಪಿಂಡಬ್ರಹ್ಮಾಂಡಗಳ ಸಮರಸದ ವಿಚಾರದಲ್ಲಿ ಮಗ್ನರಾದರು. ಅವರಿಗೆ ಸುತ್ತಲು ಎತ್ತೆತ್ತ ಕಾಣುವದೆಲ್ಲ, ಬ್ರಹ್ಮ; ಸರ್ವಂ ಖಲ್ವಿದಂ; ಬ್ರಹ್ಮ; ಬ್ರಹ್ಮವನ್ನುಳಿದು ಇನ್ನಾವುದೂ ಇಲ್ಲ. ಅವರ ವಿಚಾರದಲ್ಲಿ ಪ್ರಕೃತಿಗೆ ಒಂದು ಪ್ರತ್ಯೇಕವಾದ ಸ್ಥಾನವಿರಲಿಲ್ಲ. ಆದರೆ ಅವರು ವೈಜ್ಞಾನಿಕ ಪಥವನ್ನು ಮೆಟ್ಟಿದುದು ವೇದ ಕಾಲದ ತರುವಾಯ ಸಾಂಖ್ಯರ ಕಾಲದಿಂದೀಚೆಗೆ. ಆತ್ಮನಲ್ಲಿ ಸೇರಿಹೋಗಿದ್ದ ಪ್ರಕೃತಿ (Nature) ಯನ್ನು ವಿಂಗಡಿಸಿ ಅದಕ್ಕೆ ಸ್ವತಂತ್ರವಾದ ಅಗ್ರಸ್ಥಾನವೊಂದನ್ನು ಕೊಟ್ಟವರು ಸಾಂಖ್ಯರು. ಇದರಿಂದ ಪ್ರಪಂಚದ ಆಡಳಿತವೆಲ್ಲ ಪ್ರಕೃತಿಯ ಅಧೀನಕ್ಕೆ, ಅದರ ನಿಯಮಗಳಿಗೆ ಒಳಪಟ್ಟಿದಾಯಿತು. ಅವರು ಪ್ರಕೃತಿಗೆ ಕೊಟ್ಟ ಪ್ರಾಶಸ್ತ್ಯದಿಂದಲೇ ಭಾರತೀಯರ ಮನಸ್ಸು ಭೌತಿಕ ಶಾಸ್ತ್ರಗಳ (Natural Sciences) ಕಡೆಗೆ ತಿರುಗಿ ಅವರಲ್ಲಿ ವಿಜ್ಞಾನದ ಬಗೆಗೆ ಕುತೂಹಲವು ಮೊಳೆಯಹತ್ತಿತು. ಸುಪ್ರಸಿದ್ಧವಾದ ಪುರಾತನ ನಾಲಂದಾ ತಕ್ಷಶಿಲಾ ವಿಶ್ವವಿದ್ಯಾಲಯಗಳಲ್ಲಿ ಶಾಸ್ತ್ರೀಯ ಅಭ್ಯಾಸವು ಸ್ನಾತಕೋತ್ತರ ವರ್ಗಗಳಲ್ಲಿ ನಡೆಯುತ್ತಿತ್ತೆಂದು ಚೀನಾ ಮೊದಲಾದ ಪರದೇಶಗಳ ಪ್ರವಾಸಿಕರು ಬರೆದಿಟ್ಟ ಸಂಗತಿಗಳಿಂದ ವ್ಯಕ್ತವಾಗುವದು.

ಭಾರತೀಯರಲ್ಲಿ ಖಗೋಲಶಾಸ್ತ್ರ ಗಣಿತಶಾಸ್ತ್ರ ಇವು ವೇದಾಭ್ಯಾಸದ ಅಂಗವಾಗಿ ಬೆಳೆದ ಜ್ಯೋತಿಷ ಶಾಸ್ತ್ರಕ್ಕೆ ಅಂಗವಾಗಿ ಹುಟ್ಟಿದವು. ಆರ್ಯ ಭಟ್ಟ (ಕ್ರಿ. ಶ. ೫ನೆಯ ಶತಮಾನ) ವರಾಹ ಮಿಹಿರ (೬ನೆಯ ಶತಮಾನ) ಬ್ರಹ್ಮಗುಪ್ತ (೬ನೆಯ ಶತಮಾನ) ಮತ್ತು ಭಾಸ್ಕರಾಚಾರ್ಯ (೧೨ನೆಯ ಶತಮಾನ) ಈ ಮೊದಲಾದ ವಿಜ್ಞಾನಿಗಳು ಈ ಶಾಸ್ತ್ರಗಳನ್ನು ಬೆಳೆಸಿ ಕೊಂಡು ಬಂದ ಕೀರ್ತಿಗೆ ಪಾತ್ರರಾಗಿದ್ದಾರೆ. ಭಾರತೀಯ ಖಗೋಲ ಶಾಸ್ತ್ರಕ್ಕೆ ಮೂಲಗ್ರಂಥವು 'ಸೂರ್ಯ ಸಿದ್ಧಾಂತ'. ಇದನ್ನು ಆರ್ಯಭಟ್ಟನು ಸಂಗ್ರಹಿಸಿದನು. ಭೂಮಿಯು ತನ್ನ ಅಕ್ಷದ ಆಧಾರದ ಮೇಲೆ ತಿರುಗುತ್ತ

ದೆಂದು ಕಂಡುಹಿಡಿದವನು ಈತನೇ. ಸೂರ್ಯಗ್ರಹಣ ಚಂದ್ರಗ್ರಹಣಗಳು ಉಂಟಾಗುವ ರೀತಿಯನ್ನು ತಿಳುಹಿದವನೂ ಈತನೇ. ಗ್ರಹಗಳ ತಾತ್ಕಾಲಿಕ ಗತಿಯನ್ನು ಕಂಡುಹಿಡಿಯಲು ಭಾಸ್ಕರಾಚಾರ್ಯನು ಬರೆದ ಗಣಿತ ಸೂತ್ರಗಳು ನ್ಯೂಟನ್‌ನು ಕಂಡುಹಿಡಿದ (Differential Calculus) ವನ್ನು ಬಹಳವಾಗಿ ಹೋಲುವದು. ಅರಬರು ಭಾರತೀಯರಿಂದ ಅಂಕಗಣಿತ ಬೀಜಗಣಿತಗಳನ್ನು ಕಲಿತು ಅವನ್ನು ಯುರೋಪದಲ್ಲಿ ಪ್ರಚಾರಕ್ಕೆ ತಂದರು. ಈಗ ಪಾಶ್ಚಾತ್ಯ ದೇಶಗಳಲ್ಲಿ ಗಣಿತಶಾಸ್ತ್ರಕ್ಕೆ ಆಧಾರವಾಗಿರುವ ಸಂಖ್ಯಾರಚನೆಯು ಭಾರತೀಯರು ಕಂಡು ಹಿಡಿದದ್ದು. ಅದು ಪ್ರಚಾರದಲ್ಲಿ ಅದಕ್ಕೆ ಅರಬೀ ಸಂಖ್ಯೆ ಎಂದು ಹೆಸರುಂಟಾಗಿದೆ.

ದೇಹದ ರಚನೆಯನ್ನು ಕುರಿತು ಬರೆದ ಗ್ರಂಥಗಳು ಭಾರತೀಯರಲ್ಲಿ ಇರದಿದ್ದರೂ ಚರಕ ಸುಶ್ರುತರು ಬರೆದ ವೈದ್ಯಗ್ರಂಥಗಳನ್ನು ಪರಿಶೀಲಿಸಿದರೆ ದೇಹದ ಹೊರ ಒಳ ಪದರುಗಳನ್ನು ಕೊಯ್ದು ಅದರ ರಚನೆಯನ್ನು ಪರೀಕ್ಷಿಸುವ ಕ್ರಮವು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿತ್ತೆಂಬುದು ದೃಢವಾಗುವದು. ಶಸ್ತ್ರಚಿಕಿತ್ಸೆಯಲ್ಲಿ ಇವರು ಬಹು ಮಟ್ಟಿಗೆ ಮುಂದುವರಿದಿದ್ದರೆಂಬುದಕ್ಕೆ ಇವರು ಆಗ ಉಪಯೋಗಿಸುತ್ತಿದ್ದ ಉಪಕರಣಗಳೇ ನಿದರ್ಶನಗಳು. ಸುಶ್ರುತನ ವೈದ್ಯನಿದಾನ ಎಂಬ ಗ್ರಂಥದಲ್ಲಿ ನೂರಕ್ಕಿಂತಲೂ ಹೆಚ್ಚಾಗಿ ಇಂತಹ ಶಸ್ತ್ರಗಳ ಉಲ್ಲೇಖ ವಿವರಣೆಗಳು ಬಂದಿರುತ್ತವೆ. ಮುರಿದ ಎಲುವುಗಳನ್ನು ಕಟ್ಟಲು ಇವರು ವಿವಿಧವಾದ ಹದಿನಾಲ್ಕು ಕಟ್ಟುಗಳನ್ನು ಅರಿತಿದ್ದರೆಂದೂ ಗೊತ್ತಾಗುತ್ತದೆ.

ಭಾರತೀಯ ರಾಸಾಯನಿಕರು ವಿಶೇಷವಾಗಿ ಕೆಲಸ ಮಾಡಿದುದು ಲೋಹಶಾಸ್ತ್ರದಲ್ಲಿ. ಪಾದರಸಕ್ಕೆ ಇವರು ಕೊಡುತ್ತ ಬಂದ ವಿಶೇಷ ಗಮನದ ನೆಸೆಯಿಂದಾಗಿ ಅದು ರಸಾಯನ ಶಾಸ್ತ್ರವೆಂಬ ಹೆಸರಿನಿಂದಲೇ ರೂಢವಾಯಿತು. ರಸ ಸಿಂಧೂರ (Red oxide of Mercury) ಹಿಂಗುಲ (Sulphide of Mercury) ತಾಲ (Arsenic) ಹರಿತಾಲ (Orpiment) ತುಕ್ಕು (Rust) ತಾಮ್ರಭಸ್ಮ (Copper Oxide) ಪೈಲು ತುತ್ತೆ (Copper Sulphate) ಗಾಂಧಿಕ ತಾಮ್ರ (Copper Sulphide) ಸತು ಭಸ್ಮ (Zinc oxide) ಸುವರ್ಣಭಸ್ಮ (Gol

Oxide) ಮುಂತಾದ ಲೋಹ ಭಸ್ಮಗಳೂ, ಯವಕ್ಷಾರ ಸೈಂಧಲವಣ ಮುಂತಾದ ಕ್ಷಾರೀಯ (Alkaline) ಪದಾರ್ಥಗಳೂ, ಸಿರಕಾವ್ಲ (Acetic acid) ಮುಂತಾದ ಆಮ್ಲಗಳೂ ಅವರಿಗೆ ತಿಳಿದಿದ್ದವು. ಇವುಗಳ ಗುಣಧರ್ಮಗಳನ್ನು ಪತಂಜಲಿ, ನಾಗಾರ್ಜುನ, ಚಕ್ರಪಾಣಿ ಮುಂತಾದ ಶಾಸ್ತ್ರಜ್ಞರು ವಿವರವಾಗಿ ತಿಳಿಸಿರುವರಲ್ಲದೆ ಭಸ್ಮೀಕರಣ (Calcination), ಅಧಃಪತನ (Distillation), ಊರ್ಧ್ವಪತನ (Sublimation), ಸ್ವೇದನ (Steaming) ಸ್ತಂಭನ (Fixation), ಮುಂತಾದ ರಾಸಾಯನಿಕ ಪದಾರ್ಥಗಳನ್ನೂ ಅವರು ತಮ್ಮ ಲೋಹ ಶಾಸ್ತ್ರಗ್ರಂಥ ಗಳಲ್ಲಿ ತಿಳಿಸಿರುವರು.

ಭಾರತೀಯರ ವಿಜ್ಞಾನವು ಅರಬರ ಮುಖಾಂತರವಾಗಿ ಯುರೋಪ ದಲ್ಲಿ ಪ್ರಚಾರವಾದಂದಿನಿಂದ ಅಲ್ಲಿಯ ಜನರಲ್ಲಿ ವಿಜ್ಞಾನದ ಬಗೆಗೆ ಅಭ್ಯಾಸ ಆಸಕ್ತಿಗಳು ಬೆಳೆಯಹತ್ತಿದವು. ಬೇಕನ್‌ನಂತಹ ಪ್ರತಿಭಾವಂತರ ಪ್ರಯತ್ನದ ಫಲವಾಗಿ ಇವರ ಗ್ರಂಥಗಳು ಲ್ಯಾಟನಿಗೆ ಭಾಷಾಂತರವಾಗಿ ಭಾರತೀಯರ ವಿಜ್ಞಾನದ ಬಗೆಗೆ ಉಂಟಾಗಿದ್ದ ಅಭ್ಯಾಸವು ಇನ್ನೂ ಬೆಳೆಯಿತು. ಕ್ರಿಸ್ತ ಶಕ ಪೂರ್ವದ ೧೫೦೦ ವರ್ಷಗಳಿಂದ ಕ್ರಿಸ್ತ ಶಕದ ೬ನೆಯ ಶತಮಾನದ ವರೆಗೆ ಸುಮಾರು ೨೦೦೦ ವರ್ಷ ಹಿಂದುಸ್ಥಾನವು ಸಂಸ್ಕೃತಿಯ ವೈಭವದಲ್ಲಿತ್ತೆಂದು ಹೇಳಬಹುದು. ಈ ಕಾಲದಲ್ಲಿಯೇ ಮಹಾ ತತ್ವಜ್ಞಾನಿಗಳೂ ಶ್ರೇಷ್ಠ ತರಗತಿಯ ರಾಜಕಾರಣ ಧುರಂಧರರೂ ಕೀರ್ತಿವೆತ್ತ ವಿಜ್ಞಾನಿಗಳೂ ಪರಾಕ್ರಮ ಶಾಲಿಗಳಾದ ಯೋಧರೂ ಉದಿಸಿ ರಾಷ್ಟ್ರದ ಘನತೆಯನ್ನು ಬೆಳಿಸಿದರು. ಇದೇ ಕಾಲದಲ್ಲಿ ಬ್ರಹ್ಮದೇಶದಿಂದ ಫಿಲಿಪಾಯಿನ್ ನಡುಗಡ್ಡೆಗಳ ವರೆಗಿನ ಪರರಾಷ್ಟ್ರಗಳಲ್ಲಿ ಭಾರತ ಆಳಿಕೆಯು ಬೆಳೆದು ಭಾರತೀಯ ಸಂಸ್ಕೃತಿಯು ಪಸರಿಸಿತು.

ಸಾಂಖ್ಯರಿಂದ ಭಾರತೀಯರಲ್ಲಿ ಹೊತ್ತಿಸಲ್ಪಟ್ಟ ವಿಜ್ಞಾನದ ಕಿಡಿಯು ೬ನೆಯ ಶತಮಾನದಿಂದ ಆರತೊಡಗಿದ್ದುದರಿಂದ ಐಹಿಕ ಪ್ರಗತಿಯಲ್ಲಿ ಅವರು ಹಿಂದೆ ಬೀಳಹತ್ತಿದರು ವಿಜ್ಞಾನ ಆತ್ಮಜ್ಞಾನವೆಂಬ ಭೇದವನ್ನು ಬಗೆದು ವಿಜ್ಞಾನವು ಅಪರಾವಿದ್ಯೆ ಎಂದೂ ಆತ್ಮಜ್ಞಾನವು ಪರಾವಿದ್ಯೆ ಎಂದೂ ಕಲ್ಪಿಸಿ ಪ್ರಗತಿಪರವಾದ ಜ್ಞಾನಕ್ಕೆ ಭಾರತೀಯರು ಎರವಾಗತೊಡಗಿದರು.

ಜ್ಞಾನದಲ್ಲಿ ಮೇಲು ಕೀಳುಗಳೆಂಬ ಭಾವಕ್ಕೆ ಅವಕಾಶವನ್ನು ಕಲ್ಪಿ
ಸುದರಿಂದ ಮತ್ತು ಆತ್ಮಜ್ಞಾನವು ಅಧಿಕವಾದರೂ ವಿಜ್ಞಾನಕ್ಕೆ ಒಂದು ಸ್ಥಾ
ನವಿದೆ ಎಂಬುದನ್ನು ಮರೆತುದರಿಂದ ಕಳೆದ ೧೫೦೦ ವರ್ಷಗಳ ಭಾರತದ
ಯಾವ ಹೇಳಿಕೊಳ್ಳುವ ಪ್ರಗತಿಯೂ ಉಂಟಾಗದೆ ಹೋಯಿತು. ವೈಜ್ಞಾನಿ
ದೃಷ್ಟಿಯು ಸ್ಥಗಿತವಾಗಿ ಬಿಟ್ಟಿತು. ಮುಂದೆ ಆಂಗ್ಲರ ಆಳಿಕೆಯಿ
ಭಾರತೀಯರಲ್ಲಿ ಕೊಂಚಮಟ್ಟಿಗೆ ವಿಚಾರ ಪ್ರಚೋದನೆಯಾದುದೇ
ನಿಜ. ಆದರೆ ಅದು ಸಂಸ್ಕೃತಿಯ ವಿಧಾಯಕ ಕಾರ್ಯ ಪೋಷಣೆಗಾ
ಸಾಗದೆ ವಿಧ್ವಂಸಕ ವಿಧಾನದಲ್ಲಿ ನಡೆಯಿತು. ಲಾರ್ಡ ಮೆಕಾಲೆ ಅವ
ಒಪ್ಪಿಸಿದ ವರದಿಯ ಸ್ವೀಕಾರದಿಂದ ಅವರ ಆಳಿಕೆಯಲ್ಲಿ ನಿಜವಾದ ಶಿಕ್ಷಣ
ಲಭಿಸದೆ ಅವರ ಆಡಳಿತೆಯ ಯಂತ್ರವನ್ನು ಯಶಸ್ವಿಯಾಗಿ ನಡೆಸಿಕೊಂ
ಹೋಗಲಿಕ್ಕೆ ಬೇಕಾಗುವ ಕಾರಕೂನರನ್ನು ತಯಾರು ಮಾಡುವದೇ ಅವ
ಕೊಡುತ್ತಿದ್ದ ಶಿಕ್ಷಣದ ಗುರಿಯಾಯಿತು. ಇಂತಹ ಹರಕು ಮುರಕು ಶಿಕ್ಷ
ವನ್ನು ಪಡೆಯುತ್ತ ಬಂದಿದ್ದರೂ ಭಾರತದಲ್ಲಿ ರಾಜಾರಾಮ ಮೋಹನರಾ
ನಿಂದ ಮಹಾತ್ಮಾ ಗಾಂಧಿಜೀಯವರಿಗೆ ಅನೇಕ ಸಮಾಜ ಸುಧಾರಕ
ರಾಜಕಾರಣ ಧುರೀಣರೂ ಕವಿಗಳೂ ತತ್ವವೇತ್ತರೂ ಕಲಾವಿದರೂ
ತಾಳಿದರು. ವಿಶಾಲವಾದ ಭಾರತದ ಕ್ಷೇತ್ರದಲ್ಲಿ ಹೀಗೆ ಬಂದ ಬೆಳೆಯು
ಅತ್ಯಲ್ಪವೇ ಸರಿ. ಆಂಗ್ಲರು ಕೊಡುತ್ತ ಬಂದಿದ್ದ ಶಿಕ್ಷಣವು ದೋಷಪೂ
ವಾಗಿದೆಯೆಂದು ಎಷ್ಟೋ ಭಾರತೀಯರಿಗೆ ಅನಿಸುತ್ತಿತು ಆದರೆ ಅ
ವಿರುದ್ಧ ತಮ್ಮ ನಿಷೇಧವನ್ನು ವ್ಯಕ್ತಗೊಳಿಸಿದವರು ಮತ್ತು ಅದನ್ನು ಪ್ರ
ಭಟಿಸಿ ಪ್ರತಿಯಾಗಿ ಸ್ವತಂತ್ರವಾದ ಶಿಕ್ಷಣದ ಸಂಸ್ಥೆಗಳನ್ನು ಸಂಸ್ಥಾಪಿಸಿದ
ರಲ್ಲಿ ಗಣ್ಯರಾದವರು ಮೂವರು ಮಾತ್ರ. ಈ ಪ್ರತಿಭಟನೆಯ ಫಲವೆಂ
ಅರವಿಂದ ಘೋಷರು ಸ್ಥಾಪಿಸಿದ ಪಾಂಡಿಚೇರಿ ಆಶ್ರಮದ ನ್ಯಾಶನ
ಕಾಲೇಜ, ರವೀಂದ್ರನಾಥ ಟಾಗೋರ ಅವರು ಸ್ಥಾಪಿಸಿದ ಶಾಂತಿನಿಕೇತ
ವಿಶ್ವಭಾರತಿ ಮತ್ತು ಮಹಾತ್ಮಾ ಗಾಂಧಿ ಅವರು ಸ್ಥಾಪಿಸಿದ ವರ್ಧಾ ಶಿಕ್ಷ
ಲಯ ಇವು ಮೂರ್ತಿಮತ್ತಾಗಿ ನಿಂತಿವೆ.

ಜ್ಞಾನವು ಲೌಕಿಕವಿರಲಿ ಪಾರಲೌಕಿಕವಿರಲಿ, ವಿಜ್ಞಾನವಿರಲಿ ಆ
ಜ್ಞಾನವಿರಲಿ - ಅದೆಲ್ಲವೂ ನಮಗೆ ಪವಿತ್ರವಾದುದೇ; ಅದಕ್ಕಿಂತ ಮಿಗಿಲ

ದುದೂ ಪವಿತ್ರವಾದುದೂ ಇನ್ನಾವುದೂ ಇಲ್ಲ. "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೆ." ಹಾಗಾದಡೆ ಈ ಜ್ಞಾನಾರ್ಜನೆಯ ಕ್ರಮವು ಯಾವುದು ? ಮೊದಲನೆಯದಾಗಿ ಮಾನವನಿಗೆ ಪ್ರಾಥಮಿಕ ಜ್ಞಾನವೆನಿಸಿದ ಓದುಬರೆಹಗಳು ಅವಶ್ಯವಾದುವುಗಳು. ಆರಂಭದಲ್ಲಿ ಅಕ್ಷರ ಜ್ಞಾನವಿಲ್ಲದಿದ್ದರೆ ಅಂತ್ಯದಲ್ಲಿ ಇನ್ನುಳಿದ ಜ್ಞಾನಸಂಗ್ರಹವಾಗುವದು ಮಾನವನಿಗೆ ಅಸಾಧ್ಯ ವೆನಿಸುವದು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಎಲ್ಲರೂ ಓದು ಬರೆಯಲಿಕ್ಕೆ ಬಲ್ಲವರಿರಬೇಕೆಂಬ ಕಟ್ಟಳೆಯಿದೆ. ಮುಂದುವರಿದ ರಾಷ್ಟ್ರಗಳಲ್ಲಿ ೧೦೦ಕ್ಕೆ ೧೦ರಷ್ಟು ನಿರಕ್ಷರಿಗಳು ಮಾತ್ರ ಕಂಡುಬಂದರೆ, ನಮ್ಮಲ್ಲಿ ೧೦೦ಕ್ಕೆ ೯೦ರಷ್ಟು ನಿರಕ್ಷರಿಗಳು, ಕೇವಲ ೧೦ ರಷ್ಟು ಮಾತ್ರ ಓದು ಬರಹ ಬಲ್ಲವರು. ಪ್ರಜಾರಾಜ್ಯದಲ್ಲಿ ಎಲ್ಲರೂ ಓದು ಬರೆಹ ಬಲ್ಲವರಿರಬೇಕು ಎಂಬುದು ಯಥೋಚಿತವಾದುದು. ಇದಕ್ಕಾಗಿ ಒತ್ತಾಯ ಶಿಕ್ಷಣವನ್ನು ಆಚರಣೆಯಲ್ಲಿ ತಂದರೂ ಭಾರತವು ಇನ್ನೂ ಹಲವಾರು ವರುಷ ಅವಿಶಾಂತ ವಾಗಿ ಪ್ರಯತ್ನಪಟ್ಟಾಗ ಅಕ್ಷರ ಜ್ಞಾನವು ಪ್ರಸಾರವಾಗುವದು. ಬಾಲ ಶಿಕ್ಷಣದ ಒಟ್ಟಿಗೆ ಪ್ರೌಢ ಶಿಕ್ಷಣವನ್ನು ಬೆಳಸಿ ಎಲ್ಲ ರೀತಿಯಿಂದಲೂ ಯತ್ನಿಸಬೇಕು. ಕಾರ್ಯದ ಉದ್ವಿಗ್ನತೆಯಲ್ಲಿ ಉದಾಸೀನ ಭಾವವು ತೋರುವದೂ ಉಂಟು; ಭಾರತೀಯರ ಸಾಹಸಕ್ಕೆ ಅಡೆತಡೆಯನ್ನು ಒಡ್ಡು ವದೂ ಉಂಟು. ಆದರೆ ಕಾರ್ಯಕ್ಷಮತೆ ಧ್ಯೇಯಸಾಧನೆಯ ಉದ್ದೇಶ ಇವು ಓರೆಯಾಗದಂತಿರಬೇಕು.

ಅಕ್ಷರ ಜ್ಞಾನದ ತರುವಾಯ ಮನುಷ್ಯನಿಗೆ ಅವಶ್ಯವಾಗಿ ಬೇಕಾ ದುದು ಉಪಯುಕ್ತ ಜ್ಞಾನ. ಅನ್ಯರಿಗೆ ಭಾರವಾಗದಂತೆ ಜೀವನವನ್ನು ಸಾಗಿಸುವ ಹೊಣೆಯನ್ನು ಮಾನವನು ಹೊರಬೇಕಾಗುವದು. ಅದಕ್ಕಾಗಿ ಅವನು ಉಪಯುಕ್ತ ಜ್ಞಾನವನ್ನು ಸಂಪಾದಿಸಬೇಕು. ಇಂದಿನ ಮನ್ವಂತರಕ್ಕೆ ಸರಿಯಾಗಿ ಅವನಿಗೆ ಯಾಂತ್ರಿಕ ತಾಂತ್ರಿಕ ಜ್ಞಾನವು ಅನಿವಾರ್ಯವಾ ದುದು. ಯಾವ ಕಾರ್ಯವೂ ಅಥವಾ ಕೈಕೆಲಸವೂ ಕೀಳಲ್ಲ. ಮಾನವನು ಒಂದಿಲ್ಲ ಒಂದು ಕಾಯಕವನ್ನು, ಉತ್ಪಾದಕ ಉದ್ಯೋಗವನ್ನು (Productive labour) ಕೈಕೊಂಡು ಸ್ವಾವಲಂಬನ ಜೀವನವನ್ನು ಸಾಗಿಸಬೇಕು. ತಾನು ಕೈಕೊಳ್ಳಬೇಕಾದ ಕಾಯಕದ ನೆಲೆಕಲೆಗಳನ್ನರಿತು ಆಚರಿಸುವದೇ

ಉಪಯುಕ್ತಜ್ಞಾನಾರ್ಜನೆಯ ಲಕ್ಷಣ. ೮೦೦ ವರುಷಗಳ ಹಿಂದೆಯೇ ಕ
ಕಾಯಕದ ಮಹತ್ವವನ್ನು ತಿಳಿದು ಆಚರಿಸಿದರು, ತಿಳಿಸಿ ಹೇಳಿದರು
ಶಿವಶರಣರು. ಕಾರ್ಲಾಯಿಲ್, ರಸ್ಕಿನ್, ಟಾಲಿಸ್ಟಾಯ್ ಮೊದಲಾದವರು
ಮಾನವನ ಕಾರ್ಯದ ಗೌರವವನ್ನು (Dignity) ಕೊಂಡಾಡಿದರು.
ಶಿವಶರಣರು ಅವನ ಆ ಕಾಯಕದ ಗೌರವದ ಜೊತೆಗೆ ಪವಿತ್ರತೆಯನ್ನು
(Divinity) ಕೊಂಡಾಡಿದರು. ಶಿವಶರಣರ ಕಾರ್ಯ ದೃಷ್ಟಿಯಲ್ಲಿ
ಮಂತ್ರಿಯಾಗಿ ನಾಲ್ಕು ಸಾವಿರ ಹೊನ್ನು ಸಂಬಳ ಪಡೆಯುತ್ತಿದ್ದ
ಬಸವಣ್ಣನು ಮೇಲಲ್ಲ, ಚಮ್ಮಾವುಗೆಯನ್ನು ಮಾಡುತ್ತಿದ್ದ
ಹರಳಯ್ಯನು ಕೀಳಲ್ಲ. ಪಾಶ್ಚಿಮಾತ್ಯರಲ್ಲಿ ಇಂದು ಉತ್ಪಾದಕವಾದ
ಯಾವದೇ ತರಗತಿಯ ಉದ್ಯೋಗಕ್ಕೆ ಅತಿಶಯವಾದ ಮಾನದೊರೆ
ಯುವದು. ಕಾರ್ಲಾಯಿಲ್ ಮುಂತಾದವರು ಎತ್ತಿ ಹಿಡಿದ ಕಾರ್ಯ
ಗೌರವಕ್ಕಾಗಿ ಪ್ರತಿಯೊಬ್ಬರೂ ಒಂದೊಂದು ಉತ್ಪಾದಕ ಕಾರ್ಯವನ್ನು
ಕೈಕೊಳ್ಳಬೇಕು. ಹರಟೆಯಿಂದ ಕನಿಷ್ಟ ತಾಸೆರಡು ತಾಸು ವ್ಯರ್ಥವಾಗಿ
ಕಳೆಯುವದನ್ನೇ ನೂಲುವದರಲ್ಲಿ ಕಳೆದರೆ ಅದು ಅಷ್ಟೇ ಉತ್ಪಾದಕ
ಉದ್ಯೋಗವೆನಿಸುವದು. ರಾಷ್ಟ್ರಕ್ಕೆ ಅಷ್ಟರಿಂದಲೇ ಲಾಭ. ಮಹಾತ್ಮಾ
ಗಾಂಧಿಯವರು ಪ್ರಚಾರಗೊಳಿಸಿದ ರಾಟೆಯು ಒಂದು ಬಗೆಯ ಯಂತ್ರ;
ಆದು ತೀರ ಮೊದಲಿನ ಸ್ವರೂಪದ ಯಂತ್ರವಾಗಿರಬಹುದು. ಅವರ
ವರ್ಧಾ ಶಿಕ್ಷಣದ ಯೋಜನೆಯಲ್ಲಿ ಚಟುವಟಿಕೆಯ ಮೂಲಕವೇ ಜ್ಞಾನ
ಸಂಪಾದನೆ ಮಾಡಬೇಕು ಎಂದು ಹೇಳುವ ಮಾತಿನಲ್ಲಿ ಈ ಉಪಯುಕ್ತ
ಜ್ಞಾನವನ್ನೇ ಎದುರಿಗೆ ಇಟ್ಟುಕೊಂಡುದಾಗಿದೆ. ನೂಲುವ ನೇಯುವ,
ಬಡಿಗತನದ ಕೆಲಸಮಾಡುವ ಒಂದೊಂದು ಕೈಕೆಲಸದಲ್ಲಿ (Craft)
ವೃತ್ತಿಯನ್ನವಲಂಬಿಸಿ ಜ್ಞಾನಸಂಪಾದನೆ ಮಾಡಿಸಬೇಕೆಂಬ ಗುರಿ
ಯಿದ್ದರೂ ಆಯಾ ಉದ್ಯೋಗ ಮೂಲದಿಂದ ರಾಷ್ಟ್ರಕ್ಕೆ ಅಷ್ಟಷ್ಟು ನೆರ
ವಾಗುತ್ತಿದೆ ಎಂಬ ಉಪಯುಕ್ತ ಜ್ಞಾನದ ಗೂಢವಡಗಿದೆ. ಸ್ವಾವಲಂಬನವೇ
ಜೀವನದ ಶೀಲ ಎಂಬ ರಹಸ್ಯವೂ ಆದರಲ್ಲಿ ಅಡಗಿದೆ.

ಉಪಯುಕ್ತ ಜ್ಞಾನದಂತೆ ಮನುಷ್ಯನಿಗೆ ಲಲಿತಕಲೆಗಳ ಜ್ಞಾನವೂ
ಬೇಕು. ಸಾಹಿತ್ಯ ಸಂಗೀತ ನೃತ್ಯ ಚಿತ್ರ ಶಿಲ್ಪ ಇತ್ಯಾದಿ ಲಲಿತಕಲೆಗಳ

ಜ್ಞಾನಕ್ಕೆ ಅಲಂಕಾರಿಕ ಜ್ಞಾನವೆಂದು ಹೆಸರು ಕೊಡಬಹುದು. ಈ ಸಾಹಿತ್ಯ ಸಂಗೀತ ಮೊದಲಾದ ಕಲೆಗಳ ಪರಿಚಯವಿಲ್ಲದವನು ಪಶುಸಮಾನನೆಂದು ಸುಭಾಷಿತಕಾರರು ಹೇಳಿರುವರು. ಸೌಂದರ್ಯೋಪಾಸನೆಯೇ ಕಲೆಗಳ ಗುರಿ. ಪ್ರತಿಯೊಬ್ಬನಿಗೂ ಅವನ ನಿಲವಿಗನುಸರಿಸಿ ಸೌಂದರ್ಯಾನುಭೂತಿಯುಂಟಾಗುವದು. ಸೌಂದರ್ಯವು ಬರಿಯ ಭ್ರಮೆಯಲ್ಲ. ಸೌಂದರ್ಯಾನುಭೂತಿಯಿಂದ ರಸಾನುಭವವುಂಟಾಗಿ ಅದರಿಂದ ಸತ್ಪ್ರವೃತ್ತಿಯು ಮೂಡಿಬರುವದು. ಗ್ರೀಕರಲ್ಲಿ ಕೆಥಾರ್ಸಿಸ್ (Catharsis) ಅಂದರೆ ಚಿತ್ತಶುದ್ಧಿ ಎಂಬುದುಂಟು ನೈತಿಕ ಪರಿಶುದ್ಧತೆಯೇ ಕೆಥಾರ್ಸಿಸದ ಗುರಿ. ಪ್ರಪಂಚದಲ್ಲಿ ದುಃಖಾಂತ ಕಥಾವಸ್ತುಗಳಿಗೂ ಒಂದು ಸ್ಥಾನವದೆ ಎಂದು ಹೇಳಬಹುದು. ನಿರಪೇಕ್ಷ ಬುದ್ಧಿಯಿಂದ ರಸಾಸ್ವಾದನೆಗೆಯ್ಯುವದರಿಂದ ಸಹಜ ಪ್ರವೃತ್ತಿಗಳು ಭಾವನೆಗಳು ಔನ್ನತ್ಯವನ್ನು ಹೊಂದುವವು. ವಿವಿಧ ಬಣ್ಣಗಳ ಮಿಶ್ರಣದಿಂದ ಇಂದ್ರಚಾಪವು ಅಂದವಾಗಿ ತೋರುವಂತೆ ಬಗೆಬಗೆಯ ರಸಗಳ ಕೂಡಿಕೆಯಿಂದ ಜೀವನವು ಸುಂದರವೂ ಸಮೃದ್ಧವೂ ವಿಪುಲವೂ ಆಗುವದು; ಆನಂದದ ಉಕ್ಕು . ಚಿಮ್ಮುವದು. ನಯನಮನೋಹರವಾದ ವಸ್ತು ಒಡವೆಗಳಿಂದ, ಸುನಾದವನ್ನು ಬೀರುವಗೀತ ಗಾಯನದಿಂದ, ರುಚಿಕಟ್ಟಾದ ಪಕ್ವಾನ್ನಗಳಿಂದ, ತನಿಗಂಪನ್ನು ಸೂಸುವ ಸದ್ವಾಸನೆಯಿಂದ, ಮೈಗೆ ರಮ್ಯತೆಯನ್ನುಂಟುಮಾಡುವ ಸಂಸ್ಪರ್ಶದಿಂದ ಇಂದ್ರಿಯ ತತಿಗೆ ನಿಲುಕುವ ಲೌಕಿಕಾನಂದವಾಗಲಿ, ಸ್ವಾರ್ಥವಿಲ್ಲದೆ ಸೇವೆ ಸಲ್ಲಿಸಿದ ಕಾಳಿದಾಸ,ಶೆಕ್ಸಪಿಯರ, ಮಿಲ್ಟನ್ ಮುಂತಾದ ಕವಿ ಶ್ರೇಷ್ಠರ ಕಾವ್ಯಕೃತಿಗಳಿಂದ ಪಡೆದ ಕಾವ್ಯಾನಂದವಾಗಲಿ, ಇಲ್ಲವೆ ಲಲಿತ ಕಲೆಗಳಿಂದ ಮೂಡುವ ಅಲೌಕಿಕಾನಂದವಾಗಲಿ ಧ್ಯೇಯದಲ್ಲಿ ಒಂದೇ ಬಗೆಯಾದುವು. ಕಾವ್ಯವು ಭಾವನೆಗಳನ್ನು ಉದ್ದೀಪನಗೊಳಿಸಿ ಅವುಗಳಲ್ಲಿ ಪ್ರತಿಯೊಂದಕ್ಕೂ ಪ್ರತ್ಯೇಕವಾದ ಆನಂದವನ್ನು ನೀಡುತ್ತದೆ. ಕಲೆಯು ಆ ಭಾವನೆಗಳನ್ನು ಪ್ರಶಾಂತಗೊಳಿಸುವುದಲ್ಲದೆ ಅಂಕಿತಕ್ಕೊಳಪಟ್ಟ ಪರಿಮಿತವಾದ ತೃಪ್ತಿಯಿಂದ ದೊರಕೊಳ್ಳುವ ಆನಂದಾನುಭೂತಿಯನ್ನೂ ವ್ಯಕ್ತಗೊಳಿಸುವುದು. ಸಂಗೀತವು ಆ ಭಾವನೆಗಳ ಸಾಂದ್ರವನ್ನು ಇನ್ನೂ ದೃಢೀಕರಿಸಿ ಒಂದಕ್ಕೊಂದು ಅನುಕೂಲಿಸುವ ಹೊಂದಿಕೆಯಿಂದ ಕೂಡಿಕೊಳ್ಳುವಂತೆ ಮಾಡುವದು. ಹೀಗೆ ಸಂಗೀತ ಕಾವ್ಯ ಕಲೆ ಇವು ಆತ್ಮನ ಸಂಪೂರ್ಣ

ವಾದ ಶಿಕ್ಷಣದ ದಾರಿಯನ್ನು ತೋರುವವು; ಆತ್ಮನ ಸ್ಥಿತಿಗತಿ
ಶುದ್ಧಗೊಳಿಸುವವು; ಸ್ತಿಮಿತಗೊಳಿಸುವವು, ಸಾಂದ್ರಗೊಳಿಸುವವು, ಸಮೃ
ಗೊಳಿಸುವವು. ಕಾಲರಿಜ ಮಹಾಕವಿಯು ತಿಳಿಸುವಂತೆ ರಾಗಗಳು ಭಾ
ಮನಸ್ಸನ್ನು ತಪ್ತಗೊಳಿಸದೆ ತೃಪ್ತಿಗೊಳಿಸಬೇಕು, ಕೆರಳಿಸದೆ ಅರಳಿಸ
ಶೈಕ್ಷಣಿಕ ಮನಶ್ಶಾಸ್ತ್ರದಲ್ಲಿ ಮ್ಯಾಕ್‌ಡೂಗಲ್, ನನ್, ಡ್ಯೂಯಿ ಮು
ವರು ತಿಳಿಸುವ ಸಬ್ಲಿಮೇಶನ್‌ದ (Sublimation) ಗುರಿಯು ಸತ್ಪ್ರವೃತ್ತಿ
ಮೂಡಿ ಅದರಿಂದ ಸಮೃದ್ಧಿಯು ಮೊಳೆತು ನಿರ್ಮಲ ಮತಿಯು ಬೆಳ
ಕ್ಕಾಗಿ ಇರುತ್ತದೆ. ರವಿಂದ್ರನಾಥ ಟಾಗೋರ ಅವರು ವಿಶ್ವಭಾರತಿ
ಕಲೆಗಳಿಗೆ ಉನ್ನತಸ್ಥಾನವನ್ನು ಕೊಟ್ಟಿದ್ದು ಸೌಂದರ್ಯೋಪಾಸನೆ
ಆನಂದಾನುಭೂತಿಯನ್ನು ಮಾನವನು ಪಡೆಯಲೆಂದೇ ಇರುತ್ತದೆ.

ಮಾನವನು ತನ್ನ ಮನಸ್ಸಿನ ಆಳವಾದ ಪದರುಗಳಿಂದ ಹೊರ
ಏಳು-ಬೀಳುವ ಸಹಜಪ್ರವೃತ್ತಿಗಳಿಗೆ ( Instincts ) ಸಂತೃಪ್ತಿ ಪಡೆ
ಒಂದೇ ಸವನೆ ಹವಣಿಸುತ್ತಾನೆ. ಆದರೆ ಸಮಾಜ ಸರಕಾರ ಸದಸದ್ವಿವೇ
ಭಯದಿಂದಾಗಿ ಅವುಗಳ ತೃಪ್ತಿಗೆ ಅಡೆತಡೆಯುಂಟಾಗುವದು. ಇದೇ
ಅವು ತಿಳಿಯದೆ ಮನಸ್ಸಿನ ಅಂತರಾಳಕ್ಕೆ ತಳ್ಳಲ್ಪಟ್ಟು ಸುಪ್ತ
ತೊಡಕು-ತೊಡಕಿನಲ್ಲಿ(Engram complex)ಸ್ಥಿರವಾಗಿ ಉಳಿದು
ವವು. ಆದರೆ ಸಮಯುವರಿತು ಹೊರಬೀಳಲು ಅವಕಾಶವನ್ನು ಕಾಯು
ದಂಡಧಾರಿಯ ಕಣ್ಣುತಪ್ಪಿಸಿ ಬಗೆಬಗೆಯ ವೇಷವನ್ನು ತಾಳಿ ನಿದ್ರೆ
ಕೆಡಿಸಿ ಸಪ್ನದಲ್ಲಿ ಸುಳಿಯುವವು. ಆಗ ಮಾನವನು ತಾನು ತಿಳಿದುಕೊ
ಒಳ್ಳೆಯವನಿರುವನೋ ನೀಚನಿರುವನೋ ಎಂದು ತಿಳಿದುಬರುವದು
ವಾಗಿ ತಾನು ತಿಳಿದುಕೊಂಡಷ್ಟು ಅವನು ಒಳ್ಳೆಯವನೂ ಅಲ್ಲ; ನೀ
ಅಲ್ಲ. ಪ್ರವೃತ್ತಿಗಳು ಮೂಡುವದು ಸಹಜವೇ! ಈ ಸಹಜಪ್ರವೃತ್ತಿಗ
ಸುಸಂಸ್ಕೃತ ಗೊಳಿಸುವದೇ ಶಿಕ್ಷಣದ ಉದ್ದೇಶ. ಸೂರ್ಯನಿಂದ ಕಿರಣ
ಹೊರಹೊಮ್ಮುವಂತೆ ಎಲ್ಲವೂ ಒಳಗಿನಿಂದ ಹೊರಹೊಮ್ಮಬೇಕು. ಮಾನ
ದೇಹ, ಮನಸ್ಸು, ಆತ್ಮಗಳಲ್ಲಿ ಅಡಗಿದ ಅನಂತವಾದ ಗುಪ್ತ,
ಶಕ್ತಿಗಳನ್ನು ಹೊರಗೆಡುವದೇ ಶಿಕ್ಷಣದಗುರಿ ಯಾಗಬೇಕು. ಅನುಭ
ಧೇಯ ಸಾಧನೆಯೂ ಸಹ ಇದೇ ಇರುತ್ತದೆ. ಸಾಧನೆಯ ದಾರಿಯು

ಬೇರೆ ಇರಬಹುದು. ಆದರೆ ತತ್ವವು ಮಾತ್ರ ಒಂದೇ ಇರುತ್ತದೆ. ಮಾನವನಿಗೆ ಭೌತಿಕ ಸೌಂದರ್ಯ, ಬೌದ್ಧಿಕ ಸೌಂದರ್ಯ, ನೈತಿಕ ಸೌಂದರ್ಯ ಇವುಗಳ ಅರಿವು ಉಂಟಾಗಬೇಕಾದರೆ ಅವನಿಗೆ ಅಲಂಕಾರ ಜ್ಞಾನದ ಅವಶ್ಯಕತೆಯು ಇದ್ದೇ ಇರುತ್ತದೆ. ಸಹಜಪ್ರವೃತ್ತಿ, ಭಾವನೆ, ರಾಗಗಳ ಪರಿವರ್ತನೆ— ಇದು ಆ ಅಲಂಕಾರಿಕ ಜ್ಞಾನಸಂಪಾದನೆಯ ಪರಿವಿಡಿಯು.

ಮಾನವನಿಗೆ ಅವಶ್ಯವಿರುವ ಅಕ್ಷರ ಜ್ಞಾನ, ಉಪಯುಕ್ತ ಜ್ಞಾನ ಮತ್ತು ಅಲಂಕಾರಿಕ ಜ್ಞಾನ—ಇವುಗಳಿಂದ ಅವನ ಶಿಕ್ಷಣದ ಪರಿಪೂರ್ಣತೆಯುಂಟಾಯಿತೆಂದು ಭಾವಿಸಕೂಡದು. ಇವುಗಳ ಜೊತೆಗೆ ಆತ್ಮಜ್ಞಾನ-ಇಲ್ಲವೆ ಸ್ವಾಯತ್ತ ಜ್ಞಾನವೂ ಅನಿವಾರ್ಯವಾದುದು. ಆಯತ ಎಂದರೆ ವಿಶಾಲವಾದುದು. ವಿಸಾಲವಾದುದು ಅಂಗವಿಸುವದಕ್ಕೆ ಆಯತ್ತ ಎಂದು ಅನ್ನುವರು. ಆತ್ಮಜ್ಞಾನವು ಅರಿವಿಗೆ ಸಂಬಂಧಪಟ್ಟುದು. ಚಿತ್ ಎನಿಸಿಕೊಂಡ ಅರಿವು ಚಿತ್ತ ನೆನವು ಸ್ಮರಣಶಕ್ತಿ—ಇದಕ್ಕಿಂತ ವಿಶಾಲವಾಗಿರುವದು. ವಾಸನಾತ್ಮಕ ಬುದ್ಧಿ ಮತ್ತು ವ್ಯವಸಾಯಾತ್ಮಕ ಬುದ್ಧಿ ಇವನ್ನು ಶುದ್ಧ ಬುದ್ಧಿಯಲ್ಲಿ ಪರಿವರ್ತನಗೊಳಿಸಿ ನಿರ್ಮಲ ಮತಿಯನ್ನು ಗಳಿಸಿಕೊಳ್ಳಬಹುದು. ಆದರೆ ಇದು ಸ್ಫುರಣಾತ್ಮಕ ಜ್ಞಾನದಂತೆ ವಿಶಾಲವೂ ವೈಭವಯುತವೂ ಆಗಿರದು. ಈ ಸ್ಫುರಣಾತ್ಮಕ ಜ್ಞಾನವು ಅತೀಂದ್ರಿಯವಾಗಿದೆ. ಅಂತೆಯೇ ಪರಿಮಿತವಾದ ಇಂದ್ರಿಯ ಜ್ಞಾನಕ್ಕಿಂತ ಅದು ಮಿಗಿಲಾಗಿದೆ. ಮಾನವನ ಪ್ರಕಟವಾದ ಪ್ರಕಟವಾಗದಿದ್ದ ಬಗೆಬಗೆಯ ಶಕ್ತಿಗಳಲ್ಲಿ ಅವನ ಸಂಕಲ್ಪ ಶಕ್ತಿಗೆ (Will power) ಒಂದು ವಿಶಿಷ್ಟವಾದ ಸ್ಥಾನವಿದೆ. ಕೇವಲ ಸಹಜ ಪ್ರವೃತ್ತಿಗಳ ಉರುಳಿನಲ್ಲಿಯೇ ವ್ಯವಹರಿಸುವ ಉಪಮಾನವನು (Subhuman) ಬುದ್ಧಿಯ (Intellect) ಬಲದಿಂದ ವ್ಯವಹರಿಸಿ, ಎಲ್ಲವನ್ನು ತನ್ನಾಧೀನಕ್ಕೆ ಒಳಪಡಿಸಿಕೊಳ್ಳಬೇಕೆಂಬ ಮಾನವನಲ್ಲಿ (Human) ಪರಿವರ್ತನೆಗೊಂಡು, ಕೊನೆಗೆ ಸಂಕಲ್ಪ ವಿಶಿಷ್ಟವಾಗಿ ಮಾಡುವ ಸ್ಫುರಣಾತ್ಮಕ ತಿಳಿವಳಿಕೆಯಿಂದ (Intuition) ಅತಿಮಾನವ (Superman) ನಾಗಿ ರೂಪುಗೊಳ್ಳುವನು. ಇದಕ್ಕೆಲ್ಲ ಅವನಲ್ಲಿ ಹುದುಗಿದ ಆ ಸಂಕಲ್ಪಶಕ್ತಿಯೇ ಕಾರಣವು. ಲೋಕದಲ್ಲಿ ಒಬ್ಬರಿಗಿಂತ ಒಬ್ಬರು ಬಲ್ಲಿದರಿರುವರು. ಆದರೆ ಈ ಸಂಕಲ್ಪಶಕ್ತಿಯು ವಿಶಿಷ್ಟವಾಗಿ ಯಾರಲ್ಲಿ

ವ್ಯವಹರಿಸುವದೊ ಅವನಿಗೆ ಮಾತ್ರ ಹೆಚ್ಚು ಬೆಲೆ. ಮಾನವನ ಆವಸ್ಥೆಯು ಇನ್ನೊಂದರಲ್ಲಿ ಮಾರ್ಪಡುತ್ತ ಕೊನೆಗೆ ಪರಾಕಾಷ್ಠತೆಯ ಸಂ ಶಕ್ತಿಯಲ್ಲಿ ನಿಲುಪೆಯನ್ನು ಪಡೆಯುವದೇ ಶಿಕ್ಷಣದ ಗುರಿ. ಸಂಕಲ್ಪ ತೃತೀಯ ನೇತ್ರ, ಆರನೆಯ ಇಂದ್ರಿಯ ಇವೆಲ್ಲ ಪರ್ಯಾಯ ನಾಮ ಆದೊಂದೆ ಶಕ್ತಿಗೆ. ಕೇವಲ ನಿರ್ವಂಚನೆಯ ನಿರ್ವ್ಯಾಜವೃತ್ತಿಯ ನಿ ದೃಷ್ಟಿಯ ಅವಶ್ಯಕತೆ, ಕೊನೆಗೆ ಸತ್ಯವೇ ಜಯಶೀಲವಾಗುವದೆಂಬ ನಿ ಜ್ಞಾನ ಮತ್ತು ಸಂಕಲ್ಪ ಶಕ್ತಿಗನುಗುಣವಾಗಿ ಪ್ರಗತಿಯು ಸಾಧ್ಯವಾ ದೆಂಬ ಅನುಭಾವ - ಈ ಮೂರು ಸಂಗತಿಗಳನ್ನು ಮುಖ್ಯವಾಗಿ ನೆನಪಿನಲ್ಲಿ ಕೊಂಡುದಾದರೆ ಉಪಮಾನವನು ಅತಿಮಾನವನಾಗಿ ಮಾರ್ಪಡುವ ಶಕ ವನ್ನರಿತಂತಾಗುವದು.

ಪರಮಾತ್ಮನೂ ಈ ಸಂಕಲ್ಪಶಕ್ತಿಯಿಂದಲೇ, ಈ ಕ್ರತುಶಕ್ತಿಯಿಂದ ವಿಶ್ವವನ್ನು ರಚಿಸಿದನು. ಮಾನವನು ತೋರಿಸುವ ಇಚ್ಛೆ ಸಂಕಲ್ಪಶಕ್ತಿಯಲ್ಲ. ಅದೊಂದು ಅವನ ಹಂಬಲ. ಆಶೆ ಅಳುಕು ಅಂಜಿ ಮುಸುಕಿನಿಂದ ಮಲಿನವಾಗಿರುವದು. ಅದು ಹಂಬಲದಲ್ಲಿ ಸಂಕಲ್ಪಶಕ್ತಿ ಪ್ರಭೆಗೆ ಇಂಬೆಲ್ಲಿರಬೇಕು? ನೀತಿನಿರ್ಭರವಾಗಿ ನಡೆದಾಗ ಸಂ ಶಕ್ತಿಯು ಜಾಗ್ರತವಾಗಿ ಅಘಟಿತವಾದ ಕಾರ್ಯವನ್ನು ಸಾಧಿಸಲು ಅನ ವುಂಟಾಗುವದು. ಈ ಶಕ್ತಿಗೆ ಅಟಂ ಬಾಂಬಿನ ಅಂಜಿಕೆಯಿಲ್ಲ; ಇಷ್ಟೇ ಆದನ್ನು ತಡೆಯುವ ಸಾಮರ್ಥ್ಯವೂ ಉಂಟು. ಸತ್ಪ್ರವೃತ್ತಿಯ ಸದ್ಬುದ್ಧಿಯು ಅಥವಾ ನಿರ್ಮಲ ಮತಿಯು ಪ್ರಕಟವಾಗುವದು; ನಿರ್ಮ ಮತಿಯ ನೆರವಿನಿಂದ, ಪ್ರಸನ್ನದೃಷ್ಟಿಯ ಪರಿಣಾಮದಿಂದ ಪಡೆದ ಜ್ಞಾನ ಸ್ವಾಯತ್ತಜ್ಞಾನ, ಆತ್ಮಜ್ಞಾನವೆನಿಸುವದು. ಅದು ಮಾನವನ ನಿಜವಾ ಮಾನವತೆಯನ್ನು ಇಲ್ಲವೆ ಅವನ ವ್ಯಕ್ತಿತ್ವವನ್ನು ಅಭಿವ್ಯಕ್ತಗೊಳಿಸುವ ಅರವಿಂದ ಘೋಷರು ಉಪಮಾನವನು ಅತಿಮಾನವನಾಗಿ ಮಾರ್ಪಡಬೇಕ ಎಂದೆನ್ನುವಾಗ ಪ್ರತಿಯೊಬ್ಬನಿಗೂ ಇಂತಹ ಆತ್ಮಜ್ಞಾನವು ಅವಶ್ಯ ವೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ. ಜ್ಞಾನವು ಹೀಗೆ ಚತುರ್ಮುಖವಾಗಿ ಪಡು. ಇದನ್ನು ಸಾಧ್ಯಮಾಡಿಕೊಡುವದೇ ಶಿಕ್ಷಣದ ಪ್ರಾಮುಖ್ಯವಾ ಉದ್ದೇಶವು.

ಶಿಕ್ಷಣದ ತತ್ವವನ್ನು ಆಳವಾಗಿ ಅಭ್ಯಾಸಮಾಡಿದಅನೇಕ ಪಾಶ್ಚಿಮಾತ್ಯ ಪಂಡಿತರೂ ತುಸು ಹೆಚ್ಚು ಕಡಮೆ ಈ ಮಾತುಗಳನ್ನೇ ಹೇಳಿ ರುವರು. ಅವರಲ್ಲಿ ಆರ್. ಡಬ್ಲ್ಯು ರಾಬರ್ಟಸನ್ ಅವರು ತಿಳಿಸುತ್ತಾರೆ: "ಬೋಧವು (Instruction) ಶಾಲೆಯಲ್ಲಿ ಮಾತ್ರ ಕೊನೆಗಾಣುವದು. ಆದರೆ ಪ್ರಬೋಧವು (Education) ಜೀವನದ ಕೊನೆಗೇ ಕೊನೆಗೊಳ್ಳುವದು. ಪ್ರಬೋಧವನ್ನು ಪಡೆವುದಕ್ಕೆಂದು ಬಾಲಕನನ್ನು ವಿಶ್ವಕ್ಕೆ ಒಪ್ಪಿಸಲಾಗಿದೆ" ಇಲ್ಲಿ ಬೋಧವು ದೊರೆಯುವದು ಹೊರಗಿನ ಸಹಾಯಸಂಪದದಿಂದ, ಪ್ರಬೋಧವು ಒಳಗಿನ ತಿಳಿಗಣ್ಣಿನ ಬೆಳಕಿನ ಸಂಪತ್ತಿನಿಂದ. ತಿಳಿಗಣ್ಣನ್ನು ಬೆಳಗಿಸಿಕೊಳ್ಳಲೋಸುಗ ವ್ಯಕ್ತಿಯು ವಿಶ್ವದ ಜೊತೆಗೆ ಹೊಂದಿಕೊಂಡು ಹೋಗಬೇಕು. "ಅಮೇರಿಕೆಯಲ್ಲಿ ಜಗತ್ತಿನಲ್ಲಿ ಕಾಣದಂತಹ ವಿಶಾಲವಾದ ಪಬ್ಲಿಕ ಸ್ಕೂಲುಗಳ ಪದ್ಧತಿಯೊಂದಿದೆ; ಬಹು ಬೆಲೆಯುಳ್ಳ ಕಾಲೇಜದ ಕಟ್ಟಡ ಗಳೂ ಇವೆ. ಆದರೆ ಇಲ್ಲಿದ್ದಷ್ಟು ಪ್ರಬೋಧದ ಉದ್ದೇಶಗಳ ಬಗೆಗಿರುವ ಕುರುಡ ದೃಷ್ಟಿಯು, ಅದರ ಒಂದಾನೊಂದು ವಿಶಿಷ್ಟವಾದ ಪರಿಣಾಮದ ಬಗೆಗಿರುವ ಕವಲು ನೋಟವು ಇನ್ನೆಲ್ಲಿಯೂ ಕಾಣದು. ನಾವು ಈ ಕ್ಷೇತ್ರದಲ್ಲಿ ತೋರಿಸುತ್ತಿರುವ ಪರಿಶ್ರಮದ ಫಲವು ಅಪೇಕ್ಷಿಸಿದ್ದುದಕ್ಕಿಂತ ವಿಪರೀತವಾಗಿಯೇ ತೋರಿದೆ ಎಂಬುದೊಂದು ಗಮನಾರ್ಹವಾದ ಮಾತು. ನಮ್ಮ ಪ್ರಬೋಧದ ಗುರಿಯು ತಪ್ಪುತಡೆಗಳನ್ನು ಹತ್ತಿಕ್ಕುವದರಲ್ಲಿದೆಯೇ ಹೊರತು ಸದ್ಗುಣರಾಶಿಯನ್ನು ಅಳವಡಿಸಿಕೊಳ್ಳುವದರಲ್ಲಿಲ್ಲ." ಎಂದು ಉಯಿಲಿಯಂ ಫ್ರಾನ್ಸ ಎಂಬವರು ತಿಳಿಸುತ್ತಾರೆ. ದೋಷರಾಶಿಯನ್ನು ಹತ್ತಿಕ್ಕುವದರಿಂದಲ್ಲ; ಅವನ್ನು ಗುಣಸಂಪಾದನೆಗಾಗಿ ಮಾರ್ಪಡಿಸುವುದರಲ್ಲಿ ಪ್ರಬೋಧದ ಗತಿಯಿರಬೇಕು. ಉತ್ಕೃಷ್ಟವೆನಿಸುವ ಪದ್ಧತಿ ಭವ್ಯವೆನಿಸುವ ಕಟ್ಟಡ ಇವುಗಳ ಪ್ರಾಮುಖ್ಯತೆಯ ಜೊತೆಗೆ ಮಾನವನಲ್ಲಿ ಮೂಡಬೇಕಾದ ಒಳ್ಳೆಯ ಗುಣಗಳ ಅಳವಡಿಕೆಯಾಗುವ ಕುರಿತು ಲಕ್ಷ್ಯವಿರಬೇಕು. ಜಾನ್ ಮ್ಯಾಸನ್ ಅವರು "ಪ್ರಬೋಧದ ಗುರಿಯು ಮನವನ್ನು ಯಾವಾಗಲೂ ಪುಟಿಯುತ್ತಿರುವ ಬುಗ್ಗೆಯಲ್ಲಿ ಮಾರ್ಪಡಿಸುತ್ತಿರಬೇಕು. ಅದನ್ನೊಂದು ಸಂಗ್ರಹಾಲಯವಾಗಿ ಪರಿಣಮಿಸಕೂಡದು. ಯಾಕಂದರೆ ಪಂಪಿನ ಸಹಾಯದಿಂದ ತುಂಬಿದುದು ತೆರವಾಗಲೇ ಬೇಕಾಗುವದು" ಎಂದು ಹೇಳಿರುವರು. ಶಿಕ್ಷಣವು ಜಲಾಶಯರೂಪದಲ್ಲಿರದೆ ಝರಿಯ ಹಾಗಿರಬೇಕು. ಅಂದರೆ ಅದು ನವ ನವೋನ್ಮೇಷವಾದ ಪ್ರಾತಿಭಚಕ್ಷುವನ್ನು, ಸ್ಫುರಣಜ್ಞಾನವನ್ನು ಗುರಿಯಾಗಿಟ್ಟು

ಕೊಂಡಿರಬೇಕು."ಸಂಗಮರವರಿ ಕಲ್ಲಿನಲ್ಲಿ ಕೆತ್ತನೆಯ ಕೆಲಸ ಮಾಡಿದರೆ ಅದು ನಾಶವಾಗುವದು; ಹಿತ್ತಾಳೆಯಲ್ಲಿ ಕೊರೆದರೆ ಕಾಲಾವಧಿಯ ಸೆಳವಿನಲ್ಲಿ ಅದು ಮಸುಳಿಸಿ ಹೋಗುವದು; ಕಟ್ಟಡವನ್ನು ನಿಲ್ಲಿಸಿದರೆ ಅದು ಮಣ್ಣು ಪಾಲಾಗು ವದು. ಆದರೆ ಎಳೆಯ ಮನಸ್ಸಿನಲ್ಲಿ ಪರಿಣಾಮವುಂಟಾಗುವಂತೆ ಪ್ರಯತ್ನಿ ಸಿದರೆ, ಸಿದ್ಧಾಂತದ ಬಿತ್ತನೆಯನ್ನಲ್ಲಿ ಮಾಡಿದರೆ, ದೇವನ ಬಗೆಗೆ ಭಯ ಭಕ್ತಿಯನ್ನೂ ಸುತ್ತುಮುತ್ತಲಿನ ಮಾನವ ಜನಾಂಗದ ಬಗೆಗೆ ಸ್ನೇ ಹಪ್ರಸವಾದ ಸಂಸ್ಕಾರಬೀಜವನ್ನೂ ಊರಿದಂತಾಗುವದು." ಎಂದು ಡ್ಯಾನಿಯಲ್ ವೆಬ್‌ಸ್ಟರ ಅವರು ತಿಳಿಸುವರು. ಈ ಮಾತುಗಳಿಂದ ಮಾನವನ ಮನದ ಮಹತಿ, ಅಂತಶ್ಶಕ್ತಿ ಅದೆಷ್ಟು ಪ್ರಭಾವಶಾಲಿಯಾಗಿದೆ ಯೆಂದು ವ್ಯಕ್ತವಾಗುವದು. ಮನನ ಶಕ್ತಿಯು ಅಡಗಿರುವದರಿಂದಲೇ ಅವನು ಮಾನವನೆನಿಸಿಕೊಂಡಿರುವನಲ್ಲವೆ !

ಭಾರತೀಯರಲ್ಲಿಯ ಮಂತ್ರಸಿದ್ಧಿಯ ಮಾತು ಈ ಮನನ ಶಕ್ತಿಯನ್ನೇ ಲಕ್ಷಿಸಿದೆ. ಮನನಶಕ್ತಿ, ಚಿಂತನಸಾಮರ್ಥ್ಯ ಇವು ಮಾನವನ ವೈಶಿಷ್ಟ್ಯಗಳು. ಹಿಂದೆ ಮುಂದೆ ನೋಡಿ ನಡೆಯುವ ಕಲ್ಪಕ ವೃತ್ತಿಯು (Power of vision) ಮಾನವನಿಗೆ ಮೀಸಲಾಗಿರಿಸಿದುದು. ಶೆಲೆ ಕವಿಯು ಈ ಮಾತನ್ನು ತನ್ನದೊಂದು ಕವಿತೆಯಲ್ಲಿ ಬಹು ಸರಸವಾಗಿ ವಿವರಿಸಿದ್ದಾನೆ. ಈ ದೃಷ್ಟಿಗೆ 'ಹಾರ್ಮಿ' (Horme) ಎಂದು ನನ್ ಅವನು ಕರೆಯುತ್ತಾನೆ. ಕಲ್ಪಕ ವೃತ್ತಿಯಂತೆ ಕರ್ತೃತ್ವ ಶಕ್ತಿಯೂ (Power of execution) ಮಾನವನ ಸಂಪತ್ತಾಗಿದೆ. ಒಳಿತು ಕೆಡುಕುಗಳನ್ನು ಅರಿತು ಆಚರಿಸುವ ಕರ್ತೃತ್ವ ಶಕ್ತಿಯು ಕಲ್ಪಕ ವೃತ್ತಿಗೆ ಕಂಡುದನ್ನು ಕಾರ್ಯರಂಗಕ್ಕೆ ಇಳಿಸುವದು. ನನ್ ಅವನು ಇದಕ್ಕೆ 'ನೀಮಿ' (Mneme) ಎಂದು ಕರೆದಿದ್ದಾನೆ. ಇವೆರಡು ಆ ಚಿಂತನ ಸಾಮರ್ಥ್ಯದ ಕವಲುಗಳು; ಅಂತರ್ ಬಾಹ್ಯ ಸ್ವರೂಪಗಳು ಒಂದೇ ನಾಣ್ಯದ ಎರಡು ಮಗ್ಗಲುಗಳಿದ್ದಂತೆ. ಯಾವ ಶಿಕ್ಷಣದಲ್ಲಿ ಕಲ್ಪಕ ವೃತ್ತಿ ಕರ್ತೃತ್ವಶಕ್ತಿಗಳಿಗೆ ದೊರೆಯಬೇಕಾದ ಸ್ಥಾನಮಾನ ಗೌರವಗಳಿಗೆ ಅವಕಾಶವಿದೆಯೋ ಅದುವೆ ಸರಿಯಾದ ಸಾಧುವಾದ ಶಿಕ್ಷಣ ಪದ್ಧತಿಯನ್ನ ಬೇಕು. ಶಿಕ್ಷಣದ ವ್ಯಾಪ್ತಿಯು ಮಾನವನ ಅಂತರ್‌ಬಾಹ್ಯ ಸುಧಾರಣೆ ಸಂಸ್ಕಾರಗಳನ್ನು ಅನುಲಕ್ಷಿಸಿ ರೂಪುಗೊಳ್ಳಬೇಕು. ಅದಕ್ಕಾಗಿ ವಿಜ್ಞಾನದ ಜೊತೆಗೆ ಆತ್ಮಜ್ಞಾನವೂ ಸಮನ್ವಯವಾಗಿ ವಿಕಾಸಗೊಳ್ಳುವಂತೆ ನೋಡಿ ಕೊಳ್ಳಬೇಕು. ಆದರೆ ಶಿಕ್ಷಣದ ಗುರಿಯನ್ನು ಸಾಧಿಸಿದಂತಾಗುವದು.

# ಧರ್ಮದೃಷ್ಟಿ

## ಸೃಷ್ಟಿಯ ಸಂಕಲ್ಪ

ಪಂಚಭೂತಗಳ ಹಂಚಿಕೆಯಿಂದಾದ ಈ ಪ್ರಪಂಚದಲ್ಲಿ ಎಲ್ಲವೂ ಪರಿವರ್ತನಶೀಲವಾಗಿದೆ. ಆದರೂ ಆ ಪರಿವರ್ತನೆಯು ಒಂದು ಪರಿಮಿತಿಯನ್ನನುಸರಿಸಿ ಘಟಿಸುವದು. ಆದುದರಿಂದ ಪ್ರಪಂಚದಲ್ಲಿ ಯಾವ ಘಟನೆಯೇ ಜರುಗಲಿ, ಅದು ವಸಂತ ಮಾಸದ ಪರಿಮಳ ಪುಷ್ಪದಂತೆಯೂ, ಮಾಗಿಯ ಕಾಲದ ಪಕ್ವ ಫಲದಂತೆಯೂ, ಪ್ರಕೃತಿ ವ್ಯಾಪಾರದಲ್ಲುಂಟಾಗುವ ಒಂದು ಸಂಭವವಾಗಿರುವದು; ಎಂದರೆ ಪ್ರಪಂಚದ ಘಟನೆಗಳು—ಸಣ್ಣವಿರಲಿ, ದೊಡ್ಡವಿರಲಿ, ಐತಿಹಾಸಿಕವಿರಲಿ, ಸಾಮಾಜಿಕವಿರಲಿ—ಕಾರ್ಯಕಾರಣ ತತ್ವಾನುವರ್ತಿಯಾಗಿ ತೋರುವವು. ದೇಹವನ್ನು ನೆರಳು ಹಿಂಬಾಲಿಸುವಂತೆ ಕಾರಣವನ್ನು ಕಾರ್ಯವು ಹಿಂಬಾಲಿಸುವದು. ಪ್ರಪಂಚವೆಂಬುದು ಒಂದಕ್ಕೊಂದು ಸೇರುವೆಯಿಲ್ಲದ ಸ್ವತಂತ್ರವಾದ ವ್ಯವಹಾರಗಳಿಂದೊಡಗೂಡಿದ ಒಂದು ಪ್ರವಾಹ, ಮಾತ್ರವಲ್ಲ; ಅವುಗಳಲ್ಲೆಲ್ಲ ಮತಿಯಿಂದ ಹೊಂದಿಸಿದ ಗತಿಯೊಂದುಂಟು; ಬುದ್ಧಿವಂತಿಕೆಯಿಂದ ಬೆಸೆದಿರುವ ಬದ್ಧಕ್ರಮವೊಂದುಂಟು. ಪರಂಪರಾಗತವಾದ ಘಟನೆಯೇ ಪ್ರಪಂಚದ ವಸ್ತು ವಿಶೇಷವಲ್ಲ; ಆದರೆ ಆ ಘಟನೆಗಳಲ್ಲಿ ಕಂಡುಬರುವ ಸಮತೆ ಸಮತಾಳ ಇವೇ ಅವುಗಳ ಮುಖ್ಯ ಲಕ್ಷಣ. ಪ್ರಪಂಚದಲ್ಲಿ ಪಡಿಪದಾರ್ಥವೂ ಸಮತೆಯಲ್ಲಿರಲು ಸಮತಾಳವನ್ನು ಹೊಂದಲು ಹವಣಿಸುತ್ತವೆ. ಹೀಗೆ ಸಮತೆಯನ್ನು ಇಲ್ಲವೆ ಸಾಮರಸ್ಯವನ್ನು ಸಾಧಿಸುವದೇ ವಿಶ್ವಧರ್ಮವಾಗಿದೆ; ಸೃಷ್ಟಿಯ ಸಂಕಲ್ಪವಾಗಿದೆ. ಪ್ರಪಂಚವೆಲ್ಲ ಒಂದೇ ಒಂದು ಸಚೇತನ ವಸ್ತುವೆಂದೂ ಒಂದೇ ಆತ್ಮವುಳ್ಳುದೆಂದೂ ಭಾವಿಸುವದು, ಸಕಲ ಪದಾರ್ಥಗಳು ಏಕಮಾತ್ರ ಆತ್ಮಶಕ್ತಿಯಲ್ಲಿ ಸಮುದ್ರದಲ್ಲಿ ನೊರೆ ತೆರೆಗಳು ತೋರಿ ಅಡಗುವಂತೆ ಕೊನೆಗೊಳ್ಳುವವೆಂದೂ ಆ ಏಕಾತ್ಮನ ಚಿಂತನೆಗನುಸಾರವಾಗಿ ಅದರ ಶಕ್ತಿವಿಶೇಷದಿಂದ ಚಲಿಸುವದೆಂದೂ ತಿಳಿಯುವದು, ವಸ್ತುಗಳ ಪರಸ್ಪರ ಸಂಬಂಧ ಅನುಬಂಧಗಳಿಲ್ಲದೆ ಯಾವ ಕಾರ್ಯವೂ ಸಂಭವಿಸುವದಿಲ್ಲವೆಂಬುದನ್ನು ಗ್ರಹಿಸುವದು— ಈ ಭಾವನೆ, ಈ ತಿಳವಳಿಕೆ, ಈ ಗ್ರಹಿಕೆ, ಇದುವೆ ಧರ್ಮದೃಷ್ಟಿ.

**ನಿಜಧರ್ಮ**

ಭಾರತೀಯರ ಸಂಸ್ಕೃತಿಯಲ್ಲಿ 'ಧರ್ಮ' ಎಂಬ ಪದಕ್ಕೆ ಬಗೆಬಗೆಯಾದ ಅರ್ಥವುಂಟೆಂಬುದನ್ನು ವಿಶದಪಡಿಸಬೇಕಾಗಿಲ್ಲ. ಧರ್ಮ ಶಾಸ್ತ್ರ (ನಿಯಮ ನಿಬಂಧನೆ) ಧರ್ಮ ಮಾರ್ಗ (ನೀತಿ), ರಾಜಧರ್ಮ ಯತಿಧರ್ಮ, (ಅನುಗುಣವಾದ ನಡತೆ ಕರ್ತವ್ಯ), ಮೂಲಿಕಾಧರ್ಮ (ಗುಣ ಶಕ್ತಿ), ಪ್ರಕೃತಿಧರ್ಮ (ಸ್ವಭಾವಕ್ಕನುಸಾರವಾದ ವ್ಯಾಪಾರ), ಧರ್ಮಾತ್ಮ (ನ್ಯಾಯ), ಧರ್ಮವನ್ನು ಗಳಿಸು (ಪುಣ್ಯ), ಧರ್ಮಮಾಡು (ದಾನ)-ಇತ್ಯಾದಿ ಧರ್ಮಕ್ಕೆ ಸಂದರ್ಭಾನುಸಾರವಾದ ಅನೇಕಾರ್ಥಗಳಿವೆ. ಆದರೆ ನಿಜವಾದ ಧರ್ಮವು ಹೀಗೆ ನಾನಾರ್ಥಗಳಲ್ಲಿ ಬಳಕೆ ಹೊಂದದೆ, ಒಂದು ವಿಶೇಷವಾದ ಅರ್ಥದಲ್ಲಿ ಮಾತ್ರ ಬಳಿಸಲ್ಪಟ್ಟಿದೆ. ಪ್ರಕೃತಿಯಲ್ಲಿಯೂ ಮಾನವ ಸಮಾಜದಲ್ಲಿಯೂ ಸಕಲ ಪ್ರಪಂಚ ವ್ಯವಹಾರಗಳಲ್ಲಿಯೂ ಸಾಮರಸ್ಯ ಸಮಕಟ್ಟುಗಳನ್ನು ಏರ್ಪಡಿಸಿ ಸುವ್ಯವಸ್ಥಿತ ದಾರಿಯಲ್ಲಿ ಅವೆಲ್ಲ ಸಾಗುವಂತೆ ಮಾಡುವ ಯಾವ ತತ್ವವಿಶೇಷವಿದೆಯೋ, ಅದುವೆ ಧರ್ಮ ಅಥವಾ 'ಋತು'. ಗ್ರೀಕರು ಇದಕ್ಕೆ 'ಡಿಕೆ' (Dike) ಅಥವಾ 'ಡಿಕೈಯಸ್' ಎಂಬ ಪದಕ್ಕೆ 'ಋತು' ಎಂಬುದೇ ಸರಿಯಾದ ಅನುವಾದ. ಈ ಧರ್ಮ ತತ್ವವು ಪರಮ ಶ್ರೇಯವಾದುದು. ಶ್ರೇಯವೆಂಬುದು ಪ್ರಪಂಚದ ರಹಸ್ಯ. ಪ್ರಪಂಚದಲ್ಲಿ ನಾನಾತ್ವವೇ ಮುಖ್ಯವಲ್ಲ; ಅನೇಕತ್ವಕ್ಕೆ ಆಧಾರ ಭೂತವಾದ ಏಕತೆಯು ಪ್ರಧಾನವಾದುದು. ವಿವಿಧತೆಯಲ್ಲಿ ಸಮಾನತೆ, ನಾನಾತ್ವದಲ್ಲಿ ಏಕತ್ವ, ಇದೇ ತತ್ವಜ್ಞಾನದ ಗುಟ್ಟು; ಇದೇ ಆತ್ಮಜ್ಞಾನದ ಗುರಿ. ಈ ಭೌತಸೃಷ್ಟಿಯ ಪೂರ್ಣವಾದ ಅರ್ಥವನ್ನು ನಮ್ಮ ಇಂದ್ರಿಯಗಳು ತಿಳಿಯಲಾರವು. ಕ್ಷಣಿಕವಾದ ಅಪೂರ್ಣವಾದ ಪ್ರಪಂಚ ವಸ್ತುಗಳನ್ನು ಅರಿತು. ಅಷ್ಟರಿಂದಲೆ ತೃಪ್ತಿಪಡೆವ ನಮ್ಮ ದುರ್ಬಲವಾದ ಇಂದ್ರಿಯಗಳು ಮೂಲಕ ಪೂರ್ಣಜ್ಞಾನವನ್ನು ಕೊಡುವಂತಹ ಸತ್ಯವನ್ನು ಅನುಭವಿಸಲಾರೆವು. ತತ್ವಜ್ಞಾನ ಮಾತ್ರವೇ ಈ ಪ್ರಪಂಚದ ಸತ್ಯವನ್ನೂ ಸೊಬಗನ್ನೂ ಕ್ರಮವನ್ನೂ ಕಟ್ಟಳೆಯನ್ನೂ ಕಾರ್ಯ-ಕಾರಣಗಳ ಪರಸ್ಪರ ಸಂಬಂಧವನ್ನೂ ತಿಳಿಸಿ ಆನಂದ ಗೊಳಿಸಬಲ್ಲುದು.

**ಸುಖ–ದುಃಖ**

ಕ್ರಮ ಕಟ್ಟಳೆ ಸಮತಾಳ ಸಾಮರಸ್ಯ ಈ ಭಾವಗಳು ಎಲ್ಲ ತತ್ವಜ್ಞಾನಿಗಳಲ್ಲಿ–ಅವರು ಗ್ರೀಸದವರಿರಲಿ ಭಾರತದೇಶದವರಿರಲಿ, ಪ್ರಾಚೀನ

ರಿರಲಿ, ಅರ್ವಾಚೀನರಿರಲಿ–ಕಂಡುಬರುವವು. ಮಾನವನು ತನ್ನ ಜೀವನವನ್ನು ಕ್ರಮಗೊಳಿಸಬೇಕು: ಶ್ರೇಯಸಿದ್ಧಿಗೋಸುಗ ತನ್ನ ಪ್ರವೃತ್ತಿಗಳನ್ನೆಲ್ಲವನ್ನೂ ಅನುಕೂಲವಾಗುವಂತೆ ಅಂಕಿತದಲ್ಲಿಟ್ಟುಕೊಳ್ಳಬೇಕು; ಪ್ರತಿಯೊಂದು ಕೆಲಸದಲ್ಲಿ ಮಿತಿಯಿಂದ ತೋರ್ಪಡಿಸಬೇಕು. ಇದೇ ಧರ್ಮಸಾಧನೆ. ವಿವೇಕ ಇಂದ್ರಿಯನಿಗ್ರಹ, ಧೈರ್ಯ, ನ್ಯಾಯ ಈ ಮುಂತಾದ ಸದ್ಗುಣಗಳೇ ಮಾನವನನ್ನು ಸಚ್ಚಾರಿತ್ರನನ್ನಾಗಿ ಮಾಡಿ ಅವನ ಪರಮ ಪುರುಷಾರ್ಥ ಈಡೇರುವಂತೆ ನೆರವಾಗುವವು. ಇವುಗಳ ಆಚರಣೆ ಅಳವಡಿಕೆಗಳಿಂದಲೇ ಮಾನವನು ಸೌಖ್ಯವನ್ನೂ ಚಿತ್ತಶಾಂತಿಯನ್ನೂ ಪಡೆಯುವನು.

ಪ್ರಪಂಚದಲ್ಲಿ ಪ್ರತಿಯೊಂದು ಪ್ರಾಣಿಯೂ ಸುಖವನ್ನು ಹುಡುಕುವದು; ದುಃಖವನ್ನು ತಪ್ಪಿಸಿಕೊಳ್ಳಲು ಪ್ರಯತ್ನಪಡುವದು. ಸುಖವನ್ನು ಸಂಪಾದಿಸುವದು ಜೀವನ ಪ್ರವೃತ್ತಿಗಳ ಗುರಿಯಾಗಿದೆ. ಸುಖಜೀವನವೇ ಮನುಷ್ಯನ ಪ್ರೇಯವಾದ ಪುರುಷಾರ್ಥವು. ಸುಖವು ಸುಖವಾಗುವುದರಿಂದ ಒಳ್ಳೆಯದು, ದುಃಖವು ದುಃಖವಾಗಿರುವುದರಿಂದ ಕೆಟ್ಟದು. ಆದರೆ ಸುಖವನ್ನು ಆರಿಸಿಕೊಳ್ಳುವುದರಲ್ಲಿ ಮಾತ್ರ ಮಾನವನು ಬಹಳ ಜಾಗರೂಕನಾಗಿರಬೇಕು; ಯಾಕಂದರೆ ಅನೇಕ ಸಂದರ್ಭಗಳಲ್ಲಿ ಸುಖವು ಸುಖವನ್ನುಂಟು ಮಾಡುವುದರ ಜೊತೆಗೆ ಅಧಿಕವಾದ ದುಃಖವನ್ನೂ ಹುಟ್ಟಿಸುವದು. ಭೋಗಿಗಳು ಬಯಸುವ ಸುಖವು ಅವರಿಗೆ ಮನಶ್ಶಾಂತಿಯನ್ನೂ ದುಃಖ ನಿವಾರಣೆಯನ್ನೂ ಕೊಡುವುದಾದರೆ ಅದನ್ನು ಜ್ಞಾನಿಗಳು ದೂರುವ ಕಾರಣವೇನಿತ್ತು ? ಆದುದರಿಂದ ಶರೀರಸುಖಕ್ಕಿಂತ ಮಾನಸಿಕ ಸುಖವು ಹೆಚ್ಚು ಸಂತೋದಾಯಕವಾದುದು, ತೀಕ್ಷ್ಣವಾದುದು. ಹಾಗೆಯೇ ಮಾನಸಿಕ ವ್ಯಸನಗಳು ಶರೀರದ ನೋವುಗಳಗಿಂತ ಕಟುತರವಾದುವುಗಳು. ಮನಸ್ಸಿನ ಅನುಭವವಿಲ್ಲದಿದ್ದರೆ ಶರೀರದ ಸುಖದುಃಖಗಳ ಅರಿವು ಉಂಟಾಗುವ ಸಂಭವವೇ ಇಲ್ಲ. ಆದುದರಿಂದ ಎಲ್ಲ ಬಗೆಯ ಸುಖದುಃಖಾನುಭವವು ಕೊನೆಗೆ ಮನಸ್ಸನ್ನೇ ಅವಲಂಬಿಸಿರುವುದೆಂದು ಕಂಡುಬರುತ್ತದೆ. ಸುಖವನ್ನು ನಾವು ಎರಡು ಬಗೆಯಾಗಿ ಅನುಭವಿಸಬಹುದು. ನಮ್ಮ ಮನಸ್ಸಿನಲ್ಲಿ ಮೂಡುವ ಬಯಕೆಗಳನ್ನು ಈಡೇರಿಸಿಕೊಳ್ಳುವುದರಿಂದ ಉಂಟಾಗುವ ಸುಖಾನುಭವವು ಒಂದು ವಿಧ; ಬಯಕೆಯೇ ಇಲ್ಲದೆ, ಕಾಮುನೆಂಬುದೇ

ಹುಟ್ಟದೆ ಶಾಂತಮನಸ್ಕರಾಗಿರುವುದರಿಂದ ಉಂಟಾಗುವ ಸುಖಾನುಭವ
ಇನ್ನೊಂದು ವಿಧ; ಇವೆರಡರಲ್ಲಿ ನಿಷ್ಕಾಮ ಸುಖವೇ ಶ್ರೇಷ್ಠವಾದುದು
ಇಂತಹ ನಿಷ್ಕಾಮ ಸುಖವನ್ನು ಪಡೆಯುವದೇ ಮಾನವನ ಪರಮಪುರುಷಾ
ರ್ಥವು. ಇಂದ್ರಿಯ ವ್ಯಾಪಾರವು ಮಾನವನಿಗೂ ಇನ್ನುಳಿದ ಪ್ರಾಣಿಗಳಿ
ಸಮವಾಗಿರುವ ಪ್ರಯುಕ್ತ ಜ್ಞಾನವೆಂಬುದೇ ಮಾನವನ ವೈಶಿಷ್ಟ್ಯ
ಜ್ಞಾನಪೂರ್ವಕವಾದ ಜೀವನವೆ ಮಾನವಜೀವನವೆನಿಸುವದು. ಯಾವುದ
ಬಲದಿಂದ ಮಾನವನು ಇತರ ಪ್ರಾಣಿಗಳಿಗಿಂತ ಶ್ರೇಷ್ಠನಾಗಿರುವನೋ
ಯಾವುದು ತನ್ನ ಜೀವನದ ಹೆಗ್ಗುರುತಾಗಿರುವುದೋ ಅಂತಹ ಜ್ಞಾ
ಸಂಪಾದನೆಗೆ ಅನುಕೂಲವಾದ ಕಾರ್ಯಕ್ರಮವೇ ಮಾನವನ ಜೀವ
ಸೂತ್ರ. ಅಂತಹ ಜೀವನವನ್ನು ಸಾಧ್ಯಮಾಡಿಕೊಳ್ಳುವುದೇ ಮಾನ
ಪರಮಶ್ರೇಯ, ನಿತ್ಯಕಲ್ಯಾಣ. ಅಂತಹ ಜೀವನವನ್ನು ಅರಿಸ್ಟಾಟ
ಆನಂದವೆಂದು ಕರೆದಿರುವನು. ಈ ಆನಂದವೇ ಸೂತ್ರವಾಗಿರುವ ಪೂ
ಜೀವನಿಗೆ ಆತ್ಮಶಾಂತಿಯೂ ಆತ್ಯಂತಿಕ ಸುಖವೂ ಕೂಡಿಯೇ ಲಭಿಸುವ

**ಸಮಾಜದ ಜೀವನ ಭದ್ರತೆ**

ಆತ್ಮಶಾಂತಿ ಇಲ್ಲವೆ ಆತ್ಯಂತಿಕ ಸುಖ ಇದೇ ಶ್ರೇಷ್ಠವಾದರೂ ಶರೀ
ಪೋಷಣೆಗಾಗಿ ಸಮಾಜ ಸುಧಾರಣೆಗಾಗಿ ಐಹಿಕ ವಸ್ತುಗಳ ನೆರವು ಅವ
ವಾಗಿ ಬೇಕು. ಆದರೆ ಈ ಐಹಿಕ ವಸ್ತುಗಳನ್ನು ಸಮಾಜ ಸುಧಾರಣೆ
ಕುಂದು ತಗಲದಂತೆ ಧರ್ಮದಿಂದಲೆ ಅಂದರೆ ಮಿತಿಯಿಂದಲೇ ಗಳಿಸಬೇಕು
ಜೀವನದಲ್ಲಿ ನಮ್ಮ ಆಸೆಗಳಿಗೂ ಆಕಾಂಕ್ಷೆಗಳಿಗೂ ಒಂದು ಮಿತಿಯಿರಬೇಕು
ಯಾವುದರಲ್ಲಿಯೂ ಅತಿಯಾದುದನ್ನು ವರ್ಜಿಸಬೇಕು. ಮಾನವನು ತನ
ಸಾಧ್ಯವಾಗುವದನ್ನು ಅರಿತು ಅದನ್ನು ಹಿತವಾದ ಮಿತವಾದ ರೀತಿಯ
ಯೋಚಿಸಿಕೊಳ್ಳಬೇಕು. ಐಶ್ವರ್ಯವಾಗಲಿ ಅಧಿಕಾರವಾಗಲಿ ಇನ್ನಿ
ಭೋಗ ಸಾಮುಗ್ರಿಗಳಾಗಲಿ ಹೊಂದುವುದಕ್ಕೆ ಒಂದು ಮೇರೆಯಿರಬೇಕು
ಮೇರೆದಪ್ಪಿದರೆ ಅವು ವೈಯಕ್ತಿಕ ಜೀವನದ ಹಾಗು ಸಮಾಜ ಜೀವನ
ಭದ್ರತೆಗೆ ಭಂಗವನ್ನುಂಟುಮಾಡುವವು. ಯಾವುದೊಂದು ಆಯ
ಗುಣವೇ ಇರಲಿ, ಸ್ವಾಯುತ ಸಾಮರ್ಥ್ಯವೇ ಇರಲಿ, ಇತರ ಸನ್ನಿ
ಶಕ್ತಿಗಳನ್ನು ನಾಶಗೊಳಿಸುವಷ್ಟು ಬಲವಾದ ಪ್ರಮಾಣದಲ್ಲಿ ಅದನ

ಬೆಳೆಯಲು ಅವಕಾಶವೀಯಬಾರದು. ಎಲ್ಲ ಶಕ್ತಿಗಳನ್ನು ಸಾಧ್ಯವಾದಷ್ಟು ಒಂದು ಗೂಡಿಸಿ ಹುರಿಗೊಳಿಸಿ ಒಟ್ಟಿನಲ್ಲಿ ಸಾಮರಸ್ಯ ಪಡೆದ ಜೀವನವನ್ನು ನಡೆಸುವದೇ ಧರ್ಮದೃಷ್ಟಿಯ ಧ್ಯೇಯ. ಇದರಿಂದ ಜೀವನವು ಪರಿಪೂರ್ಣ ವಾಗುವುದಲ್ಲದೆ ಅಪೂರ್ವವಾದ ಒಂದು ಸೊಬಗನ್ನೂ ಕಾಂತಿಯನ್ನೂ ಹೊಂದುವದು. ಇದರಂತೆ ಜೀವನದ ಎಲ್ಲ ರಂಗಗಳಲ್ಲಿಯೂ ಸಾಮರಸ್ಯವ ಸಾಧಿಸುವುದೇ ಧರ್ಮದ ರಹಸವು. ಇದನ್ನೇ ಇನ್ನೊಂದು ವಿಧವಾಗಿ ಹೀಗೆ ಹೇಳಬಹುದು: ಕಲೆಯಲ್ಲಾಗಲಿ ಸಾಹಿತ್ಯದಲ್ಲಾಗಲಿ ಸಮಾಜದ ನಿಯಮ–ನಿಬಂಧನೆಗಳಲ್ಲಾಗಲಿ ಜೀವನದಲ್ಲಾಗಲಿ ಸೊಬಗಿರಬೇಕಾದರೆ, ಶಾಂತಿಯು ನೈದಾಳಬೇಕಾದರೆ ಸರಳತೆಯಿರಬೇಕು. ಸಮರಸವುಳ್ಳುದೆಲ್ಲ ಸರಳವಾದುದೆಂದೂ ಸಂಕೀರ್ಣವಾದುದೆಲ್ಲ ಸಾಮರಸ್ಯರಹಿತವಾದು ದೆಂದೂ ಧರ್ಮದೃಷ್ಟಿಯು ಹೇಳುವುದು. ಜೀವನವು ಸರಳವಾಗಿರಬೇಕಾದರೆ ಅದು ಒಂದು ನಿರ್ದಿಷ್ಟವಾದ ಗುರಿಯನ್ನು ಹೊಂದಿರಬೇಕು. ನಮ್ಮ ಸಾಮರ್ಥ್ಯಗಳನ್ನು ಆ ಗುರಿಯ ಸಾಧನೆಗಾಗಿ ವಿನಿಯೋಗಿಸಬೇಕು. ಹಾಗೆ ಮಾಡದೆ ಅನೇಕ ಬಗೆಯ ಧ್ಯೇಯಗಳ ಗೊತ್ತುಗುರಿಗಳ ಬೆನ್ನು ಹತ್ತಿದರೆ ಜೀವನವು ತೊಡಕಾಗಿ ನಮ್ಮ ಆ ಶಕ್ತಿ ಸಾಮರ್ಥ್ಯಗಳು ಸವೆದು ಅಂತರ್ಯುದ್ಧದಲ್ಲಿ ಸಹಿಸಲಾಗದ ತಾಕಲಾಟ ಉಂಟಾಗುವದು.

### ಪ್ರಗತಿಪರ ಧರ್ಮ ದೃಷ್ಟಿ

ವ್ಯಕ್ತಿಗೂ ಸಮಾಜಕ್ಕೂ ನಿಕಟವಾದ ಸಂಬಂಧವಿದೆಯೆಂಬುದನ್ನು ಧರ್ಮದೃಷ್ಟಿಯು ಸ್ಪಷ್ಟಗೊಳಿಸುವದು. ಸಮಾಜದ ಭದ್ರತೆಗೆ ಭಂಗ ಬರದಂತೆ ವ್ಯಕ್ತಿಯು, ವ್ಯಕ್ತಿಯ ಉನ್ನತಿಗೆ ವ್ಯತ್ಯಯವುಂಟಾಗದಂತೆ ಸಮಾಜವು ಅನ್ಯೋನ್ಯವಾಗಿ ವ್ಯವಹರಿಸಬೇಕು. ಸಮಾಜವು ಸಂಪೂರ್ಣ ವಾಗಿ ಸುಸ್ಥಿತಿಯಲ್ಲಿರಬೇಕಾದರೆ ಅದರ ಘಟಕಗಳಾದ ವ್ಯಕ್ತಿಗಳು ಕ್ಷೇಮ ದಿಂದಿರಬೇಕು. ಹಾಗೆಯೇ ವ್ಯಕ್ತಿಗಳು ಕ್ಷೇಮದಿಂದಿರಬೇಕಾದರೆ ವ್ಯಕ್ತಿ ವ್ಯಕ್ತಿಗಳಲ್ಲಿ ಪರಸ್ಪರ ಹೊಂದಿಕೆಯಿರಬೇಕು. ಇಂತಹ ಸಾಮರಸ್ಯದಿಂದ ಸುಖಶಾಂತಿಗಳು ದೊರೆಕೊಳ್ಳುವವೆಂದು ಗ್ರೀಕನಾದ ಡೆಮಾಕ್ರಿಟಸನು ತನ್ನದೊಂದು ವಚನದಲ್ಲಿ ಹೇಳಿರುವನು. ಅದರಲ್ಲಿ ಸುಖ ಸಮಾಧಾನಗಳು

ಬಾಹ್ಯ ಪರಿಸ್ಥಿತಿಗಳನ್ನು ಅವಲಂಬಿಸದೆ ಮನವನ್ನು ಅವಲಂಬಿಸಿರು
ಮನಸ್ಸಿನ ಆವೇಗವನ್ನು ತಡೆದು ಅದರ ವೃತ್ತಿಗಳನ್ನು ಹಿತವಾಗಿ ಮಿತ
ಬಳಸಿದರೆ, ಜೀವನವು ಸಮುಕಟ್ಟನ್ನು ಹೊಂದುವದೆಂಬ ಮಾತನ್ನೂ ಅ
ತಿಳಿಸಿರುವನು. ಭೋಗಸಾಮುಗ್ರಿಗಳಲ್ಲಿ ತನಗಿಂತ ಮೇಲಾದವ
ಉಳ್ಳವರನ್ನು ಕಂಡು ತಾನು ಅಸೂಯೆ ಪಟ್ಟುಕೊಳ್ಳದೆ, ತನಗಿಂತ ಕೀ
ದವರನ್ನು-ಬಡವರನ್ನು ಕಂಡು ಸಮಾಧಾನಪಟ್ಟುಕೊಳ್ಳಬೇಕು ಎ
ಉಪದೇಶಿಸಿರುವನು. ಈ ತರಹದ ನೀತಿಬೋಧಕ ನುಡಿಗಳು ಗ್ರೀ
ತಾತ್ವಿಕರಲ್ಲಿಯೂ ಚೀನಾದ ಕಾನ್‌ಫ್ಯೂಶಿಯಸನ ವಚನಗಳಲ್ಲಿಯೂ ಹಿ
ಧರ್ಮೋಪದೇಶಕರ ನೀತಿಶಾಸ್ತ್ರಗಳಲ್ಲಿಯೂ, ಬಾಯಬಲ್ಲಿನ ಸುವಾರ್ತೆ
ಲ್ಲಿಯೂ ವಿಪುಲವಾಗಿ ಕಂಡುಬರುವವು. ಆದರೆ ಸಮಾಜದಲ್ಲಿ ಉಳ್ಳ
ಬಡವರು ಎಂಬ ಭೇದವೇಕೆ ? ವ್ಯಕ್ತಿವ್ಯಕ್ತಿಗಳಲ್ಲಿ ಇಷ್ಟೊಂದು ಆರ್ಥಿ
ವಿಷಮತೆ ನೆಲೆಸಿರುವಾಗ, ಸಮಾಜಜೀವನದಲ್ಲಿ ಸಾಮರಸ್ಯವೂ ಸಮತ
ಸಮನಿಸುವುದೇ ? ಸಾಂಪ್ರದಾಯಿಕ ಧರ್ಮದಲ್ಲಿ ಈ ಪ್ರಶ್ನೆಗಳಿಗೆ ಉತ್ತರ
ಸಿಗಲಾರದು. ವ್ಯಕ್ತಿಗಳಿಗೆ ಸುಖದುಃಖಗಳಾಗಲಿ ಬಡತನ ಸಿರಿವಂ
ಗಳಾಗಲಿ ಅವರವರ ಪಾಪ ಪುಣ್ಯಗಳಿಗನುಸಾರವಾಗಿ ಒದಗುವವೆ
ಸನಾತನ ಧರ್ಮವು ಉತ್ತರಿಸುವದು. ಆದರೆ ಇವು ಪಾಪ ಪುಣ್ಯಗಳ ಫ
ವಲ್ಲ; ಈ ಭೇದವು ಕೃತ್ರಿಮವೆಂದೂ ಇದು ಸಮಾಜ ರಚನೆಯ ದೋ
ವೆಂದೂ ಪ್ರಾಗತಿಕ ಧರ್ಮವು ಹೇಳುವದು. ಸಮಾಜದಲ್ಲಿ ಸರಿಯ
ಆರ್ಥಿಕ ಸಂಘಟನೆಯಾದರೆ ಭೋಗ ಸಾಮುಗ್ರಿಗಳಲ್ಲಿ ಕಂಡುಬರುವ ವಿ
ವಾದ ವ್ಯತ್ಯಾಸದಿಂದ ಹುಟ್ಟಿದ ಈ ಕೃತಕ ಭೇದವಳಿಯುವದೆಂದು ಸಾ
ವಾದವೂ ಸಾರುವದು.

ಪ್ರಗತಿಪರ ಧರ್ಮ ದೃಷ್ಟಿಯಿಂದ ನೋಡಿದರೆ ಸಾಮ್ಯವಾ
ಸೃಷ್ಟಿಯ ಸಂಕಲ್ಪದಲ್ಲಿ ಕ್ರಮಪ್ರಾಪ್ತವಾಗಿದೆಯೆಂದು ಅನಿಸುವ
ಅಜ್ಞಾನವು ಎಲ್ಲ ದುಃಖಗಳ ತಾಯಿಬೇರೆಂದು ವೇದಾಂತವು ಹೇಳುತ್ತ
ಬಡತನವು ಎಲ್ಲ ಸಾಮಾಜಿಕ ದೋಷಗಳ ತವರೂರೆಂದು ಸಾಮ್ಯವಾ
ಸಾರುತ್ತದೆ. ಬಡತನವು ಅವರವರ ಪಾಪದ ಫಲವೆಂಬ ತಿಳಿವಳಿಕೆ ಬೇ
ದ್ದರಿಂದ ಅದನ್ನು ಅಳಿಸಲು ಪ್ರಯತ್ನಗಳಾಗಲಿಲ್ಲ. ಬಡತನವಿದ್ದಲ್ಲಿ ಬೇ

ವವರು ಹೆಚ್ಚು. ಬೇಡುವವರಿದ್ದಲ್ಲಿ ನೀಡುವವರಿಗೊಂದು ಹೆಮ್ಮೆ. ಬೇಡು ವವರು ನೀಡುವವರು ಎಂಬ ಭೇದವಿರುವವರೆಗೆ ನೀಡುವದೂ, ನೀಡಿ ಪುಣ್ಯ ಸಂಗ್ರಹ ಮಾಡಬೇಕೆನ್ನುವದೂ ಸಮಾಜದಲ್ಲಿ ರೂಢವಾಗುವವು. ಅದನ್ನು ಎತ್ತಿ ಹಿಡಿಯಲು ಶಾಸ್ತ್ರಗಳೂ ಮುಂದೆ ಬರುವವು. ದತ್ತಿಗಳೂ ಛತ್ರಗಳೂ ಹುಟ್ಟಿಕೊಂಡಿರುವದು ದಾನಧರ್ಮದ ಕಲ್ಪನೆಯು, ಉದಯವಾಗಿರುವದು, ಎಲ್ಲಾ ಸಾಮಾಜಿಕ ವಿಷಮತೆಯಿಂದಲೇ. ಬಡತನವನ್ನು ಹೊಗಳಿ ಪುರ ಸ್ಕರಿಸುವದೂ ಐಸಿರಿಯನ್ನು ತೆಗಳಿ ತಿರಸ್ಕರಿಸುವದೂ ಸಮಾಜ ಜೀವನದಲ್ಲಿ ನಡೆದು ಹೋದವು. ಆದರೆ ಬಡತನದಿಂದ ಹುಟ್ಟಿದ ಸಾಮಾಜಿಕ ಲೋಪ ದೋಷವು ಇದ್ದಕ್ಕಿದಂತೆಯೇ ಉಳಿಯಿತು. ಇಂದು ಸಾಮ್ಯವಾದವು ನಡಕಟ್ಟಿ ನಿಂತಿರುವದು ಸಮಾಜದ ಈ ಕುಂದು ಕೊರತೆಯನ್ನು ಪರಿಹರಿಸಲು!

**ಸಮನ್ವಯ ಧರ್ಮ**

ಸಾಮ್ಯವಾದದ ಉದ್ದೇಶವೇನೋ ಘನವಾಗಿದೆ, ಪವಿತ್ರವಾಗಿದೆ. ಆದರೆ ಅದನ್ನು ಈಡೇರಿಸುವ ಸಾಧನಗಳೂ ಅಷ್ಟೇ ಘನವೂ ಪವಿತ್ರವೂ ಆಗಿರಬೇಡವೇ ? ಸಮಾಜ ಜೀವನದಿಂದ ಬಡತನವನ್ನು ಕಿತ್ತೆಸೆಯುವ ಆದರ್ಶವೇನೋ ಆಕರ್ಷಣೀಯವಿದೆ ! ಅಂತಹ ಆದರ್ಶದ ಅದ್ಭುತ ಸ್ವರೂ ಪವೆ ಸಾಮಾನ್ಯ ಉದ್ದೇಶ–ಉಪಾಯಗಳನ್ನೆಲ್ಲ ಮಾರ್ಪಡಿಸುವದು. ಇತಿಹಾಸ ಕಾಲದಿಂದಲೂ ಬಂದಿದೆ ಎಂದು ತಲೆಯೆತ್ತಿ ಬೆಳೆದು ಬಂದಿರುವ ಈ ಭೇದವನ್ನೇ ಭೂತವನ್ನಾಗಿ ಮಾಡಿ, ವರ್ಗವರ್ಗಗಳಲ್ಲಿ ಕಲಹವು ಕುದುರು ವಂತೆ ದ್ವೇಷ ಅಸೂಯೆಗಳ ಬೀಜವನ್ನು ಬಿತ್ತಿ, ಹಿಂಸಾಚಾರಕ್ಕೆಳೆಯ- ಕೂಡದು, ಅದನ್ನು ಪರಿಹರಿಸಲಿಕ್ಕೆ ಪ್ರಯತ್ನಿಸಬೇಕು. ವರ್ಗವರ್ಗಗಳಲ್ಲಿ ಒಲವನ್ನು ಹುಟ್ಟಿಸಿ, ಸತ್ಯ ಪ್ರೇಮ ಅಹಿಂಸೆಗಳಿಂದ ಆದರ್ಶವನ್ನು ಸಾಧಿಸ ಬೇಕು. ಧರ್ಮ ದೃಷ್ಟಿಯು ತೋರಿಸುತ್ತಿರುವದು ಈ ಸರಳವೂ ಸುಂದ ರವೂ ಸುಗಮವೂ ಆದ ದಾರಿಯನ್ನು ! ಸಾಮಾನ್ಯವಾಗಿ ಸಾಮಾಜಿಕ ಪರಿಸ್ಥಿತಿಯ ಒತ್ತಾಯವೇ ಮಾನವನ ನಡತೆಯನ್ನು ರೂಪುಗೊಳಿಸುವದು. ಧನಿಕನು ದುಷ್ಟನೆಂದು ಆಳುಗಳ ದುಡಿತದ ಸುಲಿಗೆಯನ್ನು ಮಾಡುವದಿಲ್ಲ. ಆದರೆ ತಾನಿರುವ ಸಮಾಜದ ಒತ್ತಾಯದಿಂದ ಆತನು ಹಾಗೆ ಮಾಡ ಬೇಕಾಗುತ್ತದೆ. ಪರಿಸ್ಥಿತಿಯ ಪ್ರಭಾವಕ್ಕೆ ತಕ್ಕಂತೆ ಮಾನವನ ಸ್ವಭಾವದಲ್ಲಿ

ಮಾರ್ಪಾಟುಗಳಾಗುವವೆಂದು ಸಾಮ್ಯವಾದವು ಬಗೆಯುತ್ತ
ಆದುದರಿಂದ ಸಮಾಜದ ಪರಿಸ್ಥಿತಿಯನ್ನು ಮೊಟ್ಟಮೊದಲು ಸಲ್ಲಿ
ಬೇಕೆಂದು ಸಾಮ್ಯವಾದಿಯು ಬಯಸುವನು. ಅವನ ಈ ಬಯಕೆಯು
ಸ್ತುತ್ಯವೇ ! ಆದರೆ ಈ ಮಾರ್ಪಾಟು ಯಾವಾಗಲೂ ಕ್ರಾಂತಿಯಿಂದ
ಆಗಬೇಕೆಂಬ ಭ್ರಾಂತಿಯೂ ಅವನಲ್ಲಿರಬಾರದು; ಹಟ ಅವನ
ಕೂಡದು. ಯಾಕಂದರೆ ಶಾಂತಿ ಸತ್ಯ ಪ್ರೇಮ ಅಹಿಂಸೆ ಸಹಕಾ
ಸಂಯಮನ ಮುಂತಾದವುಗಳೇ ಧರ್ಮದೃಷ್ಟಿಗೆ ಮೂಲ ಬೇರುಗಳಲ್ಲವೆ!

ಜೀವನವು ಸಮಗ್ರವಾಗಿದೆ, ಸಂಪೂರ್ಣವಾಗಿದೆ. ಆದರಲ್ಲಿ ಐಹಿ
ಜೀವನ ಆಧ್ಯಾತ್ಮಿಕ ಜೀವನ ಎಂದು ಭೇದ ಬಗೆಯಬಾರದಾಗಿ ಧರ್ಮ
ದೃಷ್ಟಿಯು ಬೀರುವದು. ಬಡತನ ಸಿರಿವಂತಿಕೆ ಎಂಬ ಅಸ್ವಾಭಾವಿ
ಭೇದವನ್ನೂ ಒಪ್ಪದು ಧರ್ಮದೃಷ್ಟಿಯು. ಈ ಸಮನ್ವಯದೃಷ್ಟಿ
ವ್ಯಾವಹಾರಿಕದ ಜೀವಾಳವೇ ಪಾರಮಾರ್ಥಿಕವಾಗಿಹುದು-ಎಂದ ಮೇಲೆ
ಆರೋಗ್ಯ, ಸಂಪತ್ತು, ಸಮಾಜಸೇವೆ, ಕಲೆ, ಸಾಹಿತ್ಯ, ವಿಜ್ಞಾನ ಈ ಮೊ
ಲಾದುವನ್ನೆಲ್ಲ ಕೀಳು ಎಂದು ಭಾವಿಸುವುದೇಕೆ ? ಶರೀರ ಪುಷ್ಟಿವಡೆಯ
ಬುದ್ಧಿವಿಕಸನವಾಗದೆ ಸೌಂದರ್ಯಾನುಭವವಿಲ್ಲದೆ ಸತ್ಯದ ಸವಿಯ
ಜೀವನದ ಮಾಧುರ್ಯವನ್ನಾದರು ಪಡೆವುದೆಂತು ? ಆದಕ್ಕಾಗಿ ಮಾನ
ಜೀವನದ ಪರಿಪೂರ್ಣತೆಯನ್ನು ಪಡೆಯಬೇಕು. ಮಾನವನ ಶಾರೀರ
ಮಾನಸಿಕ ಆಧ್ಯಾತ್ಮಿಕ ಶಕ್ತಿಸಾಮರ್ಥ್ಯಗಳ ಪೂರ್ಣವಿಕಾಸನವಾಗಬೇಕು
ಧರ್ಮದೃಷ್ಟಿಗೆ ಇದುವೆ ಧ್ಯೇಯವಾಗಿದೆ; ಇದುವೆ ಆದರ ಗೊತ್ತಿ
ಗುರಿಯಾಗಿದೆ.

# ವ್ಯಕ್ತಿಧರ್ಮ

ಸ್ವರಾಜ್ಯ ಸಂಪಾದನೆಯ ಈ ಎರಡು ವರುಷಗಳಲ್ಲಿ ಸಂಭವಿಸಿದ ಘಟನೆಗಳನ್ನು ಮತ್ತು ಅದನ್ನು ಸುಗಮವಾಗಿ ಎದುರಿಸಿದ ನಮ್ಮ ಮುಖಂಡರ ಮುತ್ಸದ್ದಿತನವನ್ನು ನಾವು ನೆನಿಸಿಕೊಂಡಾಗ ನಮ್ಮ ನಾಡಿಗೆ ಇರುವ ಉಜ್ವಲ ಭವಿತವ್ಯದ ಅರಿವು ಉಂಟಾಗದಿರದು. ಕಾಶ್ಮೀರ ಸಮಸ್ಯೆಯ ಪರಿಹಾರ, ಭಾಷಾವಾರ ಪ್ರಾಂತರಚನೆ, ಅದರಲ್ಲಿಯೂ ಐದು ಆಡಳಿತೆಯನ್ನು ಹರಿದು ಹಂಚಿ ಹೋಗಿದ್ದ ಕನ್ನಡನಾಡಿನ ಏಕೀಕರಣ, ಅಖಂಡ ಭಾರತಕ್ಕೆ ಪೂರೈಕೆಯಾಗಬೇಕಾಗಿದ್ದ ಆಹಾರದ ಉತ್ಪಾದನೆ, ಔದ್ಯೋಗಿಕ ಪ್ರಗತಿ, ನಾಡಿನ ಸರ್ವಮುಖವಾದ ಸಂಪದಭಿವೃದ್ಧಿ—ಈ ಮೊದಲಾದ ಹಲವಾರು ಸಂಗತಿಗಳ ಬಗೆಗೆ ಮಹತ್ವಪೂರಿತವಾದ ಆಲೋಚನೆಯನ್ನು ಮಾಡಿ ನಾವು ಸಿದ್ಧಾಂತಕ್ಕೆ ಬರಬೇಕಾಗಿದೆ; ನಾಡಿನ ಏಳಿಗೆಯನ್ನು ಕಂಡುಕೊಳ್ಳಬೇಕಾಗಿದೆ. ತ್ಯಾಗ ದಿವ್ಯಜೀವನದ ಆದರ್ಶಗಳನ್ನಿಟ್ಟುಕೊಂಡು ಪುರಾತನ ಕಾಲದಿಂದ ಶ್ರೇಷ್ಠವಾದ ಪರಂಪರೆಯನ್ನು ಕಾಯ್ದುಕೊಂಡು ಬಂದ ನಮಗೋಸುಗ ನಾವು ಕಾಣಬಯಸಿದ ಉಜ್ವಲ ಭವಿತವ್ಯವು ಕಾದು ಕೊಂಡು ಕುಳಿತಿದೆ. ಆದರೆ ಅದನ್ನು ಸಾಧಿಸಲಿರುವ ನಮಗೆ ಕಾಲ್ತೊಡಕೆನಿಸಿದ ಸಂಗತಿಗಳ ಅರಿವನ್ನು ಮರೆಯದಿರೋಣ. ನಮ್ಮ ಪ್ರಗತಿಗೆ ಅಡೆತಡೆಗಳನ್ನೊಡ್ಡುವ ಸಂಗತಿಗಳನ್ನೆಲ್ಲ ಪರಿಹರಿಸಿ ಉಜ್ವಲತೆಯನ್ನು ಪಡೆಯುವದು ನಮ್ಮ ಕರ್ತವ್ಯವಾಗಿದೆ; ಈಗಿನ ನಮ್ಮ ಧರ್ಮವಾಗಿದೆ. ನಾವು ನಡೆದು ತೋರಿಸಬೇಕಾಗಿದ್ದ ನಮ್ಮ ಧರ್ಮವು ನಮ್ಮ ಏಳಿಗೆಗೆ ಅನುವೀಯುವದಲ್ಲದೆ ಅದರ ಆದರ್ಶದಲ್ಲಿ ಮತ್ತು ಸಾಧನೆಯಲ್ಲಿ ಹೊರ ನಾಡುಗಳ, ಜೊತೆಗೆ ಈ ಜಗದ ಕ್ಷೇಮವನ್ನೂ ಕಾಣಬೇಕಾಗಿದೆ. ಕಳೆದ ಘೋರವಾದ ಎರಡು ಮಹಾಯುದ್ಧಗಳ ಬೇಗೆಯಿಂದ ತಳಮಳಗೊಂಡ ಈ ಭೂತಳಕ್ಕೆ ಕ್ಷೇಮವನ್ನುಂಟು ಮಾಡುವ ಹೊಣೆಯು ನಮ್ಮದಿರದಿದ್ದರೂ ಮುಂದುವರಿದ ಅನೇಕ ರಾಷ್ಟ್ರಗಳು ನಮ್ಮ ನಾಡಿನಿಂದ ಅದನ್ನು ಅಪೇಕ್ಷಿಸುತ್ತಿವೆ. ಇಂತಹ ಸಂಧಿಕಾಲದಲ್ಲಿ ನಮ್ಮ ಹೊಣೆಯನ್ನರಿತು ನಮ್ಮ ಧ್ಯೇಯ

ಧೋರಣೆಗಳ ಬಗೆಗೆ ಸರಿಯಾದ ತಿಳಿವಳಿಕೆಯನ್ನು ಪಡೆದುಕೊಳ್ಳೋಣ
ನಮ್ಮ ಇಂದಿನ ಧರ್ಮವನ್ನರಿತುಕೊಳ್ಳೋಣ.

ಧರ್ಮ ಪದವು ನಮ್ಮಲ್ಲಿ ಅನೇಕ ಅರ್ಥಗಳಲ್ಲಿ ರೂಢವಾಗಿ
ನಾವೀಗ ಗಮನಿಸಬೇಕಾಗಿದ್ದ ಧರ್ಮವು ಒಂದು ಮತಪ್ರಕ್ರಿಯೆಯನ್ನು
ಉದ್ದೇಶಪಟ್ಟುಕೊಂಡಿರುವದಿಲ್ಲ. ಆದರೆ ಅದು ತ್ರಿಕಾಲಾಬಾಧಿತ ಸಿದ್ಧಾಂತ
ಪರವಾಗಿದೆ. ಮತಮತಗಳ ಗಲಾಟೆಯು ಹಿಂದೊಮ್ಮೆ ಆಗಿ ಹೋಯಿತು
ಅದು ನಾಡುನಾಡುಗಳಲ್ಲಿ ನಡೆಯಿತು; ಮಾತ್ರವಲ್ಲ, ನಮ್ಮ ನಾಡಿನಲ್ಲಿ
ಅತಿ ವೆಗ್ಗಳವಾಗಿಯೂ ನಡೆಯಿತು. ಅದರ ಸಿಹಿಕಹಿಗಳ ನೆನವು ನಮಗೆ
ಸಾಕಷ್ಟಿದೆ. ಆದರೆ ಈ ಹೊಸಕಾಲದಲ್ಲಿ ನಮಗೆ ಅವಶ್ಯವೆನಿಸಿದು
ಮತಗಳ ಸಂಘರ್ಷಣೆಯಲ್ಲ, ಧರ್ಮದ ಸಾಂಸ್ಕೃತಿಕ ಸ್ವರೂಪ. ನಮ್ಮ
ಹಿಂದಿನ ಸಂಸ್ಕೃತಿಯ ಆಧಾರದಲ್ಲಿ ಇನ್ನು ಮುಂದಿನ ನಮ್ಮ ಧರ್ಮ ಮು
ಬೇಕಾಗಿದೆ. ಅದಕ್ಕಾಗಿ ನಮ್ಮ ಸಂಸ್ಕೃತಿಯ ಸ್ವರೂಪವನ್ನು ಅರಿ
ಕೊಳ್ಳಬೇಕಾಗಿದೆ. ನಡೆನುಡಿಗಳ ಮೇಳದಲ್ಲಿ ಸಂಸ್ಕೃತಿಯ ಲಕ್ಷಣ
ವ್ಯಕ್ತವಾಗುತ್ತಿದೆ. ಮಾತಿನಂತೆ ಮನವೂ, ಮನದಂತೆ ಮಾತೂ ಹೊಂ
ಕೊಳ್ಳಬೇಕು. ಧರ್ಮತತ್ವಗಳು—ಅದು ಆವ ದೇಶದಲ್ಲಿ ರೂಢವಾ
ಧರ್ಮವೇ ಇರಲಿ ಅದರ ತತ್ವಗಳು—ಮಾತಿನಲ್ಲಿ ಮಾತ್ರ ಪ್ರಚಾರಕ್ಕಿದ್ದ
ಪ್ರತ್ಯಕ್ಷ ಆಚರಣೆಯಿಂದ ಅವುಗಳ ಸೊಬಗನ್ನು ಅನುಭವಿಸಲಿಕ್ಕೆ ಇದ್ದ
'ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ಮೆಚ್ಚ ನಮ್ಮ ಕೂಡಲಸಂಗ
ದೇವ' ಎಂದು ತಿಳಿಸುವ ಬಸವಣ್ಣನ ವಚನವು ನಡೆನುಡಿಗಳ ಮೇಳದ
ಬೆಡಗನ್ನು ಸೂಚಿಸುತ್ತಿದೆ. ಮನನ ಶಕ್ತಿಯಿಂದ ಮಾನವನು; ಇದರಿಂ
ಅವನು ಇನ್ನುಳಿದ ಪ್ರಾಣಿಗಳಿಗಿಂತ ಭಿನ್ನನಾಗಿದ್ದಾನೆ. ಅವನ ಮಾ
ಮಂತ್ರವಾಗಬೇಕು, ಮಂತ್ರವೆನಿಸಿದ ಜ್ಯೋತಿರ್‌ಲಿಂಗವೆನಿಸಬೇಕು. ಮ
ಶಕ್ತಿಯಲ್ಲಿಯ ಅತುಲವಾದ ಮಹತ್ವವನ್ನು ಕಂಡ ನಮ್ಮ ಹಿರಿಯ
ಕ್ರಿಯಾಶಕ್ತಿಯಲ್ಲಿ ಅದಕ್ಕೂ ಹೆಚ್ಚಿನ ಪರಿಣಾಮವನ್ನು ಕಂಡುಕೊಂಡ
ತನ್ನ ವಿಚಾರಕ್ಕೆ ನಿಲುಕಿದ್ದನ್ನು ಆಚಾರಕ್ಕೆ ಇಳಿಸುವಲ್ಲಿ ಮಾನವನ
ತೆಯು ಇದೆಯೆಂದು ಅರಿತ ಅವರು ನವೀನ ಸಂಸ್ಕೃತಿಯೊಂದನ್ನು ಸಾ
ಕೊಂಡು ನಡೆದರು. ಅದು ತಮ್ಮ ಜೀವನದ ಉಸಿರೆಂದು ಭಾವಿಸಿಕೊಂ
ಬಂದರು.

ನಮ್ಮವರ ವೈಯುಂಡ ಈ ವೃತ್ತಿಯು ಜೀವನದಲ್ಲಿ ಅವರಿಗೊದಗುವ ಎರಡುತೊಡರುಗಳನ್ನು ನಿವಾರಿಸಿಕೊಳ್ಳಲು ಸೌಲಭ್ಯವನ್ನುಂಟು ಮಾಡಿ ಕೊಟ್ಟಿತು. ನಿಶ್ಚಿತ ಧೋರಣೆಯನ್ನು ಈಡೇರಿಸಿಕೊಳ್ಳವಾಗ ಮುಂಬರುವ ದ್ವಂದ್ವಗಳ ಪರಿಹಾರವು ಅವರಿಗೆ ಒಂದು ಯೋಗವಾಗಿ ಪರಿಣಮಿಸಿತು. ಅನಿಷ್ಟವನೋಡಿಸಿ ಇಷ್ಟವ ನೆಲೆಗೊಳಿಸುವದಕ್ಕಿಂತ ಮಿಗಿಲಾದ ಯೋಗವು ಇನ್ನಾವುದು ? ಅನ್ಯಾಯ ಅಸತ್ಯವನ್ನು ಕಂಡು ಇದು ಅನ್ಯಾಯ ಅಸತ್ಯ ಎಂದು ಹೇಳುವ ಧೈರ್ಯವನ್ನು — ಈ ನೈತಿಕ ಧೈರ್ಯವನ್ನು — ಕಳೆದುಕೊಂಡಾಗ ಧರ್ಮವಂತರು ಅದನ್ನು ಸ್ಪಷ್ಟವಾಗಿ ಹೇಳಿದರು. ನಿತ್ಯದ ನಡೆಯಲ್ಲಿ ಅದನ್ನು ವ್ಯಕ್ತಗೊಳಿಸಿದರು. ನೈತಿಕ ಧೈರ್ಯವಿಲ್ಲದ ನಮಗೆ ಮಹಾತ್ಮಾ ಗಾಂಧೀಜಿಯವರು ಅಹಿಂಸಾತ್ಮಕ ಅಸಹಕಾರದಿಂದ ಅನ್ಯಾಯ ಅಸತ್ಯದ ಕೂಡ ಹೋರಾಡುವ ಕಲೆಯನ್ನು ತಿಳಿಸಿದರು, ಧೈರ್ಯವನ್ನು ತುಂಬಿ ತುಳುಕಿಸಿದರು, ಕ್ರಿಯೆಯ ಪ್ರಭಾವವನ್ನು ಬೆಳಗಿಸಿದರು.

> ಕ್ರಿಯಾಮಥನವಿಲ್ಲದೆ ಕಾಣಬಂದುದೆ ಇಕ್ಷುವಿನೊಳಗಣ ಮಧುರ ?
> ಕ್ರಿಯಾಮಥನವಿಲ್ಲದೆ ಕಾಣಬಂದುದೆ ತಿಲದೊಳಗಣ ತೈಲ ?
> ಕ್ರಿಯಾಮಥನವಿಲ್ಲದೆ ಕಾಣಬಂದುದೆ ಕ್ಷೀರದೊಳಗಣ ತುಪ್ಪ ?
> ಕ್ರಿಯಾಮಥನವಿಲ್ಲದೆ ಕಾಣಬಂದುದೆ ಕಾಷ್ಠದೊಳಗಣ ಅಗ್ನಿ ?
> ಇದು ಕಾರಣ ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ
> ಮಹಾತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ !

ಅಲ್ಲಮ ಪ್ರಭುದೇವರ ಈ ಮಾತುಗಳಲ್ಲಿ ಕೃತಿಯಿರಬೇಕು, ಕೃತಿಯಲ್ಲಿ ಸೊಬಗಿರಬೇಕು ಎಂಬ ಧ್ವನಿಯಿದೆ. ಮಹಾತ್ಮರ ಮಾತುಗಳಲ್ಲಿ ಓಜಸ್ಸೂ ಕೃತಿಗಳಲ್ಲಿ ತೇಜಸ್ಸೂ ಬೆರೆತಿದ್ದುದರಿಂದ ಅವರ ಮಾತುಕೃತಿಗಳಿಗಾಗಿ ಅಷ್ಟೊಂದು ಗೌರವ, ಅಷ್ಟೊಂದು ಅಭಿಮಾನ, ಅವುಗಳಲ್ಲಿ ಅಷ್ಟೊಂದು ಸಾಮರಸ್ಯವಿತ್ತು; ಸೌಂದರ್ಯವಿತ್ತು. ಸತ್ಕ್ರಿಯಾಚರಣೆಯ ಸತ್ಫಲವೇ ಅಂತಹ ಮಹಿಮೆಯುಳ್ಳದು. ಸತ್ಕ್ರಿಯೆಯೆಂದರೆ ಇಂದ್ರಿಯ ನಿಗ್ರಹ. ಗೊತ್ತು ಗುರಿಯಿಲ್ಲದೆ ಸುತ್ತಲೂ ಹೇದಾಡುತ್ತಿರುವ ಇಂದ್ರಿಯ

ಪ್ರವೃತ್ತಿಯಲ್ಲಿ ಸೌಖ್ಯದ ಸುಳಿವಿಲ್ಲ. ಸಿಕ್ಕಾಬಟ್ಟೆಯಲ್ಲಿ ಚದುರಿ ಹೋಗುತ್ತಿರುವ ಜಲ ಪ್ರವಾಹದಿಂದ ಯಾವ ಘನವಾದ ಫಲವನ್ನು ಕಾಣಲಾದೀತು? ಒಂದು ನಿಯಮಿತ ಸ್ಥಾನದಲ್ಲಿ ಹರಿದು ಹೋಗುವ ಆ ನೀರಿನಿಂದ ವಿದ್ಯುತ್ ಶಕ್ತಿಯನ್ನು ಪಡೆದುಕೊಳ್ಳಲಿಕ್ಕಾಗುವದಿಲ್ಲವೇ ? ನಿಗ್ರಹಿತವಾದ ಇಂದ್ರಿಯ ಶಕ್ತಿಯಿಂದ ಪಡೆದುಕೊಳ್ಳುವ ಫಲದಲ್ಲಿಯೂ ಒಂದು ಮಹತ್ವ ಹುದುಗಿದೆ. ಬಿಡಿಬಿಡಿಯಾಗಿ ನುಡಿವ ಉಕ್ಕಿನ ತಂತಿಗಳಿಂದ ಧ್ವನಿಯ ಸೊಬಗು ಮೂಡುವದಿಲ್ಲ. ಆದರೆ ಸಂಯಮಿತವಾದ ಸರಿಯಾದ ಹಿಡಿತಕ್ಕೆ ಮಿಡಿತಕ್ಕೆ ಒಳಗಾದ ತಂಬೂರಿಯ ಅವೇ ತಂತಿಗಳಿಂದ ಗಾನ ಮಾಧುರ್ಯವು ಹೊರಟು ಮನವನ್ನು ಮುದಗೊಳಿಸುವದು. ಅದರಂತೆ ಮಾನವನ ಇಂದ್ರಿಯಸಂಯಮದಲ್ಲಿ ಜೀವನದ ಮಾಧುರ್ಯವು ಹೊರಹೊಮ್ಮುವದು; ಮಾತ್ರವಲ್ಲ, ಅದನ್ನು ಮಾಧುರ್ಯಗೊಳಿಸುವದು. ಇಂದ್ರಿಯನಿಗ್ರಹದಿಂದ ವೈಯಕ್ತಿಕ ಉನ್ನತಿಯೂ ಅದರಂತೆ ಸಮಾಜದ ಉನ್ನತಿಯೂ ಆ ಮುಖದಿಂದ ರಾಷ್ಟ್ರದ ಉನ್ನತಿಯೂ ಉಂಟಾಗುವದು; ಶಕ್ತಿಯ ಕೇಂದ್ರೀಕರಣವೂ ದೊರೆಕೊಳ್ಳುವದು. ಕೇಂದ್ರೀಕೃತ ಶಕ್ತಿಯಿಂದ ಸಂಪದಭಿವೃದ್ಧಿಯೂ ಸಮನಿಸುವದು. ಇಂದ್ರಿಯನಿಗ್ರಹವಿಲ್ಲದೆ ವಿಲಾಸವೈಭವಗಳಿಗೆ ಮಾರುವೋದ ಫ್ರಾನ್ಸದ ಸತ್ವವನ್ನು ಸೂರೆಗೊಳ್ಳಲು ಕಳೆದ ಮಹಾಯುದ್ಧದಲ್ಲಿ ಹಿಟ್ಲರನಿಗೆ ಎಷ್ಟು ಸಮಯಬೇಕಾಯಿತು ? ಇಂದ್ರಿಯ ನಿಗ್ರಹವಿಲ್ಲದೆ ನೀತಿಗೆಟ್ಟ ನಡೆಯಿಂದ ಸಿಗುವ ಕಹಿಫಲವಿದು. ನೀತಿಯೇ ಈ ಇಂದ್ರಿಯನಿಗ್ರಹಕ್ಕೆ ಸಾಧನವಾಗಿರುವದು.

ಇಂದ್ರಿಯಂಗಳ ಸಂಯಮನವನ್ನು ಸಾಧಿಸುವದಕ್ಕೆ, ನೀತಿ ಬೆರೆತ ನಡೆನುಡಿಗಳ ಮೇಳವನ್ನು ಸಂಪಾದಿಸುವದಕ್ಕೆ, ಸ್ವಾಂತದಲ್ಲಿ ಜರುಗುವ ಏರಿಳಿತಗಳನ್ನು ಲಕ್ಷಿಸಬೇಕಾಗುವದು. ತನ್ನಲ್ಲಿ ತೋರುವ ಈ ಸ್ವಗತಭೇದವನ್ನು ಮಾನವನು ನಿವಾರಿಸಿಕೊಳ್ಳಬೇಕು. ಸ್ವಗತಭೇದವನ್ನು ತೊಲಗಿಸಿಕೊಂಡು ಸಚ್ಚಾರಿತ್ರನು ಶೀಲವಂತನೆನಿಸುವನು. ಆತನು ಕಾರ್ಯದ ಗೆಲುವಿಗಾಗಿ ಜನತೆಯ ಒಲುವೆಗಾಗಲಿ ಕೈಯೊಡ್ಡನು; ಕೋಪತಾಪಗಳಿಗೆ ಗುರಿಯಾಗದೆ, ಗುರಿಯನ್ನು ಸಾಧಿಸುತ್ತಿರುವನು; ಕೇವಲ ಅದೃಷ್ಟ ಶಕ್ತಿಯಲ್ಲಿ ನಂಬುಗೆ ತಾಳದೆ ಪ್ರಗಲ್ಭವಿಚಾರಶಕ್ತಿಯಲ್ಲಿ, ಶೀಘ್ರ ಮನನಶಕ್ತಿಯಲ್ಲಿ ಕಾರ್ಯಕಾರಣ ಭಾವವನ್ನು ಶೋಧಿಸುತ್ತಿರುವನು.

ಅಗ್ನಿ ಸ್ತಂಭದ ರಕ್ಷೆಯಿದ್ದು ಮನೆ ಬೆಂದಿತ್ತಯ್ಯ
ಬಲಮುರಿ ಶಂಖವಿದ್ದು ಪದ ಹೋಯಿತ್ತಯ್ಯ
ಏಕಮುಖದ ರುದ್ರಾಕ್ಷಿಯಿದ್ದು ವಿಘ್ನವಾಯಿತ್ತಯ್ಯ
ಇವೆಲ್ಲ ಸಾಧಿಸಹೋದರೆ
ಏನೂ ಸಾಧಿಸದಂತಾಯಿತಯ್ಯ ಗುಹೇಶ್ವರ.

ಎಂಬ ಮಾತುಗಳ ಹದನವನರಿತು ಹೊರಗಿನ ಶಕ್ತಿಗೆ ನೊರೆ ಹೊಗದೆ ಶಾಂತ ರೀತಿಯ ಹೋರಾಟ ಸಾಗಿಸಿ ಮತಿನೈರ್ಮಲ್ಯವನ್ನು ಹೊಂದುವನು; ಅಂತಃಶಕ್ತಿಯನ್ನು ಸಂಪಾದಿಸುವನು.

ಸ್ವಗತಭೇದ ನಿರಸನಗೊಳಿಸಿದ ಬಳಿಕ ಪರಿಹರಿಸಿಕೊಳ್ಳಬೇಕಾದುದು ಸ್ವಜಾತಿಭೇದವು. ಮಾನವ ಪ್ರಾಣಿಯೆಲ್ಲ ಒಂದು ಎಂಬುದು ನಿರ್ಮಲ ಮತಿಗೆ ಹೊಳೆವುದೇನೋ ನಿಜ. ಆದರೆ ಇದು ಕೃತಿಗಿಳಿಯುವದು ಸುಲಭ ವಲ್ಲ. ಮಾನವರೆಲ್ಲ ಒಂದು ಎಂದು ನಾವೀಗ ಹೇಳುವ ಮಾತು ಕೇವಲ ಛಾಯೆ. ನಿರ್ಮಲಮತಿಗೂ ತೋರಿಕೆಗೂ ಅಜಗಜಭೇದವುಂಟು. ರಾಷ್ಟ್ರ ಸಂಘದ ಉದ್ದೇಶದಲ್ಲಿ ದೊಡ್ಡ ದೊಡ್ಡ ಮಾತುಗಳನ್ನು ಸೇರಿಸಿ ಮಾನವ ಕುಲದ ಹಿತವನ್ನು ಸಾಧಿಸುವೆವೆಂದು ಹೇಳಿಕೊಳ್ಳುವದು ಬರಿಯ ಜಂಭದ ಮಾತು. ಆದರ ಕೃತಿಯಿಂದ ರಾಷ್ಟ್ರಸಂಘದ ವರ್ಣದ್ವೇಷವನ್ನು, ಸ್ವಜಾತಿ ಭೇದವನ್ನು ದಿಟವಾಗಿ ಪುಟವಾಗಿ ಕಾಣಬಹುದು. ಬಿಳಿಯರು ಕರಿಯರು ಪಡುವಣದವರು ಮೂಡಣದವರು ಎಂಬ ಭೇದಭಾವವು ನಮ್ಮ ನಾಡಿನ ಜಾತಿಭೇದಭಾವದ ವಿಸ್ತೃತ ಸ್ವರೂಪವೆಂದು ಹೇಳಬೇಕು. ಮಾನವ ಮಾನವರಲ್ಲಿ ಭೇದವನ್ನಳಿದು ಐಕ್ಯವನ್ನು ಸಾಧಿಸುವ ಯೋಗವೂ ಬೇಕು. ಸ್ವಗತಭೇದವಳಿಸಿಕೊಂಡ ವಿಭೂತಿಗಳಿಂದ ಸ್ವಜಾತಿಭೇದನಿರಸನಗೊಳಿಸುವ ಸಾಹಸವನ್ನು ಕೈಕೊಳ್ಳಲು ಸಾಧ್ಯವಾಗುವದು. ಅವರಿಗೆ ಮಾನವ ಕುಟುಂಬದ ನಿರ್ಮಾಣಕಾರ್ಯವು ನಿಲುಕುವದು.

ಈ ಸ್ವಜಾತಿಭೇದದ ಎರಡನೆಯ ಮೆಟ್ಟಲಿನಲ್ಲಿ ಮಾನವ ಕುಟುಂಬದ ನಿರ್ಮಾಣವನ್ನು ಸಾಧಿಸಿದರೆ ಮೂರನೆಯ ಮೆಟ್ಟಲಿನಲ್ಲಿ ವಿಶ್ವಕುಟುಂಬದ ನಿರ್ಮಿತಿಗೆ ಎಡೆಯುಂಟು. ತನ್ನಂತೆಯೇ ಜೀವಿಸಿಕೊಂಡಿರುವ ಇನ್ನಿತರ

ಪ್ರಾಣಿಗಳ ಬಾಳುವೆಯನ್ನು ಗೌರವಿಸಿ ಅವೆಲ್ಲ ತನ್ನ ಬಳಗವೆಂದು ತಿಳಿಯುವ
ಅವಸ್ಥೆಯೊಂದುಂಟು. ಅಲ್ಲಿ ಎಲ್ಲ ಪ್ರಾಣಿಗಳಲ್ಲಿ ಪರಮಾತ್ಮನನ್ನೇ ಕಾಣ
ಲಾಗುವದು. 'ಎಲ್ಲರೊಳು ನೀನೆ ಇರುವೆ, ಎಲ್ಲವ ನೀ ವ್ಯಾಪಿಸಿರುವೆ' ಎಂಬ
ಸರ್ವಾತ್ಮಭಾವವು ಈ ಮೆಟ್ಟಿಲಿನಲ್ಲಿ ಗಟ್ಟಿಗೊಳ್ಳುವದು. ಅನ್ಯಜಾತಿ
ಎಂಬ ಭೇದಬುದ್ಧಿಗೆ ಅವಕಾಶವಿಲ್ಲದಂತೆ ನಡೆಯುವ ಮಾನವ ಕುಲದ
ವ್ಯವಹಾರವನ್ನು ನೆನೆಯಬೇಕಿಲ್ಲಿ. 'ಅದ್ವೈತ ತಾನಾದಲ್ಲಿ ಯುದ್ಧವಿನ್ನಾ
ರೊಡನೆ ? ' ನಿಜಕ್ಕೂ ಈ ಅನ್ಯಜಾತಿಭೇದವಳಿದಲ್ಲಿ 'ಆತ್ಮವತ್ ಸರ್ವ
ಭೂತಾನಿ' ಎಂಬ ಉಕ್ತಿಯು ಸತ್ಯವಾಗಿ ಪರಿಣಮಿಸುವದು.

ವಿಶ್ವಕುಟುಂಬದ ಆದರ್ಶವನ್ನಿಟ್ಟುಕೊಂಡವರು ಸ್ವಗತಭೇದ,
ಸ್ವಜಾತಿಭೇದ, ಅನ್ಯಜಾತಿಭೇದ ಎಂಬ ಈ ಮೂರು ದೋಷಗಳನ್ನು
ನಿವಾರಿಸಿಕೊಳ್ಳಬೇಕು ಇದು ಬಹು ದೊಡ್ಡ ಆದರ್ಶ; ಅತಿ ಉಚ್ಚವಾದ
ಧ್ಯೇಯ; ಆದರೆ ಅಸಾಧ್ಯವಾದುದಲ್ಲ. ಇದನ್ನು ಸಾಧಿಸಿದವರು ಕನ್ನಡ
ನಾಡಿನಲ್ಲಿ ಅನೇಕರಾದರು, ಭಾರತದಲ್ಲಿಯೂ ಅನೇಕರಿದ್ದರು, ಬೇರೆ
ಬೇರೆ ದೇಶಗಳಲ್ಲಿಯೂ ಅನೇಕರುದಿಸಿದರು. ಆದುದರಿಂದ ಆಚರಣೆಗಿಳಿಸಲು
ಅಶಕ್ಯವಾದ ಆದರ್ಶವೆಂದು ಇದನ್ನು ಅಲ್ಲಗಳೆಯಲು ಬರುವಂತಿಲ್ಲ. ಆದರೆ
ಇದನ್ನು ಸಾಧಿಸುವದು ಸಾಮಾನ್ಯರಿಗೆ ಶಕ್ಯವಿಲ್ಲವೆಂದು ಸೂಚಿಸಬಹುದು.
ಸರಿ, ಮೂರನ್ನೂ ಸಾಧಿಸುವದಾಗದಿದ್ದರೆ ಮೊದಲಿನದನ್ನಾದರೂ ಸಾಧಿಸಲು
ಹವಣಿಸೋಣ; ಕೊನೆಯ ಸೀಮೆಯನ್ನು ಮುಟ್ಟದಿದ್ದರೂ ನೀತಿನಿರ್ಭರ
ವಾಗಿ ಮೊದಲು ನಡೆಯೋಣ; ಮಾತಿನಂತೆ ಮನವಿರಿಸಿಕೊಳ್ಳೋಣ;
ಮನಸ್ಸಿನಲ್ಲಿದ್ದಂತೆ ಮಾತನಾಡಕಲಿಯೋಣ; ನಡೆನುಡಿಗಳ ಮೇಳವನ್ನು
ಗಳಿಸಿಕೊಳ್ಳೋಣ; ವ್ಯಕ್ತಿಗಳ ಜೀವನದಲ್ಲಿ ಅಂತರಂಗಶುದ್ಧಿಯನ್ನು ಸಂಪಾದಿ
ಸೋಣ. ಆದರಿಂದ ಸ್ವಜಾತಿಭೇದ ಅನ್ಯಜಾತಿಭೇದಗಳು ಸುಲಭವಾಗಿ
ಅಳಿಯುವವೆಂಬ ನಿರೀಕ್ಷಣೆಯನ್ನು ಮಾಡೋಣ; ಈ ತೆರನಾದ ಬಾಳು
ವೆಯಲ್ಲಿ ನಂಬಿಗೆಯನ್ನು ತಾಳೋಣ.

ಮಾನವನು ಸಮಾಜಜೀವಿಯಷ್ಟೆ ! ವೈಯಕ್ತಿಕವಾಗಿ ಆಚರಣೆಗೆ
ನಿಲುಕಿಸಲು ಅವಕಾಶವಿರುವ ವ್ಯಕ್ತಿಯ ಈ ಧರ್ಮತತ್ವಗಳನ್ನು ಸಾಮೂ

ಹಿಕವಾಗಿ ಅರಗಿಸಿಕೊಳ್ಳಲು ಅನುವುಂಟು. ಮಾತು ಕೃತಿಗಳ ಸಾಮರಸ್ಯ ವುಂಟಾಗದೆ ಸ್ವಗತಭೇದವು ಅಳಿಯದೆ ಹೋದುದರಿಂದ ಸ್ವಜಾತಿಭೇದವೂ ಬೆಳೆಯಿತು. ಅನ್ಯಜಾತಿ ಭೇದವೂ ದಾಂಗುಡಿಗೊಂಡಿತು. ಈ ಪೂರ್ವದಲ್ಲಿ ನಡೆದ ಅಲ್ಲಲ್ಲಿಯ ಮತಮತಾಂತರದ ಗಲಾಟೆಯು ಸ್ವಜಾತಿಭೇದ-ಬುದ್ಧಿಯಿಂದುಂಟಾದುದು. ರಕ್ತಪಾತ, ಕೊಲೆ, ಕೊಳ್ಳೆ, ಕಳ್ಳಸೇಟಿ, ಸುಲಿಗೆ ಇತ್ಯಾದಿ ಭೀಕರ ಕೃತಿಗಳಿಗೂ ಈ ಸ್ವಜಾತಿಭೇದ ಬುದ್ಧಿಯೇ ಕಾರಣವು. ಜಾತಿಯಮಾತ್ಸರ್ಯದಿಂದ ಈಚೆಗೆ ಹಿಂದುಸ್ಥಾನ-ಪಾಕಿಸ್ತಾನಗಳು ವೈದಾಳಿ ಅದರಿಂದ ಉಂಟಾದ ಅನಾಹುತಿಯೂ ಸ್ವಜಾತಿಭೇದಬುದ್ಧಿಯಿಂದಲೇ ! ಮತಮತದ ಗಲಾಟೆಯು ತಕ್ಕುದಲ್ಲವೆಂದು ರಾಜಕೀಯವನ್ನು ಬೆನ್ನು ಹತ್ತಿದ ನಮ್ಮವರು ಪಾಶ್ಚಾತ್ಯರ ಅಂಧಾನುಕರಣವನ್ನು ಮಾಡಿ ನೈತಿಕ ಮುಗ್ಗಟ್ಟಿನಲ್ಲಿ ಸಿಕ್ಕುಬಿಟ್ಟದ್ದಾರೆ. ರಾಜಕಾರಣವನ್ನು ಆಶ್ರಯಿಸಿ ಪಾಶ್ಚಾತ್ಯರು ಅನೀತಿಯ ಶಿಖರಕ್ಕೆ ಮುಟ್ಟಿದರು; ಸ್ವಾರ್ಥಲೋಲುಪರಾದರು. ನೈತಿಕ ಮುಗ್ಗಟ್ಟು ಪ್ರಚಾರದ ಕಹಿಫಲವೆಂಬುದನ್ನರಿಯದೆ ಸಾಗಿರುವರು. ಬಸವಣ್ಣನ ಮಾತಿನಂತೆ ಮತಾಭಿಮಾನವೆಂಬ ಆನೆಯನ್ನೇರಿಕೊಂಡು ಹೋದವರೂ ರಾಜಕಾರಣವೆಂಬ ಕುದುರೆಯನ್ನು ಹತ್ತಿಕೊಂಡು ಹೋದವರೂ ರಾಗದ್ವೇಷವೆಂಬ ಕುಂಕುಮ ಕಸ್ತೂರಿಯನ್ನು ಲೇಪಿಸಿಕೊಂಡವರೂ ಕೆಟ್ಟ ಕೇಡನ್ನೆಳೆಯುವದು ಸುಗಮವಲ್ಲ. ಅದಕ್ಕಾಗಿ ಅಂಧಾನುಕರಣದ ಕೇಡಿಗೆ ಒಳಗಾಗದಿರೋಣ. ಒಂದು ಕಾಲಕ್ಕೆ ರಾಜಕೀಯ ಹೋರಾಟದಿಂದಲೆ ಆಂಗ್ಲರು ಭಾರತವನ್ನು ಬಿಟ್ಟು ಹೊರಗೆ ಹೋಗುವಂತೆ ಮಾಡಿದ್ದು ನಿಜ. ಅಂದು ನಮ್ಮಲ್ಲಿ ಬೆಳಗುತ್ತಿದ್ದ ತ್ಯಾಗಬುದ್ಧಿ ನಿರ್ಮಲಮತಿ ನಿಸ್ವಾರ್ಥಭಾವ ಸ್ವಗತಭೇದ ನಿರಸನಗಳು ಇಂದು ನಮಗೆ ಇವೆಯೇ ? ಈಗ ಇವು ಅಡಗಿ ಎಲ್ಲಿ ನೋಡಿದಲ್ಲಿ ವಿಷಮಯ ಪರಿಸ್ಥಿತಿಯೇ ಕಂಡು ಬರುತ್ತಿದೆ. ಸಂಪಾದಿಸಿದ ಸ್ವಾತಂತ್ರ್ಯವು ದಕ್ಕುವದೇ ಎಂಬ ಸಂಹೇಹವಾಗುತ್ತಿದೆ. ಸ್ವರಾಜ್ಯ ಸಂಪಾದನೆಯ ೯೦ ವರುಷಗಳ ತ್ಯಾಗ ಸೇವೆ ಉತ್ಸಾಹಗಳು ಈಗಲೂಬೇಕು. ಗಳಿಸಿದ ಸ್ವಾತಂತ್ರ್ಯವನ್ನುಳಿಸಿಕೊಳ್ಳಬೇಕಾದರೆ ಆಗಿನಕಿಂತಲೂ ಈಗ ಹೆಚ್ಚು ಪ್ರಭಾವಶಾಲಿಯಾಗಿ ಅವು ಮಿರುಗಬೇಕು. ಸ್ವಗತಭೇದ ಸ್ವಜಾತಿ

ಭೇದ ಅನ್ಯಜಾತಿಭೇದಗಳನ್ನು ನಿವಾರಿಸಿಕೊಳ್ಳುತ್ತ ಬಂದ ನಮ್ಮ ಸಾಂ
ನೆಯು ನಮ್ಮ ರಕ್ತಗತವಾಗಿದೆ. ಅನೀತಿಮಾರ್ಗದ ಅಂಧಾನುಕರಣದಿ
ಇಂದು ಅದು ಕೆಡದಿರಲಿ; ನಮ್ಮ ವೈಶಿಷ್ಟ್ಯವನ್ನು ಮಸುಳಿಸದಿರಲಿ; ಮಾ
ನಂತೆ ಮನವಿಲ್ಲದ ಜಾತಿಡೊಂಬತನವು ನಮ್ಮನ್ನಾವರಿಸದಿರಲಿ; ಮಾನವ
ಕುಲದ ಉದ್ಧಾರ ಮತ್ತು ವಿಶ್ವ ಕುಟುಂಬದ ರಚನೆಯ ಆದರ್ಶಗಳ ನಮ್ಮ
ಆಳವಡಿಕೆಯಲ್ಲಿ ನಮ್ಮೆಲ್ಲರಿಗೆ ಪೂಜ್ಯರಾದ ನಮ್ಮ ಪೂರ್ವಜರ ಧೈರ್ಯ
ಸಾಹಸ ತ್ಯಾಗ ಸೇವೆಗಳು ನಮ್ಮಲ್ಲಿ ಉತ್ಸಾಹವನ್ನು ಬೀರಲಿ; ನಮ್ಮ
ಆಚರಣೆಯ ಸೌಲಭ್ಯದಿಂದ ಈ ಹೊಸ ಕಾಲದಲ್ಲಿ ವ್ಯಕ್ತಿಯ ಈ ಧರ್ಮವು
ಸಾರ್ವತ್ರಿಕವಾಗಲಿ.

---

# ಮಾನವಧರ್ಮ

ಮಾನವಧರ್ಮವು ಮಾನವ ಮಾತ್ರರಿಗೆಲ್ಲ ಅನ್ವಯಿಸುವುದು. ಮಾನವ ಜನಾಂಗವು ತಲೆದೋರಿ ಅದರಲ್ಲಿ ಬುದ್ಧಿಭಾವನೆಗಳು ಬೆಳೆಯುತ್ತ ಬಂದಂತೆ ಈ ಮಾನವ ಧರ್ಮವು ವಿಕಾಸಪಡೆಯುತ್ತ ಸಾಗಿರುವುದು. ಇದು ದೇಶ ಕಾಲ ಪರಿಸ್ಥಿತಿಗಳಿಗಾಗಿ ಸಂಬಂಧಪಟ್ಟುದಲ್ಲ; ಒಬ್ಬನಿಂದ ಬೆಳಕಿಗೆ ಬಂದುದೂ ಅಲ್ಲ. ಹಾಗಾದರೆ ಪ್ರಪಂಚದಲ್ಲಿ ಈಗಿದ್ದ ಧರ್ಮಗಳ ಗತಿಯೇನು? ಅವು ಮಾನವ ಮಾತ್ರರಿಗಾಗಿ ನಿರ್ಮಿತವಾಗಿಲ್ಲವೇ ? ಆಯಾ ಧರ್ಮ ಸಂಸ್ಥಾಪಕರ ಉದ್ದೇಶವಾದರೂ ಯಾವುದು—ಎಂಬಿವೇ ಮೊದಲಾದ ಪ್ರಶ್ನೆಗಳಿಗೆ ಸಮಾಧಾನ ಕಾಣಬೇಕು. ಪ್ರತಿಯೊಂದು ಧರ್ಮವು ದೇಶ ಕಾಲ ಪರಿಸ್ಥಿತಿಗನುಗುಣವಾಗಿ ಸಂಸ್ಥಾಪನೆಗೆ ಅವಕಾಶವನ್ನು ಕಲ್ಪಿಸಿಕೊಟ್ಟವೆಂಬುದೂ ಐತಿಹಾಸಿಕ ಸತ್ಯವು. ಆ ಸಂಸ್ಥಾಪಕರ ಉದ್ದೇಶವು ಉದಾತ್ತವಾಗಿತ್ತು. ಜನಸಾಮಾನ್ಯರಿಗಾಗಿ ಕಲ್ಯಾಣಬುದ್ಧಿಯು ಅವರಲ್ಲಿ ಒಡೆದು ಕಾಣುತ್ತಿತ್ತು. ಆದರೆ ಜನತೆಗಾಗಿ ಅವರು ಕಂಡುಹಿಡಿದ ಆರಾಧ್ಯದೇವತೆಗಳ ಕಲ್ಪನೆಯಿಂದ ಕಾಲವು ಗತಿಸಿದಂತೆ ಆ ಸಂಸ್ಥಾಪಕರ ಕಲ್ಯಾಣಬುದ್ಧಿಯ ಉದಾತ್ತ ಭಾವನೆಗಳ ಅರಿವಿಲ್ಲದೆ ವ್ಯವಹರಿಸಿದ ಜನಜಂಗುಳಿಯಲ್ಲಿ ಜಾತೀಯತೆಯು ಒಳಸೇರಿ ಅಪರಿಮಿತವಾದ ಅನಾಹುತವು ತಲೆದೋರಿತೆಂಬುದನ್ನು ಮರೆಯುವಂತಿಲ್ಲ. ಆಯಾ ಸಂಸ್ಥಾಪಕರು ಪ್ರಚಾರಗೊಳಿಸಿದ ಧಾರ್ಮಿಕ ಭಾವನೆಯಲ್ಲಿ ಹುದುಗಿದ್ದ ದೇವತ್ವದ ಕಲ್ಪನೆಯಲ್ಲಿ ಮೇಲುಕೀಳುಗಳ ದೃಷ್ಟಿಯು ಮೊಳೆತು, ಸಂಕುಚಿತ ಸ್ವರೂಪವೇ ಜಾತೀಯತೆಗೆ ಕಾರಣವಾಗಿ, ಕಾಲಾಂತರದಲ್ಲಿ ಮತ ಪಂಗಡಗಳ ಮಾತು ಬೆಳೆಯಿತು; ಜಾತಿ-ಜಾತಿಗಳ ಜಗಳಗಳೂ ಅಸೂಯೆ-ಮಾತ್ಸರ್ಯಗಳೂ ಅಳತೆಗೆಟ್ಟವು. ಸದ್ಯದಲ್ಲಿ ಉದಾತ್ತವೆನಿಸುವ ಯಾವ ಧರ್ಮವನ್ನು ತೆಗೆದುಕೊಂಡರೂ ಅದು ಇಂತಹ ಮತ ಪಂಥ ಪಂಗಡಗಳ ಸಂಕುಚಿತ ದೃಷ್ಟಿಯ ಅಂಟುರೋಗದಿಂದ ಬಿಡುಗಡೆಯನ್ನು ಪಡೆದಿರುವುದಿಲ್ಲ. ಈ ಮತ ದೃಷ್ಟಿಯಿಂದ ದೋಷಯುಕ್ತವಾಗಿ ಮಸುಳಿಸಿದ ಮಾನವ ಬುದ್ಧಿಯು ತಿಳಿಯಿಂದ ಬೆಳಗಿ ಅವನಲ್ಲಿ ನಿರ್ಮಲತೆಯು ಮೊಳೆತು ಅದರಿಂದ

ಹೊರಹೊಮ್ಮಿದ ಮಾನವ ಸಂಸ್ಕೃತಿಯು ಬಳ್ಳಿಯಾಗಿ ಮಡಲಿರಿದಾಗ ಧರ್ಮದ ಸತ್ಯಸ್ವರೂಪವು ವ್ಯಕ್ತವಾಗುವುದು. ಇಂತಹ ಧರ್ಮವು ಮಾನವ ಮಾತ್ರರಿಗೆಲ್ಲ ಸಂಬಂಧಪಡುವುದರಿಂದ ಇದು ಮಾನವಧರ್ಮವೆನಿಸಿಕೊಳ್ಳುವುದು.

ಧರ್ಮದ ವಿವೇಚನೆಯನ್ನು ಮಾಡುವಾಗ ಅದರಲ್ಲಿಯ ಮತದೃಷ್ಟಿ ಮತ್ತು ಮತಿದೃಷ್ಟಿ ಇವುಗಳಿಂದ ಅದರ ಪರಿಶೀಲನೆ ಮಾಡಬಹುದು. ಮತ ದೃಷ್ಟಿಯಿಂದ ಬೆರೆತು ರೂಢವಾಗಿರುವ ಧರ್ಮಗಳೆಲ್ಲ ಸಾಮಾನ್ಯವಾಗಿ ಪೌರಾಣಿಕ ಧರ್ಮಗಳಲ್ಲಿಯೂ, ನಿರ್ಮಲವಾದ ಮತಿ-ದೃಷ್ಟಿಯಿಂದ ಬಲಿತು ರೂಪುಗೊಳ್ಳುವ ಧರ್ಮವೆಲ್ಲ ಪ್ರಾಗತಿಕ ಧರ್ಮವಾಗಿಯೂ ಪರಿಣಮಿಸುವವು. ಮತ-ದೃಷ್ಟಿಗಾಗಿ ಪೌರಾಣಿಕ ಧರ್ಮದಲ್ಲಿ ವಿವಿಧತೆಯುಂಟು. ಮತಿ-ದೃಷ್ಟಿಗಾಗಿ ಪ್ರಾಗತಿಕ ಧರ್ಮದಲ್ಲಿ ವೈವಿಧ್ಯವಿಲ್ಲ. ಮಾನವ ಜನಾಂಗವೊಂದು ಅಖಂಡವಾಗಿರುವುದೆಂಬ ಭಾವನೆಯಿರುವುದರಿಂದ ಅದು ಅನುಸರಿಸಬೇಕಾದ ಧರ್ಮದಲ್ಲಿ ಕೂಡ ವಿವಿಧತೆಗೆ ಅವಕಾಶವುಂಟಾಗದು. ಪೌರಾಣಿಕ ಧರ್ಮದಲ್ಲಿ ಜಾತೀಯತೆಯ ಕುರುಡು ನಂಬುಗೆ, ಅರ್ಥವಾಗದ ಅದ್ಭುತಗಳ ಅಚ್ಚರಿ, ಶುಷ್ಕವಾದ ಆಚಾರ ಪದ್ಧತಿಗಳ ಪರಂಪರೆ, ಇದ್ದುದೆಲ್ಲ ಸರಿಯಾಗಿದೆ ಸಾಧುವಾಗಿದೆ ಎಂಬ ಮೂಢ ವಿಚಾರ, ಧರ್ಮಬಂಧುಗಳಲ್ಲದವರಿಗೆ ತನ್ನಲ್ಲಿ ಇಂಬೇಯಲರಿಯದ ಅಂಧತೆ, ಇಂಬಿತ್ತರೂ ಹುಟ್ಟನಿಂದ ಬಂದವರಲ್ಲವೆಂಬ ಅಧೃತೆ; ಹೊಂದುಗೆಯಿಂದ ಒಂದಾದವರಲ್ಲಿ ಮೇಲುಕೀಳುಗಳನ್ನು ಕಾಣುವ ಸಂಕುಚಿತ ವೃತ್ತಿ—ಇವೆಲ್ಲ ಮನೆಮಾಡಿಕೊಂಡಿರುವುವು. ಇದರಿಂದಾಗಿ ಇಂಥ ಧರ್ಮಾನುಯಾಯಿಗಳಿಗೆ ಪ್ರಗತಿಪರ ವಿಚಾರಗಳೇ ನಿಲುಕವು. ಪ್ರಾಗತಿಕ ಧರ್ಮದ ಕಾರ್ಯವು ಮಾತ್ರ ಇದರಿಂದ ಭಿನ್ನವಾಗಿರುವದು. ಅಲ್ಲಿ ಇದ್ದ ಸಂಗತಿಗಳ ಯಥಾರ್ಥಜ್ಞಾನವೇ ಮತಿದೃಷ್ಟಿಗೆ ಲಕ್ಷ್ಯವಾಗಿರುವುದರಿಂದ ಇದ್ದುದನ್ನು ಇಲ್ಲವೆಂದು ಹೇಳುವ ಇಲ್ಲವೆ ಇಲ್ಲದುದನ್ನು ಇದೆ ಎಂದು ತಿಳಿಸುವ ಮಾತಿಲ್ಲ. ಅನಪೇಕ್ಷಣ ಪ್ರತ್ಯವೇಕ್ಷಣಗಳಿಗೆ ಪ್ರಾಗತಿಕ ಧರ್ಮದಲ್ಲಿ ಎಳ್ಳನಿತು ಇಂಬಿಲ್ಲ. ಸತ್ಯಾನ್ವೇಷಣವೂ ಸಮ್ಯಕ್‌ಜ್ಞಾನವೂ ಪ್ರಾಗತಿಕ ಧರ್ಮದೃಷ್ಟಿಯಲ್ಲಿ ಪ್ರಾಮುಖ್ಯವಾದ ವಿಷಯಗಳಾಗಿರುವುದರಿಂದ ಅಲ್ಲಿ ಭಿನ್ನ ದೃಷ್ಟಿಯು ಇಲ್ಲ; ಮೇಲು ಕೀಳಿನ ಮಾತಿಲ್ಲ; ದ್ವೇಷಾಸೂಯೆಗಳಿಗೆ ಅವಕಾಶವಿಲ್ಲ. ಸತ್ಯ, ಪ್ರೇಮ, ದಯೆ, ಸಮತೆ ಮೊದಲಾದ ಕಲ್ಯಾಣ ಗುಣಗಳ ಆಗರವಾಗಿ

ಪ್ರಾಗತಿಕ ಧರ್ಮವು ಕಂಗೊಳಿಸುವುದು. ಇಂಥ ಪ್ರಾಗತಿಕ ಧರ್ಮವೇ ಮಾನವ ಧರ್ಮವು.

ಈ ಮಾನವ ಧರ್ಮದ ತತ್ವಗಳನ್ನು ಅರಿತುಕೊಳ್ಳಲು ಕಷ್ಟಪಡಬೇಕಾದುದಿಲ್ಲ. ಸುತ್ತುಮುತ್ತಿನ ಸಮೀಪದ ವಸ್ತು ಒಡವೆಗಳಲ್ಲಿ ಕೇವಲ ತಮ್ಮ ತಮ್ಮ ಭೂಮಿ-ಸೀಮೆ ಬಂಧು-ಬಳಗ ಹೆಂಡಿರು-ಮಕ್ಕಳು ಮಾತ್ರವೇ ಸಮಾವೇಶವಾಗುವುದಿಲ್ಲ. ಇವಕ್ಕಿಂತ ಸಮೀಪದ ಕೆಲವು ವಸ್ತುಗಳೂ ಉಂಟು. ತನಗೆ ತನ್ನ ದೇಹವೇ ಶ್ರೇಷ್ಠವಾದುದು. "ತನ್ನಂಗಕ್ಕಿಂತ ಹಿತವಾವುದೀ ಜಗದಿ ?" ಈ ದೇಹಕ್ಕೆ ಸಂಬಂಧಪಟ್ಟ ಧರ್ಮಪರಿಪಾಲನೆಯೂ ಉಂಟು. ಅದುವೇ ದೇಹಧರ್ಮ. ಅದನ್ನರಿತುಕೊಂಡು ಅಂತು ಅನುವರ್ತನೆಯನ್ನಿರಿಸಿಕೊಳ್ಳುವುದು ಮಾನವನ ಆದ್ಯ ಕರ್ತವ್ಯವಾಗಿರುವುದು. ಆದರೆ ಪೌರಾಣಿಕ ಧರ್ಮವು ವಿಶೇಷವಾಗಿ ಭಾರತದಲ್ಲಿಯ ಪೌರಾಣಿಕ ಧರ್ಮವು ಹೇಳುತ್ತಿರುವುದೇನನ್ನು ? "ಹಿಗ್ಗುವಿಯೇಕೋ ? ಈ ದೇಹಕ್ಕೆ" ಎಂದು !

ಮಾನವ ದೇಹವು ನಶ್ವರವಾದುದು; ಅದಕ್ಕಾಗಿ ಇನಿತೊಂದು ಹೆಮ್ಮೆಬೇಡ ಎಂದು ಹೇಳಿರುವುದೇನೋ ನಿಜವು. ಆದರೆ ನಶ್ವರವೆಂದು ಅದನ್ನು ನಾಶಗೊಳಿಸುವುದೇ ? ಜೀವಸಂಶೋಧನ ಸ್ಥಳದಲ್ಲಿ ಜೀವನಿಗೆ ಅನಾಸಕ್ತಿಯೋಗವುಂಟಾಗಲೂ ಹೇಳುವ ಮಾತುಗಳಾಗವು ಇವು. "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂದು ಹೇಳಿರುವರಲ್ಲ! "ಕೂಡಲಸಂಗನ ಒಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು" ಎಂದೂ ಹಾಡಿರುವರಲ್ಲ! ಭೌತಿಕ ದೇಹದ ಮಹತಿಯನ್ನರಿತುಕೊಳ್ಳದೆ ಧರ್ಮವಂತರೆನ್ನಿಸಿಕೊಳ್ಳುವವರು ಧರ್ಮವನ್ನು ಅದು ಎಂತು ಆಚರಿಸಬಲ್ಲರು ? ಧೃಡಕಾಯರಾಗದವರು ಧರ್ಮವನ್ನು ನಡೆಯಿಸಲಾಗುವದೆ ? ಅದಕ್ಕಾಗಿ ದೇಹದ ಪಾಲನೆ ಪೋಷಣಗಳು ಅವಶ್ಯವಾಗಿ ಬೇಕು. ಅನ್ನವನ್ನು ಅಳತೆ ಮೀರಿ ತಿಂದು ತೇಗಿದರೂ ಅಷ್ಟೇ; ಅನ್ನವಿಲ್ಲದೆ ಬಳಲಿ ಬೆಂದು ಬೇಗುದಿಗೊಂಡರೂ ಅಷ್ಟೇ-ಎಂದು ಹೇಳುವದು ಶರೀರ ಧರ್ಮವನ್ನರಿತು ಹೇಳುವ ಮಾತಲ್ಲ. ಸಾವಿರಾರು ವರ್ಷಗಳಿಂದ ಹಿಂದೂಧರ್ಮವು ಹೇಳುತ್ತ ಬಂದ ವಿರತಿಭಾವದಿಂದ ಅದಾವ ಗೌರವದ ಕಾರ್ಯವಾಗಿದೆ ? ತ್ಯಾಗದ ಅತಿರೇಕವು ರಾಷ್ಟ್ರ

ವನ್ನು ಯಾವ ಮಟ್ಟಕ್ಕೆ ನಿಲುಕಿಸಿದೆ? ಅಲ್ಪಸಂತೋಷದಿಂದ ಅಳವಟ್ಟಿದ್ದ ತಿರುಪೆಯ ವೃತ್ತಿ, ಬಡತನ, ದುಃಖ, ದಾರಿದ್ರ್ಯ; ಉದಾತ್ತ ದೈವಭಾವನೆಯು ಅಂಗವಿಸಲಿಲ್ಲ. ಸತ್ತು ಸ್ವರ್ಗವನ್ನು ಕಾಣಲಿಲ್ಲ, ಇದ್ದು ಸುಖವನ್ನು ಉಣಲಿಲ್ಲ ಎಂಬಂತಾಗಿದೆ.

ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ? ಅನ್ನಕ್ಕಾಗಿ ಕಳವಳ ಕೋಲಾಹಲ! ಜಗತ್ತಿನಲ್ಲಿ ಕಾಲಕಾಲಕ್ಕೆ ಉಂಟಾದ ಕ್ರಾಂತಿಗಳ ಬುಡದಲ್ಲಿ—ಅದು ಅಮೇರಿಕೆಯ ಸ್ವಾತಂತ್ರ್ಯದ ಕ್ರಾಂತಿಯೇ ಇರಲಿ, ಫ್ರಾನ್ಸದ ಪ್ರಜಾಪ್ರಭುತ್ವದ ಕ್ರಾಂತಿಯೇ ಇರಲಿ, ಇಲ್ಲವೆ ರಷಿಯದ ಕೂಲಿಕಾರರ ಕ್ರಾಂತಿಯೇ ಇರಲಿ ಅದರ ಬುಡದಲ್ಲಿ—ಅಡಗಿದ ಗೂಢವನ್ನು ಹುಡುಕಬೇಕು. ಅದೆಲ್ಲ ಅನ್ನಕ್ಕಾಗಿ, ಅರಿವೆಗಾಗಿ. ರಾಷ್ಟ್ರದ ಆರ್ಥಿಕ ಸ್ಥಿತಿಯು ಕೆಟ್ಟು ಹೊಟ್ಟೆಗೆ ಹಿಟ್ಟು ಮೈಗೆ ಬಟ್ಟೆ ದೊರೆಯದಂಥ ಪರಿಸ್ಥಿತಿಯೊದಗಲು ಕ್ರಾಂತಿಯ ಕಹಳೆಯೂದಲೂ ಬೇಕು. ಎಲ್ಲರೂ ಮಾಡುವದು ಹೊಟ್ಟೆಗಾಗಿ: ಗೇಣು ಬಟ್ಟೆಗಾಗಿ. ಅನ್ನ ಅರಿವೆಗಳಿಗೆ ಬಡಿದಾಟವೇಳುವುದು ಸ್ವಾಭಾವಿಕವಾದುದು. ಹಸಿದ ಹೊಟ್ಟೆಗೆ ಬೇಕಾದುದು ಹಿಟ್ಟು; ಧರ್ಮವಲ್ಲ. ಅದಕ್ಕಾಗಿ ಧರ್ಮ ಮಾಡೆಂದರೆ ತಲೆ ಸಿಡಿತವೇಳುವುದನ್ನಾದರೂ ನೆನಸಿಕೊಳ್ಳಬೇಕು. ತಿಂದುಂಡು ತೇಗುವ ಅಧಿಕಾರ ನಮಗೆ; ತಿರಿದು ಎಂಜಲು ಉಣ್ಣುವ ಅಧಿಕಾರ ನಿಮಗೆ—ಎಂಬುದು ಗಂಡಸಿನ ಮಾತಲ್ಲ. ಕೇಳುವದು ಗಂಡುಗಲಿಯ ಮಾತಂತೂ ಮೊದಲೇ ಅಲ್ಲ.

೬೪ ಲೀಲೆಗಳನ್ನಾಡಿದ ಶಿವನು ಭಿಕ್ಷಾಟನ ಲೀಲೆಯನ್ನು ಆಡಿದನೆಂದು ಪೌರಾಣಿಕ ಧರ್ಮದ ಹೇಳಿಕೆ. ದೇವನೇ ಬಿಕ್ಕೆಬೇಡಿದ ಮೇಲೆ ದೇವಭಕ್ತರಾದ ನಾವು ಏಕೆ ಬೇಡಬಾರದು ಎಂಬ ಭಾವವು ಜನಾಂಗಕ್ಕೆ ಅಂಟಕೊಳ್ಳುವದೂ ಸಹಜವಾಯಿತು. ತಿರಿಯುವ ವೃತ್ತಿಯುಳ್ಳವನು ದೇವನೇ ಅಲ್ಲ. ತಿರುಕನೆಂತು ದೇವನಾಗಬಲ್ಲನು? ದೇವನೂ ಸಹ ತಿರುಕನೆಂಬುದು ತಿರುಪೆಯ ಕೆಲಸಕ್ಕೆ ಅನುಕೂಲಿಸುವಂತೆ ಮಾಡಿದ ಒಂದು ಕಲ್ಪನೆ. ಇಂಥ ಕಲ್ಪನೆಯ ಕನಸಿನಿಂದ ಕಾರ್ಯದ ನೆನಸಡಗಿ ತಿರುಕರ ಪಿಡುಗು ಇನ್ನೂ ಹೆಚ್ಚಾಯಿತು. ಅದರಂತೆ ದೇವನು ಅಲ್ಲಿಹನು, ಇಲ್ಲಿಹನು, ಅದರಲ್ಲಿ ಉಂಟು ಇದರಲ್ಲಿ ಉಂಟು—ಎಂಬುದು ಬರಿಯ ಕಲ್ಪನೆಯೇ. ಅದು

ಬರಿಯ ಭ್ರಾಂತಿಯೇ. ಅವನು ಗುಡ್ಡದಲ್ಲಿಲ್ಲ, ಗವಿಯಲ್ಲಿಲ್ಲ, ಗಡ್ಡದಲ್ಲಿಲ್ಲ, ಚಂಡಿಕೆಯಲ್ಲಿಲ್ಲ, ದಾರದಲ್ಲಿಲ್ಲ, ಕಲ್ಲಿನಲ್ಲಿಲ್ಲ, ಕಟ್ಟಿಗೆಯಲ್ಲಿಲ್ಲ, ಬೆಂಕಿಯಲ್ಲಿಲ್ಲ, ಮಣ್ಣಿನಲ್ಲಿಲ್ಲ, ಮರದಲ್ಲಿಲ್ಲ, ಸಗಣಿಯಲ್ಲಿಲ್ಲ, ಬುಟ್ಟಿಯಲ್ಲಿಲ್ಲ, ಕ್ರಾಸಿನಲ್ಲಿಲ್ಲ, ಕ್ರಿಸೆಂಟಿನಲ್ಲಿಲ್ಲ; ಇವಾವುದರಲ್ಲಿಯೂ ದೇವನಿಲ್ಲ! ಧರ್ಮವೂ ಇಲ್ಲ! ಕಲ್ಪನೆಯ ಕನಸಿನಲ್ಲಿ ದೇವನಿರದೆ ಕಾರ್ಯದ ನೆನಸಿನಲ್ಲಿ ಅವನನ್ನು ಕಾಣಬೇಕು.

ಮನುಷ್ಯನಾದವನಿಗೆ ಅವಶ್ಯವಾದ ಅನ್ನ ಅರಿವೆಗಳು ದೊರೆತ ಹೊರತು ಇನ್ನೇನೂ ಬೇಕೆನಿಸುವುದಿಲ್ಲ. ಇವು ಸಾಕಷ್ಟು ಸಿಕ್ಕಬಳಿಕ ಅವನಲ್ಲಿ ಉಚ್ಚ ವಿಚಾರಗಳ ಅಂಕುರವು ಮೂಡುವುದಿಲ್ಲವೆಂಬುದಿಲ್ಲ. ಅನ್ನ ಅರಿವೆಗಳ ಹೊರತು ಅವನಿಗೆ ಆಶ್ರಯ ಔಷಧಗಳ ಸೌಕರ್ಯವು ಬೇಕು. ಜೀವನಕ್ಕೆ ಅವಶ್ಯವಾಗಿ ಬೇಕಾಗುವ ಈ ಒಡವೆಗಳ ಅನುಕೂಲತೆಯು ಉಂಟಾದಬಳಿಕ ಅರಿವಿನ ಕಡೆಗೆ ಅವನ ದೃಷ್ಟಿಯು ಏಕೆ ಹೊರಳಲಿಕ್ಕಿಲ್ಲ ? ಹೊರಳುವದು! ಆಗ ಅನ್ನ ಅರಿವೆ ಆಶ್ರಯ ಅವುಷಧ ಅರಿವು ಇವೇ ಶಿವಪಂಚಾಯತನವಾಗುವವು ಅವನಿಗೆ. ಕಲ್ಯಾಣಬುದ್ಧಿಯಿಲ್ಲದೆ ಶಿವಪಂಚಾಯತನದಲ್ಲಿರಿಸಿದ ಪೂಜ್ಯಭಾವವು ಪೂಜೆಯಲ್ಲಿ ಪರಿಣಮಿಸದೆ ಅದು ಬರಿಯ ಪೂಜೆಯಾಗುವದು. ಕಳ್ಳಪೇಟೆಯಲ್ಲಿ ಲಕ್ಷಧನವ ಗಳಿಸಿ ನೂರು ಕೊಡುವುದು ದಾನವಲ್ಲ, ಧರ್ಮವಲ್ಲ. ಜನತೆಯೇ ದೈವವು. ಜನತೆಯ ಸೇವೆಯೇ–ದೇವ ಪೂಜೆಯೇ ಅವಶ್ಯವಾಗಿ ಬೇಕಾಗಿರುವವು. ಐದು ವಸ್ತುಗಳನ್ನು ಒದಗಿಸಿಕೊಡುವುದೇ ಶಿವಪಂಚಾಯತನ ಪೂಜೆಯು. ಆದುದರಿಂದ ದೇಹಧರ್ಮವನ್ನು ಪಾಲಿಸುವುದೂ ಅದನ್ನು ಪರಿಪಾಲಿಸಲಿಕ್ಕೆ ಅವಕಾಶವನ್ನು ಕಲ್ಪಿಸಿ ಕೊಡುವುದೂ ಮಾನವ ಧರ್ಮದ ಮುಖ್ಯ ಲಕ್ಷಣವಾಗಿದೆ.

ಮಾನವದೇಹದ ಮಹತಿಯನ್ನರಿತ ಬಳಿಕ ಅದನ್ನು ವ್ಯರ್ಥವಾಗಿ ಕಂದಿಸಿ ಕುಂದಿಸಿ ಬಂಧನಕ್ಕೆ ಒಳಗಾಗಿರಿಸಬಾರದು. ಸ್ಥೂಲದೇಹವಿರುವವರೆಗೆ ಈ ಬಾಹ್ಯ ಸೃಷ್ಟಿಯೂ ಅವಶ್ಯವೆನಿಸುವುದರಿಂದ ಕರ್ತಾರನ ಕಮ್ಮಟವೆನಿಸುವ ಈ ಕರ್ಮಭೂಮಿಯನ್ನು ಕಡೆಗಣಿಸಿ ನೋಡಬೇಕಾಗಿಲ್ಲ. ಇಹಲೋಕಕ್ಕಿಂತ ಮಿಗಿಲಾದ ಸ್ವರ್ಗ ಕೈಲಾಸ ಲೋಕಗಳೆಂಬವುಂಟು; ಅವುಗಳಲ್ಲಿಯ ಜೀವನವು ಶ್ರೇಷ್ಠವಾದುದು, ಸುಖಮಯವಾದುದು, ಈ ಭೂಲೋಕದಲ್ಲಿಯ ಬಾಳವೆಯು

ದುಃಖಮಯವಾದುದು—ಎಂದು ಈ ಕಣ್ಣಿಗೆ ಕಾಣದ ಲೋಕಕ್ಕೆ ಅನುಭವಕ್ಕೆ ನಿಲ್ಲುತ್ತದೆ ಆಲಸವೃತ್ತಿಯ ಮನವು. ಕಲ್ಪನೆಯ ಸಟೆಯಾದ ರಾಜ್ಯವೊಂದನ್ನು ಹೊಗಳಿ ಮಾನವ ಜೀವನಕ್ಕೆ ಎಲ್ಲ ರೀತಿಯಿಂದಲೂ ಅನುಕೂಲಿಸುವ ದಿಟವಾದ ಈ ಲೋಕವನ್ನು ತೆಗ ಳುಡಿಯುವುದು, ನಮ್ಮ ಮೇಲಾದ ಪೌರಾಣಿಕ ಧರ್ಮದ ಪರಿಣಾಮದಿಂದ. ಶಾಸ್ತ್ರದೃಷ್ಟಿಯಿಂದ, ಅನುಭಾವದೃಷ್ಟಿಯಿಂದ ಅರೆದು ಒರೆದು ನೋಡಿದರೆ, ಈನಿಸರ್ಗವು ಈ ಪ್ರಕೃತಿಯು ಅತಿನಿಯಮಬದ್ಧವಾಗಿ ಸಾಗಿರುವುದೆಂಬುದು ವ್ಯಕ್ತವಾಗುವುದು. ಸ್ಥೂಲ ತನುವಿನಿಂದಿರಲು ಈ ಪೃಥ್ವಿಯೇ ಯೋಗ್ಯವಾದ ಸ್ಥಾನವೆನಿಸಿಹುದು. ಚಂದ್ರ ಮಂಗಳ ಲೋಕಗಳಿಗೆ ದಂಡಯಾತ್ರೆಗೆಯ್ದು ಅಲ್ಲಿಯ ಆವಾಸದ ಸವಿಸುಖವನ್ನು ಬಯಸುವ, ಬಯಸಿ ಹೊಂದಬೇಕೆನ್ನುವ ಸಾಹಸದ ಕಾರ್ಯಗಳಿಗೂ ಅಣಿಯಾಗಿದೆಯನ್ನೋಣ. ಆದರೆ ಅಲ್ಲಿಗೆ ಮುಟ್ಟುವ ಪೂರ್ವದಲ್ಲಿಯೇ ಯಾವಸ್ಥಿತಿಯೊದಗುವುದು ಹೇಳುವರಾರು? ಒಂದು ದಿವಸದ ಅರ್ಧ ಅವಧಿಯಲ್ಲಿ ಆರುತಾಸಿನ ಉಗ್ರ ಶಕೆಯೂ ಆರುತಾಸಿನ ಶೀಘ್ರ ಚಳಿಯೂ ಇರುವುದೆಂದು ಊಹಿಸಲಾದ ಚಂದ್ರಲೋಕದಲ್ಲಿ ಸೇರಿ ಸವಿಯುವ ಸುಖವಾದರೂ ಎಂಥದು? ಸೃಷ್ಟಿಯಲ್ಲಿ ತೋರುವ ಭಯಪ್ರದವಾದ ವ್ಯತ್ಯಾಸಗಳಿಂದ ಅಂಜಿಕೊಂಡು ಕೂಡ್ರುವುದು ಭಾರತೀಯ ಜೀವರುಗಳಿಗೆ ಸಹಜವಾಗಿದೆ. ಪ್ರಕೃತಿಯೊಡನೆ ಹೋರಾಟವೆಂದರೆ ಅವರಿಗೆ ಅರಿಯದ ವಿಷಯವು. ಅದರಲ್ಲಿ ತೋರುವ ವ್ಯತ್ಯಾಸಗಳಿಗೆ ಭಯಪಟ್ಟು ಅದರ ಶಾಂತಿಗಾಗಿ ಈ ವರೆಗೂ ಬೇಡಿಕೊಂಡುದೂ ಪ್ರಾರ್ಥಿಸಿಕೊಂಡುದೂ ಅಷ್ಟಿಷ್ಟಲ್ಲ. ಪ್ರಾರ್ಥನೆಗಳ ಫಲವಾದರೂ ಯಾವದು ? ಪಾಶ್ಚಿಮಾತ್ಯರು ಪ್ರಕೃತಿಯೊಡನೆ ಹೋರಾಡಿ ಅದರಲ್ಲಿಯ ಅಮೋಘವಾದ ಅನರ್ಘ್ಯವಾದ ತತ್ವಗಳನ್ನು ಕಂಡು ಹಿಡಿದು ಆನಂದಗೊಳ್ಳುತ್ತಿರುವಂತೆ ಪ್ರಾರ್ಥನೆಗಳಿಂದ ಆನಂದವೇನಾದರೂ ಅಳವಟ್ಟಿದೆಯೇ ? ಇಲ್ಲ, ಹೋರಾಟವೇ ಹರುಷವೆಂಬ ತತ್ವವು ತಿಳಿದಿಲ್ಲ. ಕಾಲ್ಪನಿಕ ರಾಜ್ಯಸುಖಭೋಗವೇ ಲಕ್ಷ್ಯವಾಗಿರುವ ಪೌರ್ವಾತ್ಯರಿಗೆ ಹೋರಾಟದ ಹರುಷಸುಖವು ಒಗ್ಗುವದೆಂತು? ಸ್ವರ್ಗದ ಕಾಲ್ಪನಿಕ ಜ್ಞಾನದ ಸವಿಗಿಂತ ನಿಸರ್ಗದಲ್ಲಡಗಿದ ಅಮೌಲ್ಯ ರತ್ನಗಳ ಶೋಧವು ಕಠಿಯಾದುದಾದರೂ ಅದು ನಮಗೆ ಬೇಕು. ಇದರಿಂದ ಮಾನವ ಲೋಕದ ಮಹತಿಯು

ವಿದಿತವಾಗಬೇಕು. ಅವರ ಮಿತವಾದ ಪ್ರತ್ಯಕ್ಷಾನುಭವದ ಆಸಂದ ವುಂಟಾಗಬೇಕು. ಇಂಥ ಮರ್ತ್ಯಲೋಕದ ಮಹಿಮೆಯನ್ನರಿತುಕೊಳ್ಳುವುದೂ ಮಾನವಧರ್ಮದ ಲಕ್ಷಣವಾಗಿರುವದು.

ಪ್ರಪಂಚದಲ್ಲಿ ಎದುರುಗೊಳ್ಳುವ ಸುಖ-ದುಃಖ, ಸತ್ಯ-ಅಸತ್ಯ, ನ್ಯಾಯ-ಅನ್ಯಾಯಗಳ ದ್ವಂದ್ವದಲ್ಲಿ ಒಂದು ಇನ್ನೊಂದರ ಅಭಾವವೆಂದು ಹೇಳಿ ದ್ವಂದ್ವದ ದಂದುಗವನ್ನು ಪರಿಹರಿಸುವ ಪುರುಷ ಪ್ರಯತ್ನವನ್ನು ಪೌರಾಣಿಕ ಧರ್ಮವು ಒಪ್ಪಿಕೊಳ್ಳುವುದೇ ಇಲ್ಲ. ಎಲ್ಲವೂ ದೈವಾಧೀನ, ಬಂದ ಬರವೇ ಲಿಂಗಾನಂದ ಎಂದು ಅನ್ನುವ ಭಕ್ತರ ನುಡಿಯೂ ಈ ಪುರುಷ ಪ್ರಯತ್ನದ ಅಭಾವವನ್ನು ವ್ಯಕ್ತಪಡಿಸುವುದು. 'ಬುದ್ಧಿಃ ಕರ್ಮಾನುಸಾರಿಣೀ' ಎಂದು ಹೇಳುವ ಪೌರಾಣಿಕ ಧರ್ಮದ ಮಾತು ಸಾಕು. ಕರ್ಮವು ಬುದ್ಧಿಯನ್ನು ಅನುಸರಿಸುವುದು ಎಂಬ ತಿಳಿ ತಿಳಿವು ನಮಗೆ ಬೇಕು. ಅಲ್ಲದ ಕಾರ್ಯವೆಸಗಲು ಮನುಷ್ಯನಿಗೆ ಅವನ ಬುದ್ಧಿಯೇ ಪ್ರೇರಿಸುವಂತೆ, ಸಲ್ಲುವ ಕಾರ್ಯ ಮಾಡಹಚ್ಚುವದೂ ಅವನ ಬುದ್ಧಿಯೇ. ಕರ್ಮವನ್ನೆಸಗುವ ಕರ್ತಾರನ ಬುದ್ಧಿಗೆ ಬೆಲೆಯುಂಟು. ಸಣ್ಣ ಜೀವಾಣುವಿನಿಂದ (Pratoplasm) ಮಹಾತ್ಮನೆನಿಸಿದ ಮಾನವನ ವರೆಗೆ ದೇಹವನ್ನು ಧರಿಸಿ ಬರಲು—ಧರಿಸಿಬಂದು ಹೋರಾಡಲು—ಹೋರಾಡಿ ಹರುಷಗೊಳ್ಳಹಚ್ಚಲು, ಮಾನವನ ಬುದ್ಧಿ, ಅವನ ಉತ್ಕಟವಾದ ಇಚ್ಛೆ, ಅವನ ಸಂಕಲ್ಪಶಕ್ತಿಗಳೇ ಕಾರಣವಾಗಿವೆ. ಆದುದರಿಂದ ಬುದ್ಧಿಯ ಬಲವುಳ್ಳವನು ದ್ವಂದ್ವದ ದಂದುಗವನ್ನು ನಿವಾರಿಸಿಕೊಳ್ಳಲು ಶಕ್ತನಾಗದಿರನು. ಭೌತಿಕ ಸೃಷ್ಟಿಯಲ್ಲಿ ಕ್ರಿಯೆಪ್ರತಿಕ್ರಿಯೆಗಳಂತೆ, ಭಾವನಾದೃಷ್ಟಿಯಲ್ಲಿ ನ್ಯಾಯ-ಅನ್ಯಾಯ, ಸತ್ಯ-ಅಸತ್ಯ, ಸುಖ-ದುಃಖಾದಿಗಳೂ ಸಮತೂಕದ ಪ್ರತಿಯೋಗಿಗಳಾಗಿರುವವು. ಆದುದರಿಂದ ಅನ್ಯಾಯ ಅಸತ್ಯ ದುಃಖಾದಿಗಳ ಬಲವನ್ನು ಕುಗ್ಗಿಸಿ, ನ್ಯಾಯ ಸತ್ಯ ಸುಖಾದಿಗಳ ಬಲವನ್ನು ಹಿಗ್ಗಿಸಬೇಕು. ಬುದ್ಧಿವಂತನಾದವನು ತನ್ನ ಬುದ್ಧಿಯ ಸಾಮರ್ಥ್ಯವನ್ನು ಕಾಣಬೇಕು. "ಕರಿ ಘನ ಅಂಕುಶ ಕಿರಿದೆನ್ನಬಹುದೇ! ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ? ಮರಹು ಘನ ನೆನೆವ ಮನ ಕಿರಿದೆನ್ನಬಹುದೇ? ಬಾರದು!" ಎಂಬಂತೆ ಅನ್ಯಾಯಾದಿಗಳು ಎಷ್ಟು ಘನವಾಗಿ ಕಂಡರೂ ನ್ಯಾಯಾದಿಗಳೆದುರು ಕಿರಿದಾಗಿಯೇ ಕಾಂಬುವು. ಹಿರಿದೆನಿಸ್ಸ ಅನ್ಯಾಯಾದಿ

ಗಳನ್ನು ಕಿರಿದೆನಿಸ್ಪ ನ್ಯಾಯಾದಿಗಳ ಅಂಕಿತಕ್ಕೆ ಒಳಗುಮಾಡಬೇಕು. ಇದುವೇ ವ್ಯಕ್ತಿಧರ್ಮ, ಇದುವೇ ಮಾನವಧರ್ಮ, ಪಶುಪತಿಧರ್ಮವೆಂದರೂ ಇದೇ. ಅನ್ಯಾಯ ಮೊದಲಾದವು ಪಶುವೃತ್ತಿಯ ಲಕ್ಷಣವಾಗಿಹವು. ಇವು ಅಳಿಯುವುದಿಲ್ಲ. ಆದರೆ ಬುದ್ಧಿ ಬಲದಿಂದ ಪತಿಯ ಲಕ್ಷಣವಾದ ನ್ಯಾಯ ಮೊದಲಾದವುಗಳ ಅಂಕಿತದಲ್ಲುಳಿಯುವವು. ಹೀಗೆ ಅವು ಅಂಕಿತದಲ್ಲುಳಿಯಲು ಹೋರಾಡಬೇಕು. ಅದುವೆ ಹರುಷದಾಗರವಾಗಿಹುದು. ದೈವವಾದದ ಅದೃಷ್ಟದ ಮಾತು ನಂಬುಗೆಗಳು, ಭಾರತದೇಶದಲ್ಲಿ ಹೇಡಿಗಳ ಬಲಹೀನರ ತಂಡವನ್ನೇ ನಿರ್ಮಿಸಿದವು; ಆತ್ಮವಿಶ್ವಾಸದ ಸ್ವಾಭಿಮಾನವನ್ನೇ ಕಳೆದು ಬಿಟ್ಟವು; ನಿಶ್ಚಯಧೋರಣೆ, ನಿರ್ಣಯಾತ್ಮಕ ಬುದ್ಧಿಗಳನ್ನೇ ಹಾಳು ಮಾಡಿದವು; ಮಾನವಧರ್ಮವಾವುದು ಎಂಬ ವಿಚಾರ ಶಕ್ತಿಯನ್ನೇ ಕುಗ್ಗಿಸಿದುವು. ಆದುದರಿಂದ ಕಲ್ಪನೆಯಲ್ಲಿ ಮೂಡಿ ಮರವಾಗಿ ಬೆಳೆದ ಈ ದೈವವಾದ ಅದೃಷ್ಟಗಳ ನಂಬುಗೆ ಸಾಕು; ಮನುಷ್ಯ ಪ್ರಯತ್ನದ ಹಂಬಲು ಬೇಕು; ಅರ್ಥಾತ್ ಮಾನವಧರ್ಮ ಪರಿಪಾಲನೆಗೆ ಸಿದ್ಧರಾಗಬೇಕು. ಈ ಅದೃಷ್ಟವಾದದ ಆಶ್ರಯದಲ್ಲಿ ಬೆಳೆದ ನಮ್ಮ ಜನರಿಗೆ ಪ್ರಪಂಚದಲ್ಲಿ ಜರುಗುವ ಘಟನೆಗಳ ಕಾರ್ಯಕಾರಣಗಳ ಸಂಬಂಧದ ಅರಿವು ಇಲ್ಲದಾಗಿದೆ. ಯಾವ ಘಟನೆಯೇ ಇರಲಿ—ಚಿಕ್ಕದಿರಲಿ ದೊಡ್ಡದಿರಲಿ—ಅದಕ್ಕೊಂದು ಕಾರಣವಿರಲೇ ಬೇಕು. ಕಾರಣವಿಲ್ಲದೆ ಕಾರ್ಯವಾಗದು. ಶೋಧಕ ಬುದ್ಧಿಗೆ ಆ ಕಾರಣವು ಈಗಲೇ ಕಾಣಬಹುದು; ಇಲ್ಲವೆ ಕಾಲಾಂತರದಲ್ಲಿ ಕಾಣಬಹುದು. ಆದರೆ ಅದೃಷ್ಟವಾದದಿಂದ ಅದನ್ನು ಸಿದ್ಧಿಸಲೆತ್ನಿಸುವುದು ಪುರುಷಾರ್ಥದ ಲಕ್ಷಣವಲ್ಲ. ಕಾರ್ಯಕ್ಕೆ ಕಾರಣವನ್ನು ಕಂಡುಹಿಡಿದು ಬುದ್ಧಿ ಸಾಮರ್ಥ್ಯದಲ್ಲಿ ನಂಬುಗೆಯನ್ನು ಬೆಳೆಸಿಕೊಳ್ಳುವುದು ಮಾನವಧರ್ಮವೇ ಆಗಿರುವುದು. ಮಾನವತೆಯ ಅರಿವು ಬೆಳೆದು ಅದರ ಘನತೆಯು ಪ್ರಕಟವಾಗಬೇಕಾದರೆ ಮಾನವಧರ್ಮ ಪರಿಪಾಲನೆಯು ಅವಶ್ಯವಾಗಿ ಸಾಗಬೇಕು.

ಒಟ್ಟಾರೆ, ಪೌರಾಣಿಕ ಧರ್ಮವು ಪುಣ್ಯಶಾಲಿಗಳ ಮೇಲ್ಮೆಯನ್ನು ಎತ್ತಿ ಹಿಡಿದು ಪುಣ್ಯದ ಫಲವು ಎಂದೆಂದಿಗೂ ದೊರೆಯುವಂತೆ ಮಾಡಿಕೊಳ್ಳಬೇಕೆಂದು ಬೋಧಿಸುವುದಾದರೆ ಮಾನವಧರ್ಮವು ಪುಣ್ಯಪಾಪಗಳು ತಮ್ಮಿಷ್ಟ. ಕರ್ತಾರನ ಬುದ್ಧಿಯನ್ನವಲಂಬಿಸಿ ರೂಪುಗೊಳ್ಳುವವು—ಎಂದು ತಿಳಿಸಿ

ಸಮರ್ಥರಾದ ಮಾನವರ ನಿರ್ಮಾಣಗೊಳಿಸುವುದು. ಪೌರಾಣಿಕ ಧರ್ಮವು ಅವತಾರಿಕರ ಹೆಚ್ಚಳವನ್ನು ಹೇಳಿ ಮಾನವನು ಮಾನವನೇ, ದೇವನಾಗಲಾರನು ಎಂದು ಸಮರ್ಥಿಸಿದರೆ, ಮಾನವ ಧರ್ಮವು ಮಾನವನು ಮಹತ್ತರನಾದ ವ್ಯಕ್ತಿಯಾಗಬೇಕು, ತನ್ನ ಅಸ್ತಿತ್ವವನ್ನರಿತು ಅನ್ಯರು ಅದನ್ನರಿಯುವಂತೆ ಮಾಡಬೇಕು—ಎಂದು ಹೇಳಿ ದೇವ–ಮಾನವರಲ್ಲಿ ಹೊಂದುಗೆಯನ್ನು ಸಾರುತ್ತದೆ. ಪೌರಾಣಿಕ ಧರ್ಮವು ಮಾನವನು ಸಾಮಾನ್ಯವಾಗಿ ಜನಿಸಿ ಕ್ಷುದ್ರ ಜೀವಿಯಾಗಿ ಬಾಳಿ, ಒಂದು ದಿನ ಅಳಿದುಹೋಗುವನು ಎಂಬ ಕ್ಷಣಿಕ ತತ್ವದ ಮಾತನ್ನು ಒತ್ತೊತ್ತಿ ಹೇಳಿದರೆ, ಮಾನವ ಧರ್ಮವು ಮಾನವನು ಸಾಮಾನ್ಯನಲ್ಲ, ಅತಿಮಾನವನಾಗುವ ಸಾಮರ್ಥ್ಯವು ಅವನಲ್ಲಿದೆ, ಆದುದರಿಂದ ಮಾನವನು ಅತಿಮಾನನಾಗಬೇಕು—ಎಂಬುದನ್ನು ಎತ್ತಿ ಎತ್ತಿ ಹೇಳುತ್ತದೆ. ಪೌರಾಣಿಕ ಧರ್ಮವು ಕಾರಣವನ್ನು ಕಂಡುಹಿಡಿಯಲಾರದೆ ಘಟನೆಗಳಿಗೆ ದೈವವಾದದ ಮಾತನ್ನಂಟಿಸಿ ಪುರುಷಪ್ರಯತ್ನವನ್ನೇ ಅಲ್ಲಗಳೆದು ಕೈಲಾಗದವರ ನೆರವಿಯನ್ನು ಬೆಳೆಸುವುದಾದರೆ, ಮಾನವ ಧರ್ಮವು ಕಾರ್ಯಕ್ಕೊಂದು ಕಾರಣವುಂಟು; ಅದನ್ನರಿತುಕೊಳ್ಳಬೇಕು; ಅದರಲ್ಲಿ ಪುರುಷಾರ್ಥ, ಅದಕ್ಕಾಗಿ ಪುರುಷಪ್ರಯತ್ನ; ಪುರುಷಪ್ರಯತ್ನವಿದ್ದಲ್ಲಿ ಹರುಷ, ಅದುವೆ ಪರುಷ; ಇಂತಹ ಪರುಷಮಣಿಯ ನೆರವಿನಿಂದ ಜೀವನದ ಸಾರ್ಥಕ್ಯವನ್ನು ಮಾಡಿಕೊಳ್ಳಬೇಕು—ಎಂದು ತಿಳಿಸುವುದು. ಇಂತಹ ಧರ್ಮದ ತಿರುಳು ಜೀವನದ ಹುರುಳಾಗಲಿ.

---

# ವಿಶ್ವ ಧರ್ಮ

## ವಸ್ತುಸ್ವಭಾವ ವಿಚಾರವೇ ದರ್ಶನ

ವಿಶ್ವದಲ್ಲಿ ವಿವಿಧ ವಸ್ತುಗಳಿದ್ದು ಅವುಗಳ ಸ್ವಭಾವಗಳು ಅನಂತ ವಾಗಿಯೂ ಅತಿ ವಿಚಿತ್ರವಾಗಿಯೂ ಇರುವವು. ವಸ್ತುಸ್ವಭಾವವಿಚಾರವೇ ದರ್ಶನವು. ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವಿಗೂ ಒಂದು ಹೆಸರು ಅಥವಾ ನಾಮಪದ ಇರುವದು. ಅಂತಹ ಪದಗಳಿಂದ ತಿಳಿಯಲ್ಪಡುವ ವಸ್ತುಗಳೇ ಪದಾರ್ಥಗಳು. ಪದಾರ್ಥ, ವಸ್ತು, ತತ್ವ ಇವೆಲ್ಲ ಒಂದೇ ಅರ್ಥ ವುಳ್ಳವು. ಪದಾರ್ಥ ಸಂಶೋಧನಾಶಾಸ್ತ್ರವೇ ದರ್ಶನ ವಿಚಾರವೆಂದು ತಲೆಯೆತ್ತಿತು. ವಿಶ್ವದಲ್ಲಿ ವಿವಿಧ ವಸ್ತುಗಳಿರುವದೇನೋ ನಿಜ; ಅವುಗಳಲ್ಲಿ ಕೆಲವು ಪ್ರತ್ಯಕ್ಷಗಳಾಗಿಯೂ ಮತ್ತೆ ಕೆಲವು ಪರೋಕ್ಷಗಳಾಗಿಯೂ ಇರುವವು. ನೆಲ, ನೀರು, ಬೆಂಕಿ, ಬೆಳಕು ಮುಂತಾದ ಪ್ರತ್ಯಕ್ಷ ವಸ್ತುಗಳ ವಿಚಾರವು ವಿಜ್ಞಾನದ ಎಲ್ಲೆಗೂ ಪರೋಕ್ಷವಾದ ಆತ್ಮ, ಪರಮಾತ್ಮ, ಪರಲೋಕ, ಪಾಪ-ಪುಣ್ಯ ಮೊದಲಾದವುಗಳ ವಿಚಾರವು ತತ್ವಜ್ಞಾನದ ಎಲ್ಲೆಗೂ ಸೇರಿದುವು. ವಿಶ್ವದ ಮೂಲತತ್ವಗಳು ಹೇಗಿರಬಹುದು ? ಒಂದೆ, ಹಲವೆ? ಏಕ ವಿಧವೆ, ಅನೇಕ ವಿಧವೆ? ಇವುಗಳಿಂದ ಮಾನವನಿಗೆ ಸುಖವೆ, ದುಃಖವೆ? ಮಾನವನೆಂಬುದು ಮಾಯಿಕವೆ, ವಾಸ್ತವವೆ? ಇತ್ಯಾದಿ ವಿಚಾರವು ತತ್ವದರ್ಶನದ ತಿರುಳು. ವಿಜ್ಞಾನವಾಗಲಿ ತತ್ವಜ್ಞಾನವಾಗಲಿ ಪ್ರತ್ಯಕ್ಷ ಪರೋಕ್ಷ ವಸ್ತುಗಳ ವಿವಿಧ ಸ್ವಭಾವಗಳನ್ನು ಅರಿಯುವ ಆನುಷ ಅನುಗೊಳಿಸುವವು. ಬೆಂಕಿಯ ಸ್ವಭಾವ ಉಷ್ಣ, ನೀರಿನ ಸ್ವಭಾವ ಶೀತ, ಗಾಳಿಯ ಸ್ವಭಾವ ಚಂಚಲವೆಂದು ಹಲವು ಬಗೆಯವಾಗಿ ಹೇಳುವುದಾದರೂ ಅವುಗಳ ಸ್ವಧರ್ಮ ಒಂದೆಯಾಗಿದೆ. ವಿಶ್ವದಲ್ಲಿ ಸಮಸ್ತ ವಸ್ತುಗಳು ಸಾಂದ್ರತೆ ಯನ್ನು ಕಾಯ್ದುಕೊಳ್ಳಲು ತವಕಿಸುತ್ತಿವೆ. ನೀರು ಸಮಪಾತಳಿಯನ್ನು ಹುಡುಕಲೆಳಿಸುವದು; ಗಾಳಿಯು ಸಾಂದ್ರದೆಡೆಯಿಂದ ತರಲದೆಡೆಗೆ ಬೀಸಿ ಸಮತೆಯನ್ನು ಹೊಂದಲಪೇಕ್ಷಿಸುವುದು; ವಿದ್ಯುತ್ ಅಧಿಕ ಪ್ರಮಾಣದಿಂದ ಅಲ್ಪ ಪ್ರಮಾಣದತ್ತ ಹರಿದು ಸಮತೆಯಲ್ಲಿರಲು ಹವಣಿಸುವದು. ಹೀಗೆ

ವಿವಿಧ ವಸ್ತುಗಳು ಸಮತೆಯಲ್ಲಿರಲು ಧಾವಿಸುತ್ತವೆ; ಎಂದರೆ ತಮ್ಮ ಧರ್ಮವಾದ ಶಾಂತಿಯನ್ನು ಸಂಪಾದಿಸಲು ಹೆಣಗುತ್ತವೆ.

**ಕಾಮ ಕ್ರೋಧ ಲೋಭಗಳೇ ಮಾನವನಿಗೆ ಮಾರಿ**

ಮಾನವನಲ್ಲಿ ಮುಖ್ಯವಾದ, ಸಹಜವಾದ ಸ್ವಭಾವಗಳೆಂದರೆ ರಾಗ-ದ್ವೇಷ-ಮೋಹಗಳು. ದಯಾ-ದಾಕ್ಷಿಣ್ಯ-ನಯ-ವಿನಯಗಳು ಅಭ್ಯಾಸದಿಂದ ಬರುವಂತಹ ಸ್ವಭಾವಗಳು. ರಾಗವೆಂದರೆ ಸುಖವನ್ನು ಹೊಂದಬೇಕೆಂಬ ಅಪೇಕ್ಷೆ. ಇದು ಪ್ರಬಲವಾದರೆ ಕಾಮ, ವಾಸನೆ, ಬಯಕೆಯಾಗಿ ಪರಿಣಮಿಸುವುದು. ಇದನ್ನು ವಿರೋಧಿಸುವವರ ಮೇಲೆ ದ್ವೇಷವು ಹುಟ್ಟಿ ಅದು ಬೆಳೆದು ಕ್ರೋಧವಾಗುವದು. ಕ್ರೋಧಾವಿಷ್ಟನಾಗಿ ಮಾನವನು ವಸ್ತು ಸ್ವಭಾವವನ್ನು ತಿಳಿಯದೇ ಹೋಗುವನು. ವಸ್ತುಸ್ವಭಾವದ ಯಥಾರ್ಥ ತಿಳಿವಳಿಕೆ ಇಲ್ಲದಿರುವದೇ ಭ್ರಾಂತಿ ಅಥವಾ ಮೋಹವು. ಇದು ಪ್ರಬಲ ವಾದರೆ ಲೋಭವಾಗುವದು. ಲೋಭವೆಂದರೆ ಎಲ್ಲವೂ ತನಗೆ ಬೇಕು, ಇತರರಿಗೆ ಇರಬಾರದೆಂಬ ದುರ್ಗುಣವು. ಈ ಉತ್ಕಟ ರಾಗ-ದ್ವೇಷ-ಮೋಹ ಗಳೇ, ಈ ಕಾಮ-ಕ್ರೋಧ-ಲೋಭಗಳೇ ಮಾನವನಿಗೆ ಮಾರಿ. ಈ ಮೂರು ಗುಣಗಳೇ ಪ್ರಪಂಚದಲ್ಲಿ ಪ್ರಬಲವಾದರೆ ಸಕಲ ವಿಧವಾದ ಅನರ್ಥಗಳೂ ಮೈದೋರುವವು. ಮಾನವನಿಗೆ ಈ ಗುಣಗಳನ್ನು ಸಂಪೂರ್ಣವಾಗಿ ಬಿಡಲು ಸಾಧ್ಯವೇ ಇಲ್ಲ. ಇವುಗಳನ್ನು ಅಧಿಕ ಪ್ರಮಾಣದಲ್ಲಿಟ್ಟುಕೊಂಡರೆ ಅದು ಜೀವನವೇ ಅಲ್ಲ. ಯಥೋಚಿತವಾಗಿ ಇವುಗಳನ್ನು ತಣಿಸಿ ಔನ್ನತ್ಯವನ್ನು ಸಂಪಾದಿಸುವದಕ್ಕೆ ಶಾಂತಿಯೆಂದು ಹೆಸರು. ಇಂತಹ ಶಾಂತಿಯೆ ಸಕಲ ದರ್ಶನಗಳ ಧ್ಯೇಯವು. ಶಾಂತಿಯನ್ನು ನಾನಾಮುಖವಾಗಿ ಉದ್ದೇಶಿಸಿ, ಕೆಲವು ಸಂದರ್ಭಗಳಲ್ಲಿ ಕೆಲವು ಕಾರಣಗಳಿಗೆ ಪ್ರಾಧಾನ್ಯವನ್ನು ಕೊಟ್ಟು ದರ್ಶನಗಳು ಅತಿಯಾದ ವಾದಗಳು ಹುಟ್ಟಲಿಕ್ಕೆ ಅನುವು ಮಾಡಿ ಕೊಟ್ಟಿರುವವು. ಆದರೂ ಸಕಲ ದರ್ಶನಗಳಿಗೂ ಶಾಂತಿಯೆ ಮುಖ್ಯೋದ್ದೇಶ ವೆಂಬುದರಲ್ಲಿ ಸಂದೇಹವಿಲ್ಲ. ಈ ಬಗೆಯ ಶಾಂತಿಯೆಂಬ ದರ್ಶನೋದಯ ಕಾರಣವನ್ನು ತಮ್ಮ ತಮ್ಮ ಸಾಂಪ್ರದಾಯದಲ್ಲಿ ಸಕಲ ದಾರ್ಶನಿಕರೂ ತತ್ವವೇತ್ತರೂ ಸೂಚಿಸಿರುವರು. ಆದರೂ ಈ ದರ್ಶನಗಳಲ್ಲಿ, ಈ

ತತ್ವವೇತ್ತರಲ್ಲಿ ಒಡಲುರಿ, ಕಿಡಿನುಡಿ ಕುಡಿಚಾಚಿರುವದನ್ನು ಕಂಡು ಉದಾ
ಹೃದಯಿಗಳು ಉಮ್ಮಳವನಾಹಾರಗೊಂಡಿದ್ದಾರೆ. ಆರೈದು ನೋಡಿದ
ಮದ-ಮತ್ಸರಗಳು ಕೆಲವು ಸ್ವಾರ್ಥಪರ ವ್ಯಕ್ತಿಗಳಲ್ಲಿರುವವೇ ಹೊರ
ಉದಾರ ಹೃದಯವುಳ್ಳ ವಿಶಾಲ ಮತಿಗಳಲ್ಲಿ ಇಲ್ಲವೇ ಇಲ್ಲ.

## ಮಾನವನಲ್ಲಿ ವ್ಯಕ್ತಿತ್ವದ ಕಲ್ಪನೆ

ಸೇಂದ್ರಿಯ ಸೃಷ್ಟಿಯಲ್ಲಿ ಕ್ರಮಿಕ ತರಗತಿಗನುಸರಿಸಿ ಮಾನವ
ಉನ್ನತ ಸ್ಥಾನವಿದೆ. ಸಸ್ಯವರ್ಗ ಮೊದಲನೆಯದು. ಗಿಡಬಳ್ಳಿಗಳು ತಮ್ಮ
ಬೇರುಗಳಿಂದ ಭೂಮಿಯೊಳಗಿನ ಸಾರವನ್ನು ನೀರನ್ನು ಹೀರಿಕೊಳ್ಳುವವಲ್ಲ
ಎಲೆಗಳಿಂದ ಗಾಳಿಯೊಳಗಿನ ರಸಾಯನಿಕ ದ್ರವ್ಯಗಳನ್ನೂ ಸೂರ್ಯ
ಉಷ್ಣತೆಯನ್ನೂ ಹೀರಿಕೊಳ್ಳುತ್ತವೆ. ಸಸ್ಯವರ್ಗಕ್ಕೆ ರಸನೇಂದ್ರಿಯವು ಬಹು
ಮುಖ್ಯವಾದ ಇಂದ್ರಿಯ. ಸಸ್ಯವರ್ಗಕ್ಕಿಂತ ಅಧಿಕವಾದ ಪ್ರಾಣಿವರ್ಗದಲ್ಲಿ
ಸಂವೇದನೆ ಅಥವಾ ಅರುಹು ಹೆಚ್ಚಾಗಿ ಕಂಡುಬರುವದು.
ಏಕೆಂದರೆ ಪ್ರಾಣಿವರ್ಗದಲ್ಲಿ ಆಹಾರ ಹುಡುಕುವದರ ಜೊತೆ
ಸಂತಾನಾಭಿವೃದ್ಧಿಯೂ ಕಂಡುಬರುವದು. ರಸನೇಂದ್ರಿಯದ ಸಿಕಟಾನು
ವರ್ತಿಯಾಗಿ ಜನನೇಂದ್ರಿಯದ ಕಾರ್ಯವು ಬೆಳೆದಿರುವದು. ಹೀಗೆ
ಪ್ರಾಣಿಗಳಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯ ಕಾರ್ಯವು ನಡೆದಿರುವದು
ಪ್ರಾಣಿಗಿಂತಲೂ ಅಧಿಕವಾದ ಮಾನವನಲ್ಲಿ ಇಂದ್ರಿಯಂಗಳಿಗೆ ಅಧಿಪತಿಯಾದ
ಮನವು ಜಾಗ್ರತವಾಗಿ ಮನನಶಕ್ತಿ ಅಧಿಕವಾಗಿರುವದರಿಂದ ಅವನಿಗೆ
ಮಾನವನೆಂದು ಹೆಸರು ಬಂದಿದೆ. ಬಿಡಿಬಿಡಿಯಾದ ಸಂಸ್ಕಾರಗಳ ಜ್ಞಾನವು
ಇಂದ್ರಿಯಗಳ ಮುಖಾಂತರ ಪ್ರಾಣಿಗಳಿಗೂ ಮಾನವನಿಗೂ ಸಮನಾಗಿಯೇ
ಆಗುವದು. ಆದರೆ ಬಿಡಿಬಿಡಿಯಾದ ಸಂಸ್ಕಾರಗಳನ್ನು ಇಡಿಯಾಗಿ ಹೊಂದಿಸಿ
ಪದಾರ್ಥಗಳ ಜ್ಞಾನ ಮಾಡಿಕೊಳ್ಳುವಷ್ಟು ಸಂವೇದನೆಯು ಪ್ರಾಣಿಗಳಲ್ಲಿಲ್ಲ
ಅದು ಮಾನವನಲ್ಲಿ ಉಂಟು. ಈ ಮನನ ಶಕ್ತಿಯಿಂದ, ಈ ಸಂವೇದನೆಯ
ಬಲದಿಂದ, ಈ ಅರುಹಿನ ನೆರವಿನಿಂದ ಮಾನವನಿಗೆ ಸೃಷ್ಟಿಯ ಜ್ಞಾನವಾಗು
ವದು; ಆದರಿಂದ ತಾನು ಉಳಿದವರಿಗಿಂತ ಪ್ರತ್ಯೇಕ ಎಂಬ ವ್ಯಕ್ತಿತ್ವದ
ಕಲ್ಪನೆ ಹುಟ್ಟುವದು. ಇದಕ್ಕಾಗಿಯೇ ಸೇಂದ್ರಿಯ ಸೃಷ್ಟಿಯಲ್ಲಿ ಮನುಷ್ಯನು

ಹೆಚ್ಚಿನವನೆಂದು ಹೇಳುವರು. ಅವನ ಜ್ಞಾನಸಾಧನಗಳು ಹೆಚ್ಚು ತೀಕ್ಷ್ಣವಾಗಿರುವವು. ತನ್ಮೂಲಕ ಅವನಲ್ಲಿ ಒಳಿತು-ಕೆಡಕು ಸುಖ-ದುಃಖಗಳ ಕಲ್ಪನೆಯು ಬೆಳೆದು ಬಂದಿರುವದು. ಆದುದರಿಂದ ಮಿಕ್ಕ ಪ್ರಾಣಿಗಳಂತೆ ಮಾನವನಿಗೆ ಊಟ-ಕೂಟಗಳೇ ಧ್ಯೇಯವಲ್ಲ. ಮಾನವನಿಗೆ ಮನವಿರುವದರಿಂದ ಹಿಂದೆ ಮುಂದೆ ನೋಡಿ ನಡೆಯುವನು.

**ಆತ್ಮಧರ್ಮವೆಂದರೇನು ?**

ಹಿಂದಿನದು ಕಳೆದು ಹೋಯಿತು. ಮುಂದಿನದು ನಮ್ಮ ಕೈಯಲ್ಲಿ ಇಲ್ಲ. ಆದರೆ ಇಂದಿನದನ್ನು ಅರಿತು ಆಚರಿಸಬೇಕು. ಹಿಂದು ಮುಂದಿನ ದಂದುಗಕ್ಕೆ ಒಳಗಾಗದೆ ಎಂದೆಂದಿಗೂ ಇರುವ ವಸ್ತುವನ್ನು ಈಗಲೇ ಇಲ್ಲಿಯೇ ಅನುಭವಿಸಿ ಆನಂದಿಸುವದು ಆತ್ಮಧರ್ಮ. ಬಂದುದ ಕಿರಿದು ಮಾಡಿ ಬಾರದುದ ಹಿರಿದು ಮಾಡಿ ಬಳಲುವದು ಬಾಳುವೆಯಲ್ಲ. ಇದ್ದುದ ಅಲ್ಲಗಳೆದು ಬಾರದ ಅಧಿಕ ಲಾಭಕ್ಕೆ ಆಶೆ ಮಾಡಿ ಗಾಸಿಯಾಗುವದು ಒಳಿತಲ್ಲ. ಇದ್ದುದರ ಸದುಪಯೋಗ ಮಾಡಿ ಇಲ್ಲದುದನ್ನು ಅಪೇಕ್ಷಿಸಬೇಕು. ಹೀಗೆ ನಾವು ವರ್ತಿಸುವದರಿಂದ ಮನಸಿನ ಹಂಬಲ ಹರಿದಾಟಗಳು ನಿಂತು ನಂಬುಗೆ ನಿರ್ಮಲಮತಿಗಳು ನೆಲೆಗೊಳ್ಳುತ್ತ ಹೋಗಬೇಕು; ಅಂದರೆ ಮನಸಿನಲ್ಲಿ ಸಮತೆ ಸಮಾಧಾನಗಳು ಬೇರೂರುವವು. ವಿಶ್ವದಲ್ಲಿ ಪದಾರ್ಥಗಳು ಸಮತೆಯಲ್ಲಿರಲು ಹವಣಿಸುವಂತೆ ಮನವಾದರೂ ಸಂಯಮಿತ ವೃತ್ತಿಯಲ್ಲಿದ್ದು ಸಮತೆಯನ್ನು ಹೊಂದಲು ಹಾತೊರೆಯುತ್ತದೆ. ಸಮಾಧಾನ ಪಡೆದ ಸಂಯಮಿತ ಮನವು ಬರಿಯ ಮನವಲ್ಲ, ಅದು ಉನ್ಮನ. ಅದರ ದೃಷ್ಟಿ ಪ್ರಾಕೃತ ನೋಟವಲ್ಲ, ಪ್ರಾತಿಭ ಚಕ್ಷು. ಇಂತಹ ಪ್ರಾತಿಭಚಕ್ಷುವಿಗೆ ಇಂದ್ರಿಯ ಸುಖವೇ ನಿಜವಾದ ಗುರಿಯಲ್ಲವೆಂದೂ ಆತ್ಮಶಾಂತಿಯೇ ಜೀವನದ ಧ್ಯೇಯವೆಂದೂ ವೇದ್ಯವಾಗುವದು. ಇಂತಹ ಶಾಂತಿಯು ಹೊರಗಿನ ಯಾವದೇ ಪರಿಸ್ಥಿತಿಯನ್ನು ಅವಲಂಬಿಸದೆ, ನಿರಾಲಂಬವಾಗಿ ಸಂತತ ಸುರಿವ ಅಮೃತ ಸ್ರೋತದಂತೆ ಹರಿಯುವ ಆನಂದ ಪ್ರವಾಹವಾಗಿ ಪರಿಣಮಿಸುವದು.

**“ಆಚಾರಪ್ರಭವೋ ಧರ್ಮಃ ”**

ಮಾನವ ಸ್ವಭಾವವು ಸತ್ವ-ರಜ-ತಮೋಗುಣಗಳ ಅನ್ಯೋನ್ಯ ಸಂಸರ್ಗವು. ಈ ಗುಣತ್ರಯೀರೂಪ ಪ್ರಕೃತಿಯೆ ಮಾನವ ಸ್ವಭಾವದ

ಮೂಲವು. ಅದಕ್ಕೆ ಮನ, ಅಹಂಕಾರ, ಮಹತ್ತೆಂದು ಮೂರು ವೃತ್ತಿ
ಳುಂಟು. ಮಹತ್ತು ಸತ್ವಗುಣೋತ್ಕರ್ಷಿಯಾದುದು. ಅಹಂಕಾರವು ರಜೋ
ಗುಣೋತ್ಕರ್ಷಿಯಾದುದು. ಮನವು ತಮೋಗುಣೋತ್ಕರ್ಷಿಯಾದುದು.
ಅದೇಕೆ, ಸತ್ವಗುಣವೆ ಮನವಾಗಿಯೂ ಪರಿಣಮಿಸಿರುವದೆಂದರೂ ಸಲ್ಲು
ವದು. ಒಂದೊಂದು ವೃತ್ತಿಗನುಗುಣವಾಗಿ ಒಂದೊಂದು ಬಗೆಯ ವ್ಯಾಖ್ಯೆ
ಯನ್ನು ಹೇಳುವರು ಧರ್ಮಕ್ಕೆ. "ಆಚಾರಪ್ರಭವೋ ಧರ್ಮಃ" ಈ
ವ್ಯಾಖ್ಯೆಯು ಮಹತ್ ವೃತ್ತಿಗನುಗುಣವಾಗಿ ಅಥವಾ ಸತ್ವಗುಣವನ್ನು
ಉದ್ದೇಶಿಸಿ ಮಾಡಿರುವದಾಗಿ ಕಂಡುಬರುವದು. ಸಮಾಜಜೀವನದಲ್ಲಿ
ಮಾನವನಿಗೆ ಅನೇಕ ಸಮಸ್ಯೆಗಳು ಇದಿರಾಗುವವು. ತಾನು ಹೇಗೆ ನಡೆದ
ತನಗೆ ಕಲ್ಯಾಣವಾಗುವದು ಮತ್ತು ತನ್ನ ನಡತೆಯಿಂದ ಅನ್ಯರಿಗೆ ಅಕಲ್ಯಾಣ
ವಾಗದು ಎಂಬ ಭಾವನೆಯು ಅವನಲ್ಲಿ ಮೂಡಿಬರುವದು. ಆಗಾಗ್ಗೆ
ಆಚಾರವಾವುದು, ಅನಾಚಾರವಾವುದು ಎಂದು ಅವನಲ್ಲಿ ಕಲಹವು ಹುಟ್ಟು
ವದು. ಉದಾಹರಣೆಗಾಗಿ ಅಹಿಂಸೆ-ಆತ್ಮರಕ್ಷಣೆಗಳಲ್ಲಿ, ಸತ್ಯ-ಸರ್ವಭೂತ
ಹಿತಗಳಲ್ಲಿ, ಬಂಧುಪ್ರೇಮ-ರಾಷ್ಟ್ರಧರ್ಮಗಳಲ್ಲಿ ಕಲಹವೆದ್ದಾಗ ಬುದ್ಧಿ
ವಂತನು ಈ ಕಲಹವನ್ನು ಆತ್ಯಂತಿಕ ದೃಷ್ಟಿಯಿಂದ ಬಗೆಹರಿಸುವನು.
(ಆತ್ಯಂತಿಕ ದೃಷ್ಟಿಯೆಂದರೆ ಆತ್ಮಕಲ್ಯಾಣ); ಅದರ ಮೇಲೆ ಲಕ್ಷ್ಯವಿಟ್ಟು
ಅವನು ತೊಡಕು ಬಿಡಿಸುವನು, ಒಗಟು ಒಡೆಯುವನು. ಅವನು ಬಿಡಿಸಿದ
ತೊಡಕಿನ, ಅವನು ಒಡೆದ ಒಗಟಿನ ಹತೋಟಿಯೇ ಅನುಕರಣೀಯವಾದ
ಆಚರಣೆಯಾಗುವದರಿಂದ "ಆಚಾರಪ್ರಭವೋ ಧರ್ಮ"ವೆಂದು ಹೇಳಲಾಗಿದೆ.

### ಮಾನವನು ಸಮಾಜಜೀವಿ

"ಧಾರಣಾತ್ ಧರ್ಮ"ವೆಂದು ಮತ್ತೊಂದು ವ್ಯಾಖ್ಯೆ ಇರುವದು. ಇಲ್ಲಿ
ಸಮಾಜದ ಸ್ಥೈರ್ಯವನ್ನು ಉದ್ದೇಶಿಸಿ ಈ ವ್ಯಾಖ್ಯೆಯನ್ನು ಮಾಡಿರುವದು.
ಮಾನವನು ಸಾಮಾಜಿಕ ಪ್ರಾಣಿಯೆಂಬಲ್ಲಿ ಯಾವ ಸಂದೇಹವೂ ಇಲ್ಲ.
ಅವನಲ್ಲಿರುವ ರಜೋಗುಣೋತ್ಕರ್ಷೆಯೆ ಇದಕ್ಕೆ ಬಲವಾದ ಸಾಕ್ಷಿ; ರಜೋ
ಗುಣವು ಅಹಂ ತತ್ವದ ದ್ಯೋತಕವಾಗಿರುವದರಿಂದಲೂ ನಾನು-ನೀನೆಂಬ
ಭೇದಕ್ಕೆ ವ್ಯವಹಾರವು ಮೂಲವಾಗಿರುವದರಿಂದಲೂ ಮಾನವನು ಸಾಮಾ
ಜಿಕ ಪ್ರಾಣಿಯೆನಿಸಿಕೊಂಡನು. ಅವನು ಸಮಾಜದಲ್ಲಿ ಹುಟ್ಟಿ, ಸಮಾಜದಿಂದ

ನೆರವನ್ನು ಪಡೆದು, ಸಮಾಜದೊಡನೆ ಅನೇಕ ಬಗೆಯ ಸಂಬಂಧಗಳನ್ನಿಟ್ಟು ಕೊಳ್ಳಬೇಕಾಗುವದು. ಈ ಸಂಬಂಧಗಳು ಈ ಕಟ್ಟುಗಳು ಸಡಿಲಾಗದಂತೆ ಇವುಗಳನ್ನು ಯಾವಾಗಲೂ ಎತ್ತಿಹಿಡಿಯಬೇಕಾದರೆ ಮಾನವನು ತನ್ನ ಕರ್ತವ್ಯಕರ್ಮವೇನೆಂಬದನ್ನು ಚನ್ನಾಗಿ ಅರಿತಿರಬೇಕು. ಕರ್ತವ್ಯಕರ್ಮ ವೆಂದರೆ ಸಮಾಜದಲ್ಲಿರುವ ಬೇರೆ ಬೇರೆ ಅಂಗಗಳಿಗನುಗುಣವಾಗಿ ತಾನು ತೀರಿಸಬೇಕಾದ ಋಣವು. ತಾನು, ಕುಟುಂಬ, ಸಮೂಹ, ದೇಶ, ರಾಷ್ಟ್ರ, ಮಾನವಸಂತತಿ ಹೀಗೆ ಸಮಾಜದಲ್ಲಿ ಏರಪಾವಟಗೆಗಳುಂಟು. ತನ್ನ ಏಳಿಗೆಗಾಗಿ, ಕುಟುಂಬದ ಸ್ವಾಸ್ಥ್ಯಗಾಗಿ, ಸಮೂಹದ ಸ್ಥೈರ್ಯಕ್ಕಾಗಿ, ದೇಶದ ರಕ್ಷಣೆಗಾಗಿ, ರಾಷ್ಟ್ರದ ಪೋಷಣೆಗಾಗಿ ಮಾನವಸಂತತಿಯ ಮೇಲ್ಮೆಗಾಗಿ ಮಾನವನು ಮಾಡಬೇಕಾದ ಕರ್ತವ್ಯಗಳು, ಅವನು ತೀರಿಸಬೇಕಾದ ಋಣಗಳು ತೃಣಪ್ರಾಯವೂ ಕ್ಷಣಮಾತ್ರವೂ ಆಗಿರದೆ ಪರ್ವತಪ್ರಾಯ ವಾಗಿವೆ. ಕರ್ತವ್ಯಗಳನ್ನು ಪೂರೈಸಬೇಕಾದರೆ ನಾಗರಿಕ ಹಕ್ಕು ಬಾಧ್ಯತೆಗಳು ಅವಶ್ಯವಾಗಿ ಬೇಕು. ಕರ್ತವ್ಯಪಾಲನೆ ಇಲ್ಲದೆ ಬರಿಯ ಹಕ್ಕುಬಾಧ್ಯತೆಗಳು ಸಮಾಜಧಾರಣೆಗೆ ಸಹಾಯ ಮಾಡಲಾರವು. ಅಂದು ನೋಡಿದರೆ ಕರ್ತವ್ಯಕರ್ಮಗಳಿಗೂ, ಹಕ್ಕು ಬಾಧ್ಯತೆಗಳಿಗೂ ವಿರೋಧವಿಲ್ಲ. ಕರ್ತವ್ಯ ಪಾಲನೆಯೇ ಕಡುತರವಾದ ಹಕ್ಕಾಗಿ ಸಮಾಜ ಜೀವನದ ಹಾಸು-ಹೊಕ್ಕಾಗಿ ಪರಿಣಮಿಸುವದು.

**ಸಂಸ್ಕೃತಿಯೆಂದರೇನು ?**

"ಚೋದನಾಲಕ್ಷಣವೆ ಧರ್ಮ"ವೆಂದು ಮಗದೊಂದು ವ್ಯಾಖ್ಯೆ ಇರುವದು. ಈ ವ್ಯಾಖ್ಯೆಯನ್ನು ತಮೋಗುಣವನ್ನುದ್ದೇಶಿಸಿ ಎಂದರೆ ತಮೋ ವಿಶಿಷ್ಟವಾದ ಮನೋವೃತ್ತಿಗನುಗುಣವಾಗಿ ಮಾಡಿರುವುದಾಗಿ ಕಂಡು ಬರುವದು. ತಮೋಗುಣಪ್ರಧಾನವಾದ ಆಹಾರ, ನಿದ್ರಾ, ಭಯ, ಮೈಥುನಾ ದಿಗಳು ಮಾನವನಿಗೂ ಪಶುವಿಗೂ ರಾಗತಃ ಪ್ರಾಪ್ತವಾಗಿರುತ್ತವೆ. ಸ್ವಭಾವ ಜನ್ಯವಾದ ಈ ವೃತ್ತಿಗಳಿಗೆ ಮಾನವನು ಅನುವು ಕೊಟ್ಟನೆಂದರೆ ಅವನಿಗೂ ಪಶುವಿಗೂ ಯಾವ ಅಂತರ ಉಳಿಯುವದಿಲ್ಲ. ಹಾಗಾದರೆ ಮಾನವನ ವೈಶಿಷ್ಟ್ಯವೆಲ್ಲಿ ? ಸ್ವಭಾವತಃ ಪ್ರಾಪ್ತವಾದ ಈ ಸ್ವೈರಮನೋವೃತ್ತಿಗಳಿಗೆ

ಮರ್ಯಾದೆಯನ್ನು ಹಾಕುವದರಲ್ಲಿದೆ! ಚೋದನೆಯೆಂದರೆ ಚಬಕದ ಭಯ ವೆಂದರ್ಥ. ಈ ಚಬಕದ ಭಯಕ್ಕಾಗಿ ಅವನು ತನ್ನ ಸ್ವೈರಮನೋವೃತ್ತಿ ಗಳಿಗೆ ಮರ್ಯಾದೆಯನ್ನು ಹಾಕಿ ಮಾನವಸ್ವಭಾವಕ್ಕೆ ಸರಿಯಾಗಿ ವರ್ತಿ ಸುವನು. ಸಮಾಜ ಜೀವನದಲ್ಲಿ ಮಾನವನಿಗೆ ಮನಬಂದಂತೆ ವರ್ತಿಸಲು ಸಾಧ್ಯವಿಲ್ಲ. ತನ್ನ ಮನೋಮಂಡಲದಲ್ಲಿ ಮೂಡುವ ಸಹಜಪ್ರವೃತ್ತಿಗಳನ್ನು ಇದ್ದಕ್ಕಿದ್ದಂತೆಯೇ ತೃಪ್ತಿಗೊಳಿಸುವದು ಸಾಧ್ಯವಿಲ್ಲ. ಸಮಾಜದ ಭಯ ದಿಂದಲೋ, ಸರಕಾರದ ಭಯದಿಂದಲೋ ಇಲ್ಲವೆ ಸದಸದ್ವಿವೇಕದ ಭಯ ದಿಂದಲೋ ಸಹಜ ಪ್ರವೃತ್ತಿಗಳನ್ನು ಇದ್ದಕ್ಕಿದ್ದಂತೆ ಪ್ರಕಟಗೊಳಿಸದೆ ಅವು ಗಳನ್ನು ತಿದ್ದಿ ತೀಡಲು ಪ್ರಯತ್ನಿಸುವನು. ಅವನ ಈ ಪ್ರಯತ್ನವೇ ಕಲೆ ವಿಜ್ಞಾನ ಧರ್ಮಗಳಲ್ಲಿ ದಿಟವಾಗಿ ಪುಟಗೊಂಡು ಸಂಸ್ಕೃತಿಯೆನಿಸಿಕೊಳ್ಳುವದು.

**ವಿವಿಧ ವಿಚಾರಸರಣಿ**

ಇಂಥ ಸಂಸ್ಕೃತಿಯೆ ವಿಶ್ವಧರ್ಮವೆಂದು ಕೆಲವು ಪಾಶ್ಚಿಮಾತ್ಯ ಪಂಡಿತರು ಪ್ರತಿಪಾದಿಸುವರು. ಆದರೆ ಸಂಸ್ಕೃತಿಯು ಜಡವಾದ ಪ್ರಕೃತಿಯ ಕಾರ್ಯವಲ್ಲ. ಅದು ಚೇತನ ಪುರುಷನ ಚಳಕ. ತ್ರಿಗುಣಾತ್ಮಕ ಪ್ರಕೃತಿಯಾಗಲಿ, ತರಲ ತರವಾದ ಪುದ್ಗಲವಾಗಲಿ ಪ್ರಪಂಚದ ಮೂಲವೆಂದು ಭೌತಿಕವಾದಿಗಳ ಬಗೆವರು. ಪುದ್ಗಲವೆಂದರೆ ಅಣುರೂಪವಾಗಿಯೂ, ಸ್ಕಂದರೂಪವಾಗಿಯೂ ಇರುವ ಭೂತ ಭೌತಿಕ ಪ್ರಪಂಚಕ್ಕೆ ಮೂಲ ಕಾರಣವಾದ ದ್ರವ್ಯವು. ಕೂಡಿ ಅಗಲುವ ಅಗಲಿ ಕೂಡುವ ಸ್ವಭಾವವಿರುವದರಿಂದ "ಪೂರಯಂತಿ ಗಲಂತಿ" ಎಂಬ ವಿವರಣೆಯಿಂದ ಪುದ್ಗಲವೆಂದು ಹೆಸರು ಬಂದಿದೆ. ಭೌತಿಕವಾದಿಗಳು ಪ್ರತ್ಯಕ್ಷದಿಂದ ತಿಳಿಯಲ್ಪಡುವ ವಸ್ತುಗಳನ್ನು ನಂಬುವರೆ ವಿನಹ ಇಂದ್ರಿಯ ಗಳಿಗೆ ಗೋಚರವಲ್ಲದ ವಸ್ತುಗಳನ್ನು ಅವರು ನಂಬುವದಿಲ್ಲ. ಪುಣ್ಯ-ಪಾಪ ಗಳು ಮಾನವನ ಸುಖದುಃಖಗಳಿಗೆ ಕಾರಣವಲ್ಲ. ಆಯಾ ವಸ್ತುಸ್ವಭಾವವೇ ಕಾರಣವೆಂದು ಅವರು ತಿಳಿಯುವರು. ನವಿಲುಗರಿಯ ಕಣ್ಣುಗಳು, ಕಮಲ ಕೇಸರಿಗಳ ವೈಚಿತ್ರ್ಯವು, ಮುಳ್ಳುಗಳ ತೀಕ್ಷ್ಣವಾದ ಅಗ್ರಭಾಗಗಳು, ಲಿಂಬೆ ಹಣ್ಣು ಮೊದಲಾದ ಫಲಗಳಲ್ಲಿರುವ ರುಚಿ ವೈಚಿತ್ರ್ಯವು ಹೇಗೆ ಸ್ವಭಾವ ಸಿದ್ಧವೋ ಹಾಗೆಯೇ ಮಾನವನ ಸುಖದುಃಖಗಳಿಗೆ ದೇಹಾದಿ ವಸ್ತು ಸ್ವಭಾವವೇ ಕಾರಣವೆಂದು ಅವರ ಮತ. ಪ್ರತ್ಯಕ್ಷ ಗೋಚರವಾದ ನೆಲ,

ನೀರು, ಬೆಂಕಿ, ಗಾಳಿಯೆಂಬ ನಾಲ್ಕು ತತ್ವಗಳ ಪರಿಣಾಮದಿಂದಲೇ ತೋರುವ ತೋರಿಕೆಯೆಲ್ಲ ವೈವೆತ್ತಿರುವದು. ಆ ನಾಲ್ಕು ಭೂತಗಳ ಸಂಯೋಗವಿಶೇಷದಿಂದ ಜ್ಞಾನವೆಂಬ ಚೈತನ್ಯಶಕ್ತಿ ಹೊರಬೀಳುವದು. ತಾಂಬೂಲ ರಸದಲ್ಲಿರುವ ಕೆಂಪುಬಣ್ಣದಂತೆಯೂ, ಮರದ ಚಕ್ಕೆಗಳ ಪಾಕದಲ್ಲಿರುವ ಮದ್ಯದಂತೆಯೂ ಚೇತನಶಕ್ತಿ, ಭೌತಶಕ್ತಿಯಂತೆಯೇ ಹೊರತು ಬೇರೆ ತತ್ವವಲ್ಲ. ಈ ಭೌತಶಕ್ತಿಯೇ ಆತ್ಮ. ಅದು ಮನಸ್ಸು ಸುಖ, ದುಃಖ, ಇಚ್ಛೆ, ಕಾಮ, ಕ್ರೋಧ ಮೊದಲಾದ ರೂಪಗಳನ್ನು ತಳೆಯುವದು. ಸ್ಥೂಲ ವಸ್ತುಗಳಾದ ಭೂತಗಳು ಬೇರೆ ಬೇರೆಯಾದರೆ ಈ ಶಕ್ತಿಯೆಂಬ ಚೈತನ್ಯವು ಅಡಗಿಹೋಗುವದು. ಭೂತಗಳ ಚಲನೆಯೆ ಜ್ಞಾನವೆಂದು ಬಗೆವ ಕಾರಣ ಭೂತಚೈತನ್ಯವಾದವೆಂದು ಇದಕ್ಕೆ ಹೆಸರು ಬಂದಿದೆ. ಅಲ್ಲದೆ ಭೌತಿಕವಾದಕ್ಕೆ ಹಲವು ಪರ್ಯಾಯ ನಾಮಗಳುಂಟು. ಪ್ರತ್ಯಕ್ಷವಾದ ಕಾರಣಶಕ್ತಿಯೆಂಬ ವಸ್ತುಸ್ವಭಾವದಿಂದಲೆ ಪರಿಣಾಮಗಳು ಜನಿಸುವದರಿಂದ ಇದಕ್ಕೆ ಸ್ವಭಾವವಾದವೆಂದು ಹೆಸರು. ಒಂದು ಬೀಜವು ಭೂಮಿಯಲ್ಲಿ ಬಿದ್ದರೆ ಬೀಜಶಕ್ತಿಯಿಂದಲೆ ಮೊಳಕೆಯಾಗಿ ಎಲೆಗಳಾಗಿ ದಂಟಾಗಿ ಹೂವಾಗಿ ಮಿಡಿಯಾಗಿ ಹಣ್ಣಾಗುತ್ತದೆ. ಪುರುಷನ ಬುದ್ಧಿಪೂರ್ವಕ ಇಚ್ಛೆ–ಪ್ರಯತ್ನಗಳಿಂದ ಈ ಪರಿಣಾಮ ಪರಂಪರೆ ಉಣ್ಮುವದಿಲ್ಲವಾದ್ದರಿಂದ ಇದಕ್ಕೆ ನಿರಪೇಕ್ಷಕವಾದವೆನ್ನುವರು. ಮಾನವನ ಪ್ರಾರ್ಥನೆಯಿಲ್ಲದೆ ಅವನಿಗೆ ತಿಳಿಯದೆ ಸುಖದುಃಖಗಳು ಅನುಭವ ಗೋಚರವಾಗುವದರಿಂದ ಪ್ರಾಸಂಗಿಕವಾದವೆಂದೂ, ವಸ್ತುಗಳಿಗೆ ದೇಶ ನಿಯಮದ ಹಾಗೆ ಕಾಲ ನಿಯಮ ಪ್ರಾಪ್ತವಾದರೆ ಕಾದಾಚಿತ್ಕವಾದವೆಂದೂ, ಇವೆಲ್ಲವು ಸೇರಿದರೆ ಆಕಸ್ಮಿತಾವಾದವೆಂದೂ ಬಗೆಬಗೆಯ ಹೆಸರುಗಳುಂಟು ಈ ಭೌತಿಕವಾದಕ್ಕೆ.

### ಅಧ್ಯಾತ್ಮವಾದ

ವಸ್ತು ಸ್ವಭಾವ ಶಕ್ತಿಯಿಂದಲೆ ವಿಶ್ವದ ಸಕಲ ವ್ಯವಹಾರಗಳು ನಡೆಯುತ್ತವೆಂದು ಭೌತಿಕವಾದವು ಬೋಧಿಸಿದರೆ ಅವೆಲ್ಲ ಪುರುಷನ ಸಂಕಲ್ಪದಿಂದ ನಡೆಯುತ್ತವೆಂದು ಅಧ್ಯಾತ್ಮವಾದವು ಸಾರುತ್ತದೆ. ಪೃಥ್ವಿ, ಜಲ, ತೇಜ, ವಾಯುವೆಂಬ ನಾಲ್ಕು ತತ್ವಗಳನ್ನು ಬೇರೆ ಬೇರೆಯಾಗಿ ಏತಕ್ಕೆ

ನೊರೆ ತೆರೆಗಳು ಸಮುದ್ರದ ಜಲವೇ ಆದರೂ ಆ ನೊರೆ ತೆರೆಗಳೆ ಇಡಿಯ ಸಮುದ್ರವಲ್ಲ. ಅವುಗಳ ತಾಕಲಾಟವು ಕೇವಲ ಸಮುದ್ರದ ಮೇಲ್ಭಾಗದಲ್ಲಿರುವದು. ತುಸು ಆಳವಾಗಿ ಸಮುದ್ರವನ್ನು ಹೊಕ್ಕು ನೋಡಿದರೆ ಅಲ್ಲಿ ಗಹನವಾದ, ಗಂಭೀರವಾದ, ಆಳವಾದ, ಅಪಾರವಾದ ಶಾಂತಿಯು ಕಂಡು ಬರುವದು. ಹಾಗೆಯೆ ಈ ಸೃಷ್ಟಿಯ ವ್ಯವಹಾರಗಳೆಲ್ಲ ಕ್ಷಣಶಃ ಪರಿವರ್ತನಶೀಲವಿದ್ದು ನಿಯಮಬದ್ಧವಾದರೂ ಇದರ ಅಂತರಂಗವನ್ನು ಭೇದಿಸಿ ನೋಡಿದರೆ ಪ್ರಸನ್ನವಾದ ಪ್ರಶಾಂತವಾದ ಸತ್ಯವು ಕಂಗೊಳಿಸುವದು ವಿಶ್ವದ ಸ್ವಭಾವವು ವಿಚಿತ್ರವಾಗಿ ಅನೇಕ ಮುಖವಾಗಿದ್ದರೆ ಅದರ ಸ್ವಧರ್ಮವು ವಿಶೇಷವಾಗಿ ಏಕ ಮುಖವಾಗಿದೆ. ಸೃಷ್ಟಿಯು ನಾನಾತ್ವವನ್ನು ಹೊಂದಿ ಮನಕ್ಕೆ ಆನಂದವನ್ನು ಉಣ್ಣಿಸಿದರೆ ಸತ್ಯವು ಅದ್ವಿತೀಯವಾಗಿ ಶಾಂತಿಯಿಂದ ಆತ್ಮನನ್ನು ತಣಿಸುವದು. ಆದುದರಿಂದ ವಿಜ್ಞಾನ-ತತ್ವಜ್ಞಾನಗಳ ಸೃಷ್ಟಿ-ಸತ್ಯಗಳ ಆನಂದ-ಶಾಂತಿಗಳ ಸಮನ್ವಯವೆ ವಿಶ್ವಧರ್ಮ.

---

# ಬಗೆಯ ಬಾನು

ಹಿಂದು-ಇಂದು-ಮುಂದು ಇವುಗಳ ದಂದುಗಕ್ಕೆ ಈಡಾಗದೆ, ಕಾರ್ಯ ಕಾರಣ ಭಾವಕ್ಕೆ ಎಡೆಯಾಗದೆ ಎಂದೆಂದಿಗೂ ಇರುವ ವಸ್ತುವೆ ಸತ್ಯ ಎನಿಸಿಹುದು. ಕಾಲಕರ್ಮಗಳನ್ನು ಮೀರಿ ಅವಿನಾಶಿಯಾಗಿ ಕಂಗೊಳಿಸುವ ಈ ವಸ್ತುವಿಗೆ ಅಕ್ಷರವೆಂತಲೂ ಹೆಸರು. ಹಿಂದು-ಇಂದು-ಮುಂದು ಇವು ಗಳ ದಂದುಗಕ್ಕೆ ಒಳಗಾಗಿ ಕಾರ್ಯಕಾರಣಭಾವದ ಕಟ್ಟು:ನಿಟ್ಟಿಗೆ ಅಂಕಿತ ವಾಗಿರುವ ವಿಷಯವೇ ಸೃಷ್ಟಿಯೆಂದು ಹೇಳಲಾಗುವದು. ಕಾಲಕರ್ಮಾನು ಸಾರವಾಗಿ ಲೀಲೆಯಾಗಿ ತೋರುವ ಈ ಸೃಷ್ಟಿಗೆ ಕ್ಷರವೆಂತಲೂ ಕ್ಷಣ ಕ್ಷಣಕ್ಕೆ ಬದಲಾಗುವ ಈ ವಿಷಯ ಜಾಲಕ್ಕೆ ತೋರಿಕೆಯೆಂತಲೂ ಹೆಸರು. ಸೃಷ್ಟಿಯ ಘಟಕವೆನಿಸಿದ ಮಾನವನಿಗೆ ಸೃಷ್ಟಿಯ ಜ್ಞಾನವು ಅವನ ಇಂದ್ರಿಯ ಗಳ ಮುಖಾಂತರವಾಗಿ ಉಂಟಾಗುವದು; ಸತ್ಯದ ಜ್ಞಾನವು ಮಾತ್ರ ಇಂದ್ರಿಯಗಳಿಗೆ ಗೋಚರವಾಗದೆ ಅವನ ಶುದ್ಧವಾದ ಬುದ್ಧಿಗೆ ನಿಲುಕುವದು. ಅಂತೆಯೇ ಅದು 'ಬುದ್ಧಿಗ್ರಾಹ್ಯಂ ಅತೀಂದ್ರಿಯಂ' ಎಂದು ವರ್ಣಿತವಾಗಿದೆ. ಇಂದ್ರಿಯ ಗೋಚರವಾದ ಸೃಷ್ಟಿಯ ಜ್ಞಾನವನ್ನು ಪ್ರತ್ಯಕ್ಷ ಪ್ರಯೋಗ ಗಳಿಂದ ಧೃಡೀಕರಿಸಿಕೊಳ್ಳಬೇಕಾದುದಾಗಿ ನಮಗೆ ಅವಶ್ಯಕವಾದುದು ವಿಜ್ಞಾನ. ಬುದ್ಧಿಗಮ್ಯವಾದ ಸತ್ಯಜ್ಞಾನವನ್ನು ಅನುಮಾನ-ಪ್ರಮಾಣ ಗಳಿಂದ ಅನುಗೆಯ್ಯಬೇಕಾಗುವದು; ಅದಕ್ಕೆ ನಮಗೆ ನೆರವಾಗುವದು ತತ್ವಜ್ಞಾನ. ವಿಜ್ಞಾನವು ಭೌತಿಕ (ಐಂದ್ರಿಕ) ದೃಷ್ಟಿಯನ್ನೇ ಬೆಳಸಿಕೊಂಡು ಹೋಗಿ ಕೊನೆಯಲ್ಲಿ ಎಲ್ಲಕ್ಕೂ ಜಡವಸ್ತುವೇ ಕಾರಣವೆಂದು ವಾದಿಸುವದು. ತತ್ವಜ್ಞಾನವು ಬೌದ್ಧಿಕ ದೃಷ್ಟಿಯನ್ನು ಆಧಾರವಾಗಿಟ್ಟುಕೊಂಡು ಎಲ್ಲಕ್ಕೂ ಚೈತನ್ಯವೇ ಕಾರಣವೆಂದು ವಾದಿಸುವದು. ಇವೆರಡೂ ವಾದಗಳಿಗೆ ಸಾಮಾನ್ಯವಾಗಿ ಭೌತಿಕವಾದ (Scientific Materialism) ಆತ್ಮಿಕ ವಾದ (Idealistic Monism) ಎಂದು ಹೆಸರು. ಪ್ರಪಂಚವೆಲ್ಲವೂ ಜಡವೆಂದು ಒಂದು ಪಕ್ಷ ವಾದಿಸಿದರೆ, ಅದು ಚೈತನ್ಯಾತ್ಮಕವೆಂದು ಇನ್ನೊಂದು ಪಕ್ಷ ವಾದಿಸುವದು. ಈ ವಾದವು ಪುರಾತನ ಗ್ರೀಕ ತತ್ವಜ್ಞಾನಿ

ಗಳಲ್ಲಿಯೂ ಪ್ರಾಚೀನ ಭಾರತ ತತ್ವವೇತ್ತೃಗಳಲ್ಲಿಯೂ ಕಂಡುಬರುವಂತೆ ಇಂದಿನ ನಾಮಾಂಕಿತ ಶಾಸ್ತ್ರಿಕರಲ್ಲಿಯೂ ವ್ಯಕ್ತವಾಗಿದೆ. ಆದರೆ ಭೇದವಿಷ್ಟೇ: ಇಂದು ವಿಶೇಷವಾಗಿ ಪ್ರಗತಿಯನ್ನು ಹೊಂದಿರುವ ವಿಜ್ಞಾನಕ್ಕೆ ಭೌತಿಕ ಸೃಷ್ಟಿಯೇ ಆಧಾರವಾಗಿರುವದರಿಂದ ಪ್ರಕೃತಿಯು ಕೇವಲ ಜಡವೆಂದು ಅವರು ಸಿದ್ಧಾಂತಗೊಳಿಸಿದರು; ಅದರಿಂದಾಗಿ ಅವರಿಗೆ ವಿಜ್ಞಾನಿಗಳೆಂದೂ ತಮ್ಮಬೌದ್ಧಿಕ ದೃಷ್ಟಿಯೇ ಮೂಲವೆಂದು ಸಾರಿ ಪ್ರಕೃತಿಯೆಲ್ಲವೂ ಚೈತನ್ಯ ಮಯವೆಂದು ಚಿತ್ತರಿಸಿದವರೆಲ್ಲ ತತ್ವವೇತ್ತರೆಂದೂ ಪರಿಗಣಿಸಲ್ಪಟ್ಟಿದ್ದಾರೆ. ವಸ್ತುತಃ ಅವರವರು ಅಂಗೀಕರಿಸುವ ಪ್ರಮಾಣಕ್ಕನುಸರಿಸಿ ಇವೆರಡೂ ಭೇದಗಳು ತಲೆದೋರುವದು ಸ್ವಾಭಾವಿಕವಾದುದೆ! ಆದರಂತೆ ಈ ಭೇದಕ್ಕನುಗುಣವಾಗಿ ಇಬ್ಬಗೆಯ ವಾದವೇಳುವುದಾದರೂ ಸಹಜವಾದುದೆ! ಆದರೆ ಕಾಲಕಾಲಕ್ಕೆ ಈ ಎರಡು ವಾದಗಳ ಸಮನ್ವಯಕ್ಕಾಗಿ ಪ್ರಯತ್ನಗಳು ನಡೆಯುತ್ತ ಬಂದುದು ಗಮನಿಸಬೇಕಾದ ಮಾತು. ಈ ಪ್ರಯತ್ನಗಳು ಈಗಲೂ ನಡೆಯುತ್ತಿವೆ. ಆದರೂ ಮಾನವನಿಗೆ ಸಮನ್ವಯ ದೃಷ್ಟಿಯು ಸುಲಭಸಾಧ್ಯವಲ್ಲದ್ದರಿಂದ ಇವೆರಡರಲ್ಲಿ ಭೇದವು ಉಳಿದಿದೆ. ಹಾಗೆಯೇ ವಾದವು ಮೊಳೆತು ಬೆಳೆದಿದೆ. ಈ ಭೇದ-ವಾದಗಳ ನೆಲೆ-ಬೆಲೆಯು ಇಂದಿನ ಪಾಶ್ಚಿಮಾತ್ಯ ತತ್ವವೇತ್ತರಲ್ಲಿ ಗಾಢವಾಗಿ ಒಡೆದು ಮೂಡಿದೆ.

ಬಾಹ್ಯ ಜಗತ್ತನ್ನು ಅವಗ್ರಹದ (Perception) ಪರಿಮಿತಿಗೆ ಇಳಿಸಿ ಬರ್ಕಲೆ ಎಂಬಾತನು ಸೃಷ್ಟಿಯು ಸತ್ಯವೆಂಬ ವಿಜ್ಞಾನದ ಸಿದ್ಧಾಂತವನ್ನು ಸಡಿಲು ಮಾಡಿದನು. ನಮಗಾಗುವ ಜ್ಞಾನವೆಂದರೆ ಬಾಹ್ಯಸೃಷ್ಟಿಯ ಜ್ಞಾನ ವಲ್ಲ. ಆ ಪದಾರ್ಥಗಳ ಸನ್ನಿಕರ್ಷದಿಂದುಂಟಾಗುವ ಪರಿಣಾಮಗಳು ಮಾತ್ರ ನಮಗೆ ತಿಳಿಯುವವೆಂದು ಅವನು ವಾದಿಸಿದನು; ಈ ಪರಿಣಾಮಗಳ ತಿಳಿವಿ ಕೆಗೆ ಅವಗ್ರಹ ಎಂದು ಕರೆದನು. ಹಾಗೆಯೇ ಕಾರ್ಯಕಾರಣಭಾವವನ್ನು ಕೇವಲ ಕಲ್ಪನೆಗಳ ಸಂಗಮವೆಂದು ತಿಳಿಸಿ ಹ್ಯೂಮ ಎಂಬ ಇನ್ನೊಬ್ಬ ಪಾಶ್ಚಾತ್ಯ ತತ್ವಜ್ಞಾನಿಯು ಭೂತಕಾಲವನ್ನು ಭಾವಿಸುವದಾಗಲಿ, ಭವಿಷ್ಯತ್‌ಕಾಲವನ್ನು ಬಗೆಯುವದಾಗಲಿ ಅಸಾಧ್ಯವೆಂದು ವಾದಿಸಿದನು.

ಭೌತಿಕವಾದ ಮತ್ತು ಆತ್ಮಿಕವಾದ ಇವೆರಡೂ ಕಾಲಪ್ರವಾಹದಲ್ಲಿ ತೇಲಿ ಬರುವ ಎಲ್ಲ ಘಟನೆಗಳು ಪೂರ್ವ ವ್ಯವಸ್ಥಿತವೆಂದೂ ಮತ್ತು ಪೂರ್ವ

ನಿಯತವೆಂದೂ ನಂಬುತ್ತವೆ. ಯಾವ ಘಟನೆಯೆ ಜರುಗಿದರೂ ಅದಕ್ಕೆ ಎರಡು ಭಾಗಗಳು; ಒಂದು ಕಾರ್ಯಕಾರಣವನ್ನು ತಿಳಿಸುವ ಬುದ್ಧಿಗಮ್ಯವಾದ ಭಾಗ; ಇನ್ನೊಂದು ಕಾರ್ಯಕಾರಣ ಭಾವವನ್ನು ಮೀರಿ ದೈವಯೋಗವನ್ನು ಸೂಚಿಸುವ ಭಾವಗಮ್ಯವಾದ ಭಾಗ. ಬುದ್ಧಿಗಮ್ಯವಾದ ಭಾಗಕ್ಕೆ ನಿಯಮನ (Law), ಭಾವಗಮ್ಯವಾದ ಭಾಗಕ್ಕೆ ಅದೃಷ್ಟ (Chance) ಎಂಬ ಹೆಸರು. ಈ ಎರಡೂ ಭಾಗಗಳೂ ಒಂದೇ ಒಂದಾದ ಸತ್ಯದ ಎರಡು ಮುಖಗಳಿದ್ದಂತೆ ಹೆಗೆಲ್ ಎಂಬ ಪಾಶ್ಚಿಮಾತ್ಯ ತತ್ವಜ್ಞಾನಿಯು ಸತ್ಯದ ಬುದ್ಧಿಗಮ್ಯವಾದ ಒಂದು ಮುಖವನ್ನು ನಂಬಿದ್ದನು. ಶೋಫೆನಹಾರ ಎಂಬ ಇನ್ನೊಬ್ಬಾತನು ಸತ್ಯದ ಇನ್ನೊಂದು ಮಗ್ಗುಲಾದ ದೈವಯೋಗವನ್ನು ನಂಬಿದ್ದನು. ಆದರೆ ಬೆಲ್‌ಫರ್ಟ ಬ್ಯಾಕ್ಸ ಎಂಬ ಮತ್ತೊಬ್ಬಾತನು ಇವೆರಡು ಸತ್ಯದ ಅಂತರ್ ಬಾಹ್ಯ ಸ್ವರೂಪವೆಂದು ಬಗೆದನು.

ಎಲ್ಲ ಘಟನೆಗಳು ಪೂರ್ವವ್ಯವಸ್ಥಿತ ಹಾಗು ನಿಯತವಾದವುಗಳೆಂದು ನಂಬಿ ಕಾರ್ಯಕಾರಣ ಭಾವವನ್ನವಲಂಬಿಸಿ ವೈಜ್ಞಾನಿಕ ರೀತಿಯಿಂದ ಅವನ್ನೆಲ್ಲ ವಿವರಿಸಿ ಹೇಳಲು ಸಾಧ್ಯವೆಂದು ತಿಳಿಸುವ ಗುಂಪೊಂದುಂಟು. ಅಂತಹ ತಿಳಿವಳಿಕೆಯನ್ನು ತಾಳಿದ ಅವರು ವಿಶ್ವಗತ ಚೈತನ್ಯವನ್ನಷ್ಟೇ ನಂಬಿ, ವಿಶ್ವಾತೀತ ದೇವನನ್ನು ಅಲ್ಲಗಳೆಯುವರು. ಆದರೆ ಎಲ್ಲ ಘಟನೆಗಳನ್ನು ಕಾರ್ಯಕಾರಣ ಭಾವವನ್ನವಲಂಬಿಸಿ ವೈಜ್ಞಾನಿಕ ರೀತಿಯಿಂದಲೇ ಹೇಳಲಿಕ್ಕೆ ಆಗುವದು ಸಾಧ್ಯವಿಲ್ಲವೆಂದೂ, ಕೆಲವು ಘಟನೆಗಳು ದೈವಯೋಗ ನಿರ್ಮಿತವೆಂದೂ ಹೇಳುವವರು ಕೆಲವರುಂಟು; ಅವರು ವಿಶ್ವಾತೀತವಾದ ದೇವನ ಅಸ್ತಿತ್ವವನ್ನು ಒಪ್ಪುವರು. ಹೀಗೆ ನಂಬುಗೆಯನ್ನು ಇಂಬುಗೊಂಡವರು ಭಕ್ತಿಮಾರ್ಗಿಗಳು ಅಥವಾ ದೈವಿಕವಾದಿಗಳು. ವಿಶ್ವಾತೀತವಾದ ಶಕ್ತಿಯೊಂದಿದೆ ಎಂದು ನಂಬಿ ಆ ಶಕ್ತಿಯಿಂದ ನಿಸರ್ಗದ ನಿಯಮಗಳನ್ನು ಮೀರಿ ಅಘಟಿತವಾದ ಅಕಲ್ಪಿತವಾದ ಘಟನೆಗಳು ಜರುಗಬಲ್ಲವೆಂದು ಬಗೆದು, ಆ ಶಕ್ತಿಗೆ ತನ್ನ ಅಂತರಂಗವನ್ನು ತೆರೆದಿಟ್ಟು, ಅದರ ಪ್ರಭೆಯಿಂದ ವ್ಯಕ್ತಿಯ ಕರಣಗಳನ್ನು ಪ್ರಕಾಶಗೊಳಿಸುವದೇ ದೈವಿಕವಾದದ ತಿರುಳು, ಇದೇ ಧರ್ಮದ ಹುರುಳು.

ಭೌತಿಕವಾದದ ಪ್ರತಿಪಾದ್ಯ ವಿಷಯವು ಪ್ರಕೃತಿ ಅಥವಾ ಸೃಷ್ಟಿ

ಯಾದರೆ ಆತ್ಮಿಕವಾದದ ಪ್ರತಿಪಾದ್ಯವಿಷಯವು ಪುರುಷವಾಗಿದೆ. ಪ್ರಕೃತಿ ಅಥವಾ ಸೃಷ್ಟಿ ಎಂದರೆ ಕಣ್ಣಿಗೆ ಕಾಣುವ ಕಲ್ಲು ಮಣ್ಣು ಗಿಡ ಮರ ಮುಂತಾದ ಪದಾರ್ಥಗಳಲ್ಲ. ಕಾಣುವ ಪದಾರ್ಥಗಳ ಬಗೆಗೆ ನಮ್ಮ ಜ್ಞಾನೇಂದ್ರಿಯಗಳಿಂದುಂಟಾಗುವ ಜ್ಞಾನವೇ ಸೃಷ್ಟಿಯು ಅಥವಾ ಪ್ರಕೃತಿಯು. ಸೃಷ್ಟಿಯನ್ನರಿಯುವ ದೃಷ್ಟಾರನು,ಪ್ರಕೃತಿಯನ್ನರಿಯುವ ಪುರುಷನು ಜ್ಞಾತಾ ಎಂದೆನಿಸಿಕೊಳ್ಳುತ್ತಾನೆ. ಪ್ರಕೃತಿ-ಪುರುಷ, ಜ್ಞಾನ-ಜ್ಞಾತಾ ಇವುಗಳನ್ನು ಮೀರಿ, ಆದರೂ ಇವುಗಳಿಗೆ ಆಧಾರವಾಗಿ ಜ್ಞೇಯ ಅಥವಾ ಪರಬ್ರಹ್ಮ ಪರ ವಸ್ತು ಎಂಬುದೊಂದಿದೆ. ಅದೇ ದೈವಿಕವಾದದ ಪ್ರತಿಪಾದ್ಯವಿಷಯವು. ಪ್ರಕೃತಿ ಪುರುಷ ಪರಬ್ರಹ್ಮ ಅಥವಾ ಜಗತ್ತು ಜೀವ ಈಶ್ವರ ಇಲ್ಲವೆ ಜ್ಞಾನ ಜ್ಞಾತಾ ಜ್ಞೇಯ ಎಂಬ ತ್ರಿಪುಟಿಯು ತತ್ವಜ್ಞಾನದ ಸೊತ್ತು. ಆದರೂ ತತ್ವ ವೇತ್ತರಲ್ಲಿ ಈ ತ್ರಿಪುಟಿಯ ಬಗೆಗೆ ಒಮ್ಮತವಿಲ್ಲ. ಕೆಲವರು ಈ ಮೂರೂ ಮೂಲತಃ ಒಂದೇ ಇರುತ್ತವೆಂದೂ, ಇನ್ನು ಕೆಲವರು ಜೀವ ಜಗತ್ತುಗಳು ಪರಮೇಶ್ವರನಿಂದ ಮೂಲದಲ್ಲಿಯೇ ಸ್ವಲ್ಪ ಅಥವಾ ತೀರ ಭಿನ್ನವಾಗಿ ಇರು ತ್ತವೆಂದೂ ತಿಳಿಯುತ್ತಾರೆ. ಆದರೆ ಜೀವ ಜಗತ್ತುಗಳ ವ್ಯವಹಾರವೆಲ್ಲ ಪರ ಮಾತ್ಮನ ಇಚ್ಛೆಯಿಂದ ನಡೆಯುತ್ತವೆಂಬ ಸಿದ್ಧಾಂತವು ಎಲ್ಲರಿಗೂ ಸಮಾನ ವಾಗಿದೆ. ಈ ಮೂರೂ ವಸ್ತುಗಳ ಸ್ವರೂಪವು ಮೂಲತಃ ಆಕಾಶದಂತೆ ಏಕವೂ, ಅಖಂಡವೂ ಆಗಿರುವದೆಂದು ನಂಬುವವರೇ ಅದ್ವೈತಿಗಳು. ಜಡಚೈತನ್ಯಗಳ ಐಕ್ಯವಾಗುವದು ಅಸಂಭವನೀಯವಾದುದು; ಅದರಿಂದ ಅವು ಭಿನ್ನವಾ ಗಿಯೇ ಉಳಿಯುವವೆಂದು ನಂಬುವವರೇ ದ್ವೈತಿಗಳು. ದಾಳಿಂಬ ಹಣ್ಣಿನಲ್ಲಿಯ ಕಾಳುಗಳು ಅನೇಕವಾಗಿದ್ದರೂ ಹಣ್ಣಿನ ಏಕತ್ವಕ್ಕೆ ಬಾಧೆ ಬರದ ಹಾಗೆ ಜೀವ ಜಗತ್ತುಗಳು ದೇವನಲ್ಲಿ ಕೂಡಿದ್ದರೂ ಅವು ದೇವನಿಂದ ಭಿನ್ನವಾಗಿಯೇ ಇವೆ ಎಂದು ಭೇದಾಭೇದ ಸ್ಥಿತಿಯನ್ನು ಒಪ್ಪುವವರೇ ವಿಶಿಷ್ಟಾದ್ವೈತಿಗಳು. ಜೀವ ಜಗತ್ತುಗಳ ವ್ಯವಹಾರವೆಲ್ಲ, ದೇವನ ಇಚ್ಛಾಮಾತ್ರದಿಂದ, ಸಂಕಲ್ಪ ಶಕ್ತಿಯಿಂದ ನಡೆಯುವವೆಂದೂ ಆ ಸಂಕಲ್ಪ ಶಕ್ತಿಯು ದೇವನಲ್ಲಿ ಅವಿನಾಭಾವ ಸಮ ರಸದಿಂದ ಅಡಗಿರುವದೆಂದೂ ಆದುದರಿಂದ ದೇವನು ಶಕ್ತಿವಿಶಿಷ್ಟನೆಂದೂ ಬಗೆಯುವವರೇ ಶಕ್ತಿ ವಿಶಿಷ್ಟಾದ್ವೈತಿಗಳು. ದೇವ ಜೀವರ ಸಾಮರಸ್ಯವನ್ನು

ಸಂಕಲ್ಪ ಶಕ್ತಿಯ ನೆರವಿನಿಂದ ಸಾಧಿಸುವದೇ ಯೋಗ. ಇದೇ ಅನುಭಾವದ ಅನುವು.

ಸ್ವಾನುಭಾವದ ಸಿದ್ಧಿಗೆ ಬೇಕಾದುದು ನಿರ್ಮಲ ವೃತಿಯು. ಈ ನಿರ್ಮಲ ವೃತಿ ಅಥವಾ ಚೈತನ್ಯಮಯವಾದ ಅರುಹೇ ಜ್ಞಾನವು. ಪಾಶ್ಚಿಮಾತ್ಯರು ಕುರುಹು ಎನಿಸಿದ ಸೃಷ್ಟಿಯಿಂದಲೇ ಅರುಹು ಆಗುವದೆಂದು ಬಗೆಯುವರು. ಆದುದರಿಂದ ಕುರುಹು ಇಲ್ಲದ ಅರುಹಿನ ಸ್ಥಿತಿಯನ್ನು ಅವರು ನಂಬರು, ನೆಚ್ಚರು. ಅರುಹಿನಲ್ಲಿ ಚೈತನ್ಯವಿರುವದರಿಂದ ಅದೇಕೆ, ಅರುಹೇ ಚೈತನ್ಯವಾಗಿರುವದರಿಂದ ಕುರುಹಿಲ್ಲದ ಅರುಹಿನ ಸ್ಥಿತಿಯೊಂದುಂಟೆಂದೂ ಪದಾರ್ಥಗಳಿಲ್ಲದೆ ಪರಿಣಾಮವನ್ನು ಹೊಂದುವದು ಸಾಧ್ಯವೆಂದೂ ಪೌರ್ವಾತ್ಯರು ನಂಬಿದ್ದಾರೆ. ಇಂತಹ ಅರುಹಿನ ಸ್ಥಿತಿಯೇ ಅವರಿಗೆ ಗಮ್ಯವು. ಕುರುಹುಯಿಲ್ಲದ ಈ ಅರುಹು ಪರಮಾತ್ಮನ ಇರುವಿನಿಂದ ಎಂದೆಂದಿಗೂ ಅಗಲದಿರಲಿಕ್ಕೂ ಪರಮಾತ್ಮನ ಇರುವು ಕುರುಹಿನಲ್ಲಿ ಅವತರಿಸಲಿಕ್ಕೂ ಚೈತನ್ಯವೇ ಕಾರಣವಾಗಿದೆ. ಈ ಚೈತನ್ಯವಿಲ್ಲದಿದ್ದರೆ ಪರಮಾತ್ಮನೂ ಜಡವೆನಿಸುವನು; ಪ್ರಪಂಚವು ನಿಸ್ಸಾರವಾಗುವದು; ಬಂಧನವು ಸ್ಥಿರವಾಗುವದು, ಮುಕ್ತಿಯು ಮರೆಯಾಗುವದು; ಮಾಯೆಯು ಮೇಲಾಡುವದು. ಪರಮಾತ್ಮನ ಚೈತನ್ಯದ ಅರುಹಿನ ಈ ಸ್ಥಿತಿಯೇ ಕಾರಣ ಸೃಷ್ಟಿಯು. ಈ ಕಾರಣ ಸೃಷ್ಟಿಯಲ್ಲಿಯೇ ಸ್ಥೂಲ ಸೃಷ್ಟಿಯಲ್ಲಿ ಮೈದೋರ ಬೇಕಾದ ನಾಮ ರೂಪು ಗುಣಗಳು ಬೀಜರೂಪದಿಂದ ಅವ್ಯಕ್ತವಾಗಿ ಇರುತ್ತವೆ. ಕಾರಣಸೃಷ್ಟಿಯಲ್ಲಿಯ ಅವ್ಯಕ್ತವಾದ ಬೀಜವು ಸ್ಥೂಲ ಸೃಷ್ಟಿಯಲ್ಲಿ ಬೆಳೆದು ಮರವಾಗುವದಕ್ಕಿಂತ ಮೊದಲು, ತಾನು ಮೊಳೆತು ರೂಪುಗೊಳ್ಳಲಿಕ್ಕೆ ಕೆಲವು ಪೋಷಕದ್ರವ್ಯಗಳನ್ನು ಹೀರಿಕೊಂಡು, ಬೆಳೆಯುವದಕ್ಕೆ ಅವಕಾಶವನ್ನು ಕಾಣುತ್ತ, ಹಲವು ಕಾಲ ಉಳಿಯಬೇಕಾಗುವದು. ಬೀಜವು ಮೊಳೆತು ಸಸಿಯಾಗಲಿಕ್ಕೆ ಬೇಕಾಗುವ ಪೋಷಕದ್ರವ್ಯಗಳನ್ನು ಒದಗಿಸಿ ಕೊಡುವ ಸೃಷ್ಟಿಯು ಸೂಕ್ಷ್ಮ ಸೃಷ್ಟಿಯೆನಿಸುವದು. ಕಾರಣದಲ್ಲಿ ಏನೊಂದು ಬದಲು, ಏನೊಂದೂ ಬೆಳವಣಿಗೆ ಇಲ್ಲದುದರಿಂದ ಅದು ಸತ್ಯವು. ಆಗತಕ್ಕ ಬದಲು-ಬೆಳವಣಿಗೆಗಳು ಸೂಕ್ಷ್ಮದಲ್ಲಿಯೇ ಆಗುವದರಿಂದ ಅದು ಸ್ವಪ್ನವು.

ಆದ್ದರಿಂದ ಸೂಕ್ಷ್ಮಗಳ ಪರಿಣಾಮವಾದ ಸ್ಥೂಲವು ಪೂರ್ಣ ಸತ್ಯವಲ್ಲ; ಹಾಗೆಯೇ ಅದು ಪೂರ್ಣ ಅಸತ್ಯವೂ ಅಲ್ಲ. ಕಾರಣದಲ್ಲಿ ಮಾತ್ರ ಸೃಷ್ಟಿ ಸಂಹಾರಗಳೇನೂ ಇಲ್ಲ; ಅಳಿವು ಉಳಿವುಗಳ ಸುಳಿವೂ ಇಲ್ಲ.

ಎಂದ ಮೇಲೆ ಜ್ಞಾನವು ಈ ಮೂರು ಸೃಷ್ಟಿಗಳಿಗೆ ಸಂಬಂಧಪಟ್ಟದ್ದು. ಭೌತಿಕ ಅಥವಾ ಸ್ಥೂಲ ಸೃಷ್ಟಿಯ ಜ್ಞಾನವೇ ವಿಜ್ಞಾನವೆನಿಸುವದು. ಈ ಸೃಷ್ಟಿಯ ಸೌಂದರ್ಯವನ್ನು ಮಾನವನು ಸೂಕ್ಷ್ಮವಾದ ಹಾಗು ತೀಕ್ಷ್ಣವಾದ ಇಂದ್ರಿಯಗಳ ಮೂಲಕ ಕಂಡುಕೊಳ್ಳುವನು. ಸೂಕ್ಷ್ಮಸೃಷ್ಟಿಯ ಜ್ಞಾನವೇ ತತ್ವಜ್ಞಾನ ತರ್ಕ ಶಾಸ್ತ್ರಾದಿಗಳು. ಮಾನವನು ಈ ಸೃಷ್ಟಿಯ ಸೊಬಗನ್ನು ತನ್ನ ತೀಕ್ಷ್ಣವಾದ ಬುದ್ಧಿಯ ಬಲದಿಂದ ತಿಳಿದುಕೊಳ್ಳುವನು. ಕಾರಣ ಸೃಷ್ಟಿಯ ಜ್ಞಾನವೇ ಯೋಗವು. ಭಾವಬಲದಿಂದ ಮಾನವನು ಈ ಸೃಷ್ಟಿಯ ಬೆಡಗನ್ನು ಅರಿತುಕೊಳ್ಳುವನು. ಈ ಮೂರರ ಅನುವಿನಿಂದುಂಟಾದ ಸೃಷ್ಟಿ ಮೂರರ ಬಗೆಗೆ ಉಂಟಾದ ಜ್ಞಾನವೇ ನಿಜವಾದ ಜ್ಞಾನವು. ಈ ಸಮನ್ವಯ ಜ್ಞಾನವು ಭೌತಿಕ ಉಪಲಬ್ಧಿ ಬೌದ್ಧಿಕ ಉಪಲಬ್ಧಿ ಭಾವಿಕ ಉಪಲಬ್ಧಿಯಿಂದ ಕೂಡಿದ್ದಾಗಿದೆ. ಶಾಸ್ತ್ರಜ್ಞರು ಭೌತಿಕ ಉಪಲಬ್ಧಿಯಿಂದ ಭಾವಿಕ ಉಪಲಬ್ಧಿಯತ್ತ ಸಾಗಿ, ಕೊನೆಗೆ ಅದರ ತುದಿಗೇರುವರು. ಆದರೆ ಸಾಧಕರು ಭಾವಿಕ ಉಪಲಬ್ಧಿಯಿಂದ ಹೊರಟು ಭೌತಿಕ ಉಪಲಬ್ಧಿಗೆ ಇಳಿಯುವರು. ಭಾವಸೃಷ್ಟಿಯೇ ಸಾಧಕನ ನಿಜವಾದ ರಂಗಸ್ಥಳ, ಗರುಡಿಗೆ ಆವಾಸ. ಭಾವಸೃಷ್ಟಿಯಲ್ಲಿ ಅಡಿಯನ್ನಿಟ್ಟು ಅದರ ನಿಯಮ ನಿಬಂಧನೆಗಳಿಗನುಸರಿಸಿ ವ್ಯವಹರಿಸುವದೇ ಸ್ವಾನುಭಾವವು. ಸ್ವಾನುಭಾವವೆಂದರೆ ಭಾವಸೃಷ್ಟಿಯ ವ್ಯವಹಾರವೇ ಹೊರತು ಬಾಹ್ಯಾಚಾರವಲ್ಲ. ಈ ಭಾವಸೃಷ್ಟಿಯು ಅಖಂಡವೂ ಅಪಾರವೂ ಆರುಹುಮಯವೂ ಆಗಿರುವದು. ಆತ್ಮರುಗಳೆಲ್ಲ ಅಲ್ಲಿ ಒಂದಾಗಿರುವರು; ಒಂದೇ ಸ್ವಯಂ ಜ್ಯೋತಿ ಪರಿಪೂರ್ಣವಸ್ತುವಿನ ಪ್ರಕಾಶಕಿರಣಗಳು. ಅಲ್ಲಿ ಎಲ್ಲ ಗತಿಗಳು ಸತ್ಯ ಮೂರ್ತಿಯಾದ ಪರಮಾತ್ಮನನ್ನು ನಿಲುಕುವ ಮೆಟ್ಟಲುಗಳು; ಅಲ್ಲಿ ಎಲ್ಲ ಅನುಭಾವಗಳು ಅಖಂಡ ಹಾಗು ಆಳವಾದ ಅಳವಿಲ್ಲದ ಆನಂದ ಸಾಗರದ ನೊರೆತೆರೆಗಳು ಬುಡ್ಬುದಗಳು. ಕೇವಲ ಅಪರೋಕ್ಷ

ಜ್ಞಾನವೂ ವಿವೇಕಾನುಭವವೂ ಅಂತರ್‌ದೃಷ್ಟಿಯೂ ಅಂತಃಸ್ಫೂರ್ತಿಯೂ- ಈ ಸೃಷ್ಟಿಯ ಮುಂಗುರುತುಗಳು-ಹೆಗ್ಗುರುತುಗಳು.

ಸ್ಥೂಲ ಸೃಷ್ಟಿಯು ಜಡಸೂರ್ಯನಿಂದ ಬೆಳಗುವಂತೆ ಕಾರಣ ಸೃಷ್ಟಿಯು ಚಿತ್‌ಸೂರ್ಯನಿಂದ ಬೆಳಗುವದು. ಆದರೆ ಈ ಚಿತ್‌ಸೂರ್ಯನ ಸ್ವರೂಪವನ್ನು ಸ್ವಾನುಭಾವದಿಂದಲೇ ಅರಿತು ಅಂಗವಿಸಿಕೊಳ್ಳಬೇಕು. ಖಂಡಿತಾವಸ್ಥೆಯ ಅಜ್ಞಾನದೆಸೆಯಲ್ಲಿಯ ಜೀವನನ್ನು ಅಖಂಡವಾದ ಅರಿವಿನ ಸೀಮೆಯಲ್ಲಿರಿಸಿ ಮರವೆಯ ಪರೆಯನ್ನು ಪರಿಹರಿಸುವನು. ಚಿತ್‌ಸೂರ್ಯನು ನಿಚ್ಚ ಎಚ್ಚರಿಕೆಯ ಯೋಗಬಲದಿಂದ ನಿಜಜ್ಞಾನವ ನೀಡಿ ನಿಜ ಕೈವಲ್ಯಾನಂದವನ್ನುಣ್ಣಿಸುವನು. ಹಲವು ಮತ್ತು ಒಂದರ ಸರಿಯಾದ ಹತ್ತುಗಡಿಯನ್ನು ಅರಿಯದ ಮಂದ ದೃಷ್ಟಿಯ ಮುಸುಕನ್ನು ಹಾರಿಹೊಡೆದು ಹಲವರಲ್ಲಿದ್ದ ಒಂದನ್ನು ಅವಿರಳವಾಗಿ ಗುರುತಿಸುವ ದಿವ್ಯದೃಷ್ಟಿಯನ್ನು ನೀಡುವನವನು. ತೋರುವ ತೋರಿಕೆಗಳ ತಾರತಮ್ಯವನ್ನೂ ವಿವಿಧ ವಸ್ತು ಒಡವೆಗಳ ಶಕ್ತಿಯನ್ನೂ ಸಮಸ್ತ ಜೀವಿಗಳ ಸ್ವಭಾವವನ್ನೂ ಅರಿತು,ಆ ತಾರತಮ್ಯ ಶಕ್ತಿ ಸ್ವಭಾವಗಳಿಗನುಗುಣವಾಗಿ ಸತ್ಯಧರ್ಮಯೋಗದಿಂದಲೇ ವಿವಿಧ ವಸ್ತುಗಳನ್ನೂ ಸಮಸ್ತ ಜೀವಿಗಳನ್ನೂ ಅವನು ಆಳುವನು. ಎಲ್ಲ ತೋರಿಕೆಯೂ ಜೀವನವೂ ಯಾವ ಸ್ವಯಂ ಜ್ಯೋತಿ ಪರಿಪೂರ್ಣ ವಸ್ತುವಿನ ಪ್ರಕಾಶ ಕಿರಣಗಳೋ ಅಂತಹ ವಸ್ತುಗಳನ್ನವನು ಪ್ರಕಟಿಸುವನಾದುದರಿಂದ ಅವನು ನಿಜಸೂರ್ಯನು.

ಈ ಚಿತ್‌ಸೂರ್ಯನ ಪ್ರಕಾಶ ಕಿರಣಗಳೆಂಬ ವಿಚಾರ ತರಂಗಗಳು ಕಲ್ಪಿತ ಮಾಯಾಶಕ್ತಿಯ ಯೋಗದಿಂದ ಪೃಥಃಕ್ಕರಣವನ್ನು ಪಡೆದು ವಕ್ರೀಭವನವಾಗುವದರಿಂದ ವಿಶ್ವವ್ಯಾಪಿಯೂ ಸತ್ಯಮೂರ್ತಿಯೂ ಆದ ಪರವಸ್ತುವು ತಿರುವು ಮುರುವಾಗಿ ತೋರುವದು. ಹೀಗೆ ತಿರುವು ಮುರುವಾಗಿ ತೋರುವ ತೋರಿಕೆಯನ್ನೇ ಸತ್ಯವೆಂದು ನೆಚ್ಚಿದುದರಿಂದ ಸಾರ್ಥಕವಾದ ಸಂಬಂಧವೂ ಸರಿಯಾದ ವ್ಯವಸ್ಥೆಯೂ ಇಲ್ಲದೆ ತಾಳಗೆಟ್ಟು ಕುಣಿದು, ಮೇಳಗೂಡದೆ ಮಣಿದು, ಬಾಳುಗಾಣದೆ ದಣಿದು, ಮಾಯಾ ವಶವರ್ತಿಗಳಾಗಿ ಎಂತೋ ಬಾಳುವರು; ಬಾಳಿ ಬೀಳುವರು ಜೀವರು. ಕಾಲ-ಕಲ್ಪಿತದ

ದ್ವಂದ್ವಗದಿಂದ ಪಾರಾಗಿ, ವಾದಭೇದಗಳಿಂದ ದೂರಾಗಿ, ದೃಷ್ಟಿ ಸೃಷ್ಟಿಗಳ ತೋರಿಕೆಯ ಏಂಗಡಿಕೆಯಿಂದ ಬೇರಾಗಿ ಸ್ವಾನುಭಾವಸಿದ್ಧಿಗೆ ದಾರಿಯನ್ನು ಸುಗಮಗೊಳಿಸುವ ನಿರ್ಮಲ ಮತಿಯು ಮೊಳಕೆಯೊಡೆದು ಬೆಳೆಯಬೇಕಾದರೆ—ಒಟ್ಟಾರೆ, ಮಾನವನ ವ್ಯವಹಾರವೆಲ್ಲ ಸಮತಾಳ ಹೊಂದಿ ಸಮ್ಮೇಳಗೊಂಡು ಬೆಳಗಿ ಅವನು ಬಾಳಬೇಕಾದರೆ ಅವನಲ್ಲಿ ಭಾವದ ಬೆಳಗು ಬಲಿಯಬೇಕು; ಬಗೆಯ ಬಾನಿನಲ್ಲಿ ಆ ಚಿತ್‌ಸೂರ್ಯನ ಚಿತ್‌ಪ್ರಕಾಶವು ಬೆಳಗಬೇಕು; ಅಂದರೆ ಏನೆಲ್ಲವೂ ಪ್ರಕಾಶಿತವಾಗುವದು, ಪಾವನಗೊಳ್ಳುವದು.

---

# ಶರಣರ ದಾರಿ

## ಕಲ್ಯಾಣದ ವೀರ

೧೨ನೆಯ ಶತಮಾನವು ಕನ್ನಡ ಸಾಹಿತ್ಯದ ಕ್ರಾಂತಿಯುಗವಾಗಿದ್ದಂತೆ ಕನ್ನಡ ಜನಜೀವನ ಸಂಸ್ಕೃತಿಗಳ ಕ್ರಾಂತಿಯ ಯುಗವೂ ಆಗಿದ್ದಿತು. ಅಂದಿನ ತಾಳಮೇಳವಿಲ್ಲದ ನಡೆನುಡಿಗಳ ಬಳಕೆಯಿಂದ ಸಮಾಜಜೀವನದಲ್ಲಿ ಒಂದು ಬಗೆಯ ವಿಷಮ ಪರಿಸ್ಥಿತಿಯೇ ತಲೆದೋರಿತ್ತು. ಇದನ್ನು ಕಂಡು ಇದರ ಉತ್ತಮಿಕೆಗಾಗಿ ಸತ್ಪುರುಷರು ಅಲ್ಲಲ್ಲಿ ಹಂಬಲಿಸುತ್ತಿರುವ ಕಾಲದಲ್ಲಿ ವೀರನೊಬ್ಬನು ಉದಿಸಿ ಅವರಲ್ಲಿ ಮುಂದಾಳುವಾದನು. ಕಲ್ಯಾಣ ನಗರದಲ್ಲಿ ರಾಜ್ಯವಾಳುತ್ತಿದ್ದ ಕಲಚೂರ್ಯ ಕುಲದ ಬಿಜ್ಜಳ ರಾಜನಿಗೆ ಮುಖ್ಯಮಂತ್ರಿಯಾದ ಶ್ರೀ ಬಸವಣ್ಣನು ತನ್ನ ನೀತಿನಿರ್ಭರವಾದ ನಡೆಯಿಂದ, ಬುದ್ಧಿಸಾಮರ್ಥ್ಯದಿಂದ, ಭಾವನಾಬಲದಿಂದ, ಲೋಕಕಲ್ಯಾಣದ ಉತ್ಕಟವಾದ ಇಚ್ಛೆಯಿಂದ ಕೂಡಿದವನಾಗಿ ಜೀವನದ ಮಟ್ಟದಲ್ಲಿ ಒಂದು ನವೀನವಾದ ಮಾರ್ಪಾಟವನ್ನು ಮಾಡಲು ಹವಣಿಸಿದನು. ತನ್ನ ಆಚಾರವಿಚಾರಗಳ ಒರೆಗಲ್ಲಿಗೆ ನಿಲುಕುವ ವ್ಯಕ್ತಿಗಳನ್ನು ಕಲೆಹಾಕಿದನು. ಅವರಲ್ಲಿ ಮತ್ತು ಅವರ ಮುಖಾಂತರವಾಗಿ ಜನಸಾಮಾನ್ಯರಲ್ಲಿ ಉಚ್ಚವಾದ ಜೀವನದ ಆದರ್ಶವೊಂದು ಅಂಕುರಗೊಂಡು ಬೆಳಗುವಂತೆ ಮಾಡಿದನು. ಆದನ್ನು ಬಳಸಿದ ಈ ವ್ಯಕ್ತಿಗಳು ಶಿವನನ್ನು ಅನನ್ಯವಾಗಿ ನಂಬಿ ಶರಣು ಹೊಕ್ಕಿದ್ದರಿಂದ ಅವರಿಗೆ ಶಿವಶರಣರು ಎಂಬ ಹೆಸರು ರೂಢವಾಯಿತು. ಅವರ ನಿಷ್ಠಾಗರಿಷ್ಠವೃತ್ತಿಗೆ, ನಿರ್ಮಲಮತಿಗೆ, ಭಾವಶುದ್ಧಿಗೆ ಮಾರುವೋಗಿ ಶಿವನೂ ಸಹ ಅವರಲ್ಲಿ ಆಶ್ರಯಿಸುವಂತಾಯಿತು. ಈ ಶಿವಶರಣರು ೭೭೦ ಜನರಿದ್ದರೆಂದು ವೀರಶೈವರಲ್ಲಿ ಒಂದು ಪ್ರತೀತಿಯಿದೆ. ಹಲವಾರು ಶಿವಶರಣರೂ ಶಿವಶರಣೆಯರೂ ಕಲ್ಯಾಣನಗರದಲ್ಲಿ ಸೇರಿ ಈ ನವೀನ ತೆರನಾದ ಆಂದೋಲನದಲ್ಲಿ ಅಗ್ರಭಾಗವನ್ನು ವಹಿಸಿದ್ದರೆಂಬುದು ಕನ್ನಡ ವಚನವಾಙ್ಮಯದಿಂದ ತಿಳಿದುಬರುತ್ತದೆ. ಅವರ ವಚನಗಳಲ್ಲಿ ಅವರ ಕಾರ್ಯಕಲಾಪಗಳಲ್ಲಿ ಜೀವನದ ದಿವ್ಯ ಆದರ್ಶದ ಬಗೆಗೆ ಮತ್ತು ಅದರ

ಹೊಂದುಗೆಯ ಬಗೆಗೆ ಅವರಿಗಿದ್ದ ಆದರಾತಿಶಯ ಪರಪ್ರೋತ್ಸಾಹಗಳು ಸ್ಫುಟವಾಗಿ ಮೂಡಿರುತ್ತವೆ.

**ಅನುಭವಕ್ಕೆ ಮೆರುಗು**

ಶಿವಶರಣರು ಅನುಭಾವಿಗಳು. ಸಾಮಾನ್ಯವಾದ ಸರಳವಾದ ಸಾಧುವಾದ ಅವರ ಜೀವನವು ಅವರ ಅನುಭಾವಕ್ಕೆ ಹಿನ್ನಲೆಯನ್ನು ರೂಪಿಸಿ ಅನುಪಮವಾದ ಮೆರುಗನ್ನು ನೀಡಿತು. ಈ ಜಗತ್ತಿನ ಬಗೆಗೆ ಅವರಲ್ಲಿ ಅಪಾರವಾದ ಗೌರವವಿತ್ತು. ಇದನ್ನು ನಿರ್ಮಿಸಿ ನಿಯಂತ್ರಿಸುವ ದೇವನೊಬ್ಬನಿರಬೇಕೆಂದು ಕಂಡುಕೊಂಡ ಅವರಲ್ಲಿ ಅವನ ಬಗೆಗೆ ಅಪಾರವಾದ ವಿಶ್ವಾಸವಿತ್ತು. ತಮ್ಮ ನೆರೆಹೊರೆಯ ಜನರಲ್ಲಿ, ಪ್ರಾಣಿಗಳಲ್ಲಿ, ವಸ್ತು ಒಡವೆಗಳಲ್ಲಿ ಜಗನ್ನಿಯಾಮಕನ ಅಂಶವನ್ನು ಕಂಡುಕೊಂಡ ಅವರಲ್ಲಿ ಅವುಗಳ ಬಗೆಗೆ ಅತುಲವಾದ ಪ್ರೇಮವಿತ್ತು. ಅದಕ್ಕಾಗಿ ಜೀವನದಲ್ಲಿ ತೊಡಕು ತೊಡಕಾಗಿ ಕಾಣುವ ಸಂಗತಿಗಳನ್ನು ಆರೈದು, ಅದರ ಕಾರಣವನ್ನು ತಿಳಿದು, ಅದನ್ನೆಲ್ಲ ಪರಿಹರಿಸಿ ಜೀವನ ಸೌಂದರ್ಯವು ಹೊರಹೊಮ್ಮುವ ಬಗೆಗೆ ಅವರು ತುಂಬ ಆಲೋಚಿಸಿದರು. ಅಂತು ಆಲೋಚಿಸಿ ಅದನ್ನು ಅಂಗವಿಸಿಕೊಂಡು ಆನಂದವನ್ನು ಹೊಂದಿದರು; ಮಾತ್ರವಲ್ಲ, ಅದು ವ್ಯಾಪಕವಾಗಿ ರೂಢಗೊಳ್ಳಲೆಂದೂ ಯತ್ನಿಸಿದರು. ತಮ್ಮ ಬಾಳುವೆಯನ್ನು ಉತ್ತಮಗೊಳಿಸುವಾಗ ಅವರು ಹೇಳಿದ ಮಾತುಗಳು ಮಾನವ ಜನಾಂಗಕ್ಕೆಲ್ಲ ಸಾಕ್ಷಾತ್ಕಾರದ ಹಾದಿಯು ಸುಲಭವೆಂಬುದನ್ನು ತೋರಿಸಿದುವು; ಅದರಿಂದಾಗಿ ಅವು ದಿವ್ಯಜೀವನವನ್ನು ಪಡೆದುಕೊಳ್ಳಲು, ಅದನ್ನು ಇಲ್ಲಿಯೇ ಈಗಲೇ ಅನುಭವಿಸಲು ಶಕ್ಯವಿದೆ ಎಂಬ ನಂಬಿಗೆಯನ್ನಿಂಬುಗೊಳಿಸಿದುವು.

**ಶರಣರ ಭಕ್ತಿ**

ಅನುಭಾವಕ್ಕೆ ಭಕ್ತಿಯೇ ಆಧಾರ. ಬಸವಣ್ಣನಿಗಿಂತ ಮೊದಲು ವಿವಿಧ ಭಕ್ತಿಮಾರ್ಗಗಳು ಪ್ರಚಾರದಲ್ಲಿದ್ದವು. ಅದರಿಂದ ರೂಪುಗೊಂಡ ಅನುಭಾವದ ಪರಿಪಿಡಿಯೊಂದೊಂದೂ ಪ್ರಚಾರದಲ್ಲಿದ್ದವು. ಪೃಥ್ವಿತತ್ವದ ತಾಮಸಭಕ್ತಿ, ಅಪ್ಪುತತ್ವದ ದ್ವೈತಭಕ್ತಿ, ಅಗ್ನಿತತ್ವದ ಪುರಾತನಭಕ್ತಿ, ವಾಯುತತ್ವದ ಅದ್ವೈತಭಕ್ತಿ, ಆಕಾಶತತ್ವದ ಸಿದ್ಧಭಕ್ತಿ—ಇವೆಲ್ಲ ಅಸ್ತಿತ್ವ

ವಲ್ಲಿದ್ದುವು. ಆದರೆ ಆತ್ಮತತ್ವದ ಶರಣಭಕ್ತಿಯು ಮಾತ್ರ ಇನ್ನೂ ಮೈದೋರಿರಲಿಲ್ಲ. ಬಸವಣ್ಣನೇ ಮುಖ್ಯವಾದ ಶಿವಶರಣರ ಅನುಭಾವವು ಸ್ಫುರಣಗೊಂಡು ಮುಂಬರಿದದ್ದು ಶರಣಭಕ್ತಿಯ ಆಧಾರದಲ್ಲಿ. ಈ ಶರಣ ಭಕ್ತಿಯನ್ನು ಆಚರಣೆಯಲ್ಲಿ ತಂದು ತೋರಿಸಲು ಇನ್ನುಳಿದ ಭಕ್ತಿ ಮಾರ್ಗ ಗಳಲ್ಲಿ ನುರಿತ ಅರಿವಿನ ಮಹಾಂತರು ಅನುಭಾವಸಂಪನ್ನರು ಅಣಿಯಾದರು. ಇವರಲ್ಲಿ ಶರಣಭಕ್ತಿಯ ಶಿಖಾಮಣಿಗಳಾದವರು ಬಸವಣ್ಣ–ಅಲ್ಲಮಪ್ರಭು ದೇವರು; ಭಕ್ತಿಮಾರ್ಗದ ಪ್ರತಿಸಿಧಿಗಳಾಗಿ ಶರಣಭಕ್ತಿಯ ಅಪ್ರತಿಮ ಮೂರ್ತಿಗಳಾಗಿ ಕಂಗೊಳಿಸುವವರು ಮಡಿವಾಳ ಮಾಚಣ್ಣ, ಚೆನ್ನಬಸವಣ್ಣ, ಸಿದ್ಧರಾಮಣ್ಣ, ಅಕ್ಕಮಹಾದೇವಿ, ನೀಲಮ್ಮ ಮುಂತಾದ ಶಿವಶರಣ-ಶಿವ ಶರಣೆಯರು. ಬಸವಣ್ಣನಿಗಿಂತ ಮೊದಲು ವಿವಿಧ ಭಕ್ತಿಮಾರ್ಗಡ ಮೂರ್ತಿ ಗಳು ಒಂದೆಡೆಯಲ್ಲಿ ಕಲೆತಿರಲಿಲ್ಲ; ಅಲ್ಲದೆ ಹಿಂದಿನ ಅನುಭಾವ ಮಾರ್ಗ ವನ್ನು ತುಳಿದಿರಲಿಲ್ಲ ಬಸವಣ್ಣನು ತನ್ನ ತಮಸ್ಸಳಿದು ತೇಜಸ್ಸಿನಿಂದೊಡ ಗೂಡಿದ । ಭಕ್ತಿರಸಪ್ರಭಾವದಿಂದ ಭಕ್ತೋತ್ತಮರ ಅಂತಃಕರಣಗಳನ್ನು ತನ್ನತ್ತಲೆಳೆದು, ಅವರೆಲ್ಲರ ಅಂತರಂಗದ ಅನುಭಾವವನ್ನು ತನ್ನತ್ತ ಸೆಳೆದು, ಅವರ ಅಪಾರವಾದ ಭಕ್ತಿರಸದಲ್ಲಿ ತಾನು ಬೆಳೆದು, ಅಪ್ರತಿಮವಾದ ಅನು ಭಾವ ಮಾರ್ಗವನ್ನು ಮೊಳೆಯಿಸಿದನು; ದಿವ್ಯಜೀವನವನ್ನು ಬೆಳಗಿಸಿದನು.

## ಪ್ರವೃತ್ತಿ ಪಲ್ಲಟಗೊಳ್ಳಬೇಕು

ದಿವ್ಯ ಜೀವನದ ಹೊಂದುಗೆಯಲ್ಲಿ ಅನುಭಾವಿಗಳು ಹೇಳುವ ಮಾತು ಒಂದೇ ವಿಧವಾಗಿರುವವು. ಅವರು ಯಾವ ನಾಡಿನಲ್ಲಿಯೇ ಉದಿಸಿರಲಿ, ಅವರು ಯಾವ ಕಾಲದಲ್ಲಿಯೇ ಜನಿಸಿರಲಿ ಅವರ ಮಾತುಗಳಲ್ಲಿ ಒಂದು ಸಾಮರಸ್ಯವಿದೆ. ಈ ಘನವಾದ ಕಾರ್ಯದಲ್ಲಿ ಎಲ್ಲ ಅನುಭಾವಿಗಳಂತೆ ಶಿವ ಶರಣರೂ ಮೂರು ಹಂತಗಳನ್ನು ಕಂಡಿರುವರು. ಆತ್ಯಂತಿಕ ಸುಖ ಸಾಧನೆಗೆ ಅಡ್ಡಬರುವಂತಹ ಇಂದ್ರಿಯ ಭೋಗದಲ್ಲಿ ಆಸಕ್ತಿಯನ್ನು ತಾಳಿ ಅನಂತ ಯಾತನೆಗಳಿಗೆ ತುತ್ತಾಗಿ ತೊಳಲುವ ಮತ್ತು ಅನ್ಯರನ್ನು ಅದಕ್ಕೆ ಬಲಿಗೊಟ್ಟು ಬಳಲಿಸುವ ಮಾನವ ಪ್ರವೃತ್ತಿಯು ಪಲ್ಲಟಗೊಳ್ಳಬೇಕು;

ಇದಕ್ಕಾಗಿ ಅವನು ಶುದ್ಧ ಸಾತ್ವಿಕ ಜೀವನದಲ್ಲಿ ಕಾಲಿಟ್ಟು ನಡೆಯಬೇಕು; ಅಂದರೆ ಅವನಲ್ಲಿ ಚಿತ್ತಶುದ್ಧಿಯು ಉಂಟಾಗಬೇಕು. ಇದುವೆ ಅವನು ಗಮನಿಸಬೇಕಾದ ಮೊದಲನೆಯ ಮಾತು. ನೈತಿಕ ಜೀವನದ ಸೊಬಗನ್ನು ಸೂರೆಗೊಳ್ಳುವ ಸಂಗತಿಗಳಿಗೆ ಇಹದಲ್ಲಿ ಕೊರತೆಯಿಲ್ಲ. ಜೀವನದಲ್ಲಿ ಕಲಹವು ಕುದುರುವದು ಈ ಸಂಗತಿಗಳಿಗಾಗಿ. ಇವುಗಳ ಬಗೆಗಿರುವ ಮನದ ಮುಂದಣ ಆಸೆಯೇ ಮಾಯೆಯೆನಿಸಿರುವುದು. ಶಿವಶರಣರು ಈ ಆಶೆಯನ್ನು ತಾಮಸ, ತಮಂಧ, ಕಾಳಿಕೆ, ಕದಳಿ, ಮಲ ಎಂದು ಬಗೆಬಗೆಯಾಗಿ ಕರೆದಿರುವರು. ಕ್ರೈಸ್ತ ಅನುಭಾವಿಗಳು ಹೇಳುವ ಕಾಳ ರಾತ್ರಿ (Dark night of the Soul) ಎಂದರೂ ಈ ಆಸೆಯೆ ! ಈ ಆಸೆಯ ದೆಸೆಯಿಂದ ಮಾನವನು ಏನನ್ನು ಮಾಡಲಿಕ್ಕಿಲ್ಲ? ಕಾಮಾದಿಗಳ ಬಲೆಯಲ್ಲಿ ಸಿಲುಕುವದೂ, ಸತ್ಯ ಸ್ಥೈರಣೆಗಳಿಲ್ಲದಿರುವದೂ, ಕಪಟ ಕಂಟಕ ವೃತ್ತಿಯವನಾಗಿರುವದೂ, ಸಾರಸಜ್ಜನರ ಸಂಗವ ಮಾಡದೆ ದೂರದುರ್ಜನರ ಸಂಗಿಯಾಗಿರುವದೂ, ಸಭ್ಯರಾಚರಣೆಗೆ ದೂರಸ್ಥನಾಗಿರುವದೂ, ದೈನ್ಯ ದುರ್ಭಾವಗಳಿಗೆ ಗುರಿಯಾಗಿರುವದೂ, ವ್ರತಗೇಡಿ ದುಃಶೀಲನೆನಿಸಿರುವದೂ, ಕಂಡುದಕ್ಕೆ ಕಾರ್ಪಣ್ಯ ಪಡುವದೂ, ಪಾಪಕೂಪದಲ್ಲಿ ಉರುಳಾಡುವದೂ ಈ ಆಸೆಯ ದೆಸೆಯಿಂದಲೇ ! ಪರದೈವಕೆ, ಪರವನಿತೆಗೆ, ಪರಹಿಂಸೆಗೆ, ಪರಧನಕ್ಕೆ, ಪರನಿಂದೆಗೆ, ಪರರ ತುತಿಗೆಯ್ದು ದೈನ್ಯಕ್ಕೆ ಕೈಯಿಕ್ಕುವದೆಲ್ಲ ಈ ಆಸೆಯ ದೆಸೆಯಿಂದಲೇ ! ಪ್ರಪಂಚದ ಮೀಸಲಳಿಯುವದಾಗಲಿ, ಮೀಸಲುಗೆಡುವದಾಗಲಿ ಈ ಅಳಿಯಾಸೆಯಿಂದಲೇ ! ಆಸೆಪಟ್ಟ ವಸ್ತುವು ಕೈವಶವಾಗದಿದ್ದರೆ ಅಂಜಿಕೆಯು ಆವರಿಸುವದು ಸಹಜವಾಗಿರುವದು. ಆಸೆ ಅಂಜಿಕೆಗಳಿಂದ ಗಾಸಿಯಾಗುತ್ತಿಹ ಮಾನವನು, ತೆರಣಿಯ ಹುಳದ ಸ್ನೇಹದ ಬಲೆಯಂತಿರುವ ಈ ದುರಾಸೆಯ ಮೂಲಕವಾಗಿ ಬೇಗುದಿಗೊಳ್ಳುವ ಮಾನವನು ನಿರಾಸೆ ನಿರ್ಭಯ ವೃತ್ತಿಯುಳ್ಳವನಾಗಬೇಕು. ಕರ್ತಾರನ ಕಮ್ಮಟವೆನಿಸಿದ ಈ ಮರ್ತ್ಯದಲ್ಲಿ ಎಲ್ಲ ಕಡೆಗೂ ಸಲ್ಲುವ ಶುದ್ಧನಾಣ್ಯದಂತೆ ಮಾನವನ ಇರವಾಗಬೇಕು. ಅಂದರೆ ನೀತಿಯ ಕೆಚ್ಚಿನಿಂದ ಬೆರೆತು ಅವನು ಶೀಲ ಸಂಪಾದಕನೆನಿಸಬೇಕು. ಅನುಭಾವಮಾರ್ಗದ ಮೊದಲ ಹಂತದಲ್ಲಿ

ಶಿವಶರಣರು ಕಂಡುಕೊಂಡುದು ಈ ನೀತಿಯ ನಿಲವನ್ನು; ಅವರು ಪಡೆದದು ಚಿತ್ತದ ಈ ಶುದ್ಧಿಯನ್ನು !

## ಪ್ರಬೋಧ-ಪ್ರಕಾಶ

ನೈತಿಕ ಜೀವನದ ಪರಿಶುದ್ಧತೆಯಿಂದ ಮಾನವನು ಅನುಭಾವದ ದ್ವಿತೀಯ ಹಂತವನ್ನು ಏರಲು ತಕ್ಕವನಾಗುವನು. ಪ್ರಬೋಧ-ಪ್ರಕಾಶಗಳೆ ಈ ಹಂತದ ಹೆಗ್ಗುರುತುಗಳು. ಚಿತ್ತಶುದ್ಧಿಯಿಂದ ಕೂಡಿದ ವ್ಯವಹಾರದ ಪರಿಣಾಮವಾಗಿ ಮಾನವನಿಗೆ ಪ್ರತ್ಯಕ್ಷಜ್ಞಾನವು ನಿಲುಕುವದು. ಆದ್ದರಿಂದ ಅವನು ವಿಷಯಗಳಿಂದ ನಿವೃತ್ತನಾಗಿ ಸತ್ಪ್ರವೃತ್ತಿಯುಳ್ಳವನಾಗುವನು. ಆದರಿಂದಾಗಿ ಅವನಲ್ಲಿ ಭ್ರಾಂತಿಯು ಬಯಲಾಗಿ ಶಾಂತಿಯು ಗುಡಿಗಟ್ಟುವದು. ಕಂಗಳ ಮುಂದಣ ಕಾವಳವು ಹರಿದು ಪ್ರಸನ್ನ ದೃಷ್ಟಿಯು ಪ್ರಾದುರ್ಭವಿಸುವದು. ತನ್ನ ಕ್ರಿಯೆಗಳೆಲ್ಲ ಸತ್ಕ್ರಿಯೆಯಲ್ಲಿ ಮಾರ್ಪಾಟಾಗುತ್ತ ನಡೆದಂತೆ ಅವನಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರವು ಅಂಕುರಗೊಳ್ಳುವದು. ಇದನ್ನು ಅಂಗವಿಸಿಕೊಂಡ ಶರಣನ ನಿಲುವು—ಉಷ್ಣತೆಯ ಒರತೆಯಂತೆ, ಉರಿಯ ನೆಳಲಂತೆ, ಮಂಜಿನ ಮಳೆಯಂತೆ, ಬಿಸಿಲಗುದರೆಯಂತೆ, ಬೆಟ್ಟದ ಶಬ್ದದಂತೆ—ವಿಪರೀತವಾಗಿ ತೋರಬಹುದು. ಅದು ಲೋಕವಿರುದ್ಧವಾಗಿಯೂ ಕಾಣಬಹುದು. ಆದರೆ ಅಲ್ಲಿ ಭಾವಗಭೀರತೆಯಿದೆ, ಪ್ರಸನ್ನ ಪರಿಣಾಮವಿದೆ. ಸಾಗರದಂತೆ ಆಳವಾದ, ಆಕಾಶದಂತೆ ಗಂಭೀರವಾದ ಅವನ ಅನುಭಾವದ ಗೂಢದಲ್ಲಿ ನಿತ್ಯ ನಿತ್ಯ ಸಮ್ಯಕ್‌ಜ್ಞಾನದ ಸೆಲೆಯೊಡೆದು ಪ್ರಕಾಶ-ವಿಮರ್ಶೆಗಳಿಂದ ಅವನ ನಡೆಯು ನುಡಿಯು ಪಾವನವಾಗುವವು. ಕಾಯದ ಕಳವಳದಲ್ಲಿ ಕಂಗೆಡುವದೂ, ಜೀವನೋಪಾಧಿಕೆಯಲ್ಲಿ ಹೊದ್ದುವದೂ, ಭಾವದ ಭ್ರಮೆಯಲ್ಲಿ ಸುಳಿದಾಡುವದೂ, ಮನದ ಮರವೆಯಲ್ಲಿ ಮಗ್ನವಾಗುವದೂ, ಕಂಗಳ ಕತ್ತಲೆಯಲ್ಲಿ ಸುತ್ತಿಸುಳಿವುದೂ, ಇಂದ್ರಿಯ ವಿಕಾರದಲ್ಲಿ ಹರಿದಾಡುವದೂ—ಎಲ್ಲಾ ಅಡಗಿ ಸ್ಫುರಣ ಜ್ಞಾನದ ಪ್ರಕಾಶದ ಒಬ್ಬುಳಿಯಲ್ಲಿ ತೆರಹಿಲ್ಲದಂತೆ ಬೆರೆದು ಬೆಳಗುವನು ಆ ಶರಣನು. ಅನುಭಾವದ ಮೊದಲ ಹಂತದಲ್ಲಿ ಸತ್ಕ್ರಿಯೆಯಿಂದ ಬಾಹ್ಯವಿಷಯ ಪರಿಸ್ಥಿತಿಯಲ್ಲಿ ಸಮತೆ ಸನುತೋಕಗಳು ನೆಲೆಗೊಳ್ಳುವಂತೆ ಈ ಎರಡನೆಯ ಹಂತದಲ್ಲಿ ಸುಜ್ಞಾನ

ದಿಂದ ಅದು ನಿಯಮಿಸಲ್ಪಡುವದು; ಮಾತ್ರವಲ್ಲ, ಮೂರನೆಯ ಹಂತದ ಸಾಮರಸ್ಯಕ್ಕೆ ಹದವಾದ ಭೂಮಿಕೆಯನ್ನುಂಟು ಮಾಡುವದು.

### ದೇವೋನ್ಮಾದ

ಸಮರಸ-ಐಕ್ಯವೇ ಗುರಿಯಾಗಿರುವ ಈ ಮೂರನೆಯ ಹಂತದಲ್ಲಿ ವ್ಯಕ್ತಿಯು ವಿಶ್ವಾತ್ಮದಲ್ಲಿ ಅವಿರಳವಾಗಿ ಬೆರೆಯುವದೇ ಆದರ್ಶವಾಗಿದೆ. ದೇವೋನ್ಮಾದ ದಿವ್ಯಾನಂದಗಳು ಅನುಭಾವದ ಈ ಅವಸ್ಥೆಯ ಪ್ರಾಮುಖ್ಯವಾದ ಲಕ್ಷಣಗಳು. ಇಲ್ಲಿ ಉಂಟಾಗುವ ಆನಂದಾತಿಶಯವು ಕೇವಲ ಅನಿರ್ವಚನೀಯವಾಗಿರುವದು. ಈ ಅವಸ್ಥೆಯಲ್ಲಿ ನಾನೆಂಬುದಿಲ್ಲ, ನೀನೆಂಬುಲ್ಲದಿಲ್ಲ; ಸ್ವಯವೆಂಬುದಿಲ್ಲ, ಪರವೆಂಬುದಿಲ್ಲ; ಅರಿವೆಂಬುದಿಲ್ಲ, ಮರವೆಯೆಂಬುದಿಲ್ಲ; ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ—ಎಲ್ಲಿ ನೋಡಿದಡಲ್ಲಿ ನೀನೇ ದೇವ ಎಂಬುದು ಅಳವಡುವದಾಗಿ ನೇಹದ ನೋಟದಲ್ಲಿಯೇ ತೃಪ್ತಿ; ಎಲ್ಲಿ ಮುಟ್ಟಿದಡದಲ್ಲಿ ನೀನೇ ದೇವ ಎಂಬುದು ಇಂಬುಗೊಳ್ಳುವದಾಗಿ ಸ್ನೇಹದ ಸ್ಪರ್ಶನದಲ್ಲಿಯೇ ತೃಪ್ತಿ; ಎಲ್ಲಿ ಭಾವಿಸಿದಡಲ್ಲಿ ನೀನೇ ದೇವ ಎಂಬುದು ಗರಿಗೊಳ್ಳುವದಾಗಿ ಸಲುಮೆಯ ನೆನಹಿನಲ್ಲಿಯೇ ತೃಪ್ತಿ. ನಾನು ನೀನು ಎಂಬುದಕ್ಕೆ ತೆರಹೇ ಇಲ್ಲದಾಗುವದು.

" ಅಘಟಿತ ಘಟಿತರು, ಅನುಪಮ ಚರಿತರು, ಕೂಡಲಸಂಗಮ ಶರಣರು ಹೋದ ದಾರಿ ಭಯ ಕಾಣಿರಣ್ಣ " ಎಂದು ಬಸವಣ್ಣನವರು ಒಂದೆಡೆಗೆ ಹಾಡಿರುವರು. ಮರ್ತ್ಯದಲ್ಲಿ ಮಹಾಮನೆಯನ್ನು ಕಟ್ಟುವ ಘನವಾದ ಸಾಹಸದಲ್ಲಿ ಸಾಧನೆಯಲ್ಲಿ ಒಳ ಹೊರಗೆ ತನಗುಂಟಾಗುವ ತೊಂದರೆ ತೊಡಕುಗಳನ್ನು ಕಿತ್ತೆಸೆದು ಸತ್ಯಸದಾಚರಣೆಯ ನಡೆಯನ್ನು ಕೈಕೊಳ್ಳುವದೂ, ಸರಿಯಾದ ಜ್ಞಾನ ದೃಷ್ಟಿಯ ಬಲದಿಂದ ಅಜ್ಞಾನದ ಕೇಡನ್ನುಂಟು ಮಾಡಿಕೊಳ್ಳುವದೂ, ಮತ್ತು ಎಲ್ಲರೊಳು ನೀನೆ ಇಗುವೆ ಎಲ್ಲವ ನೀ ವ್ಯಾಪ್ತಿಸಿರುವೆ ಎಂಬ ಭಾವನೆಯನ್ನು ಬಲಿಸಿಕೊಂಡು ತಾನೆ ತಾನೆನಿಸಿಕೊಂಬುವದೂ ಅಳ್ಳೆದೆಯವರಿಗೆ ದಕ್ಕುವ ತುತ್ತಲ್ಲ. ಅದಕ್ಕಾಗಿ ತನ್ನನ್ನು ಮರೆತು, ತನ್ನನ್ನು ತೆರೆದಿಡುವ ಕಲಿತನವೆ ಬೇಕು. ತೆರೆದಿಡುವುದರಲ್ಲಿ

ಶಿವಶರಣರು ಬಲ್ಲಿದರಾದುದರಿಂದ ಅವರಲ್ಲಿ ಅನುಭಾವದ ದಿವ್ಯಪ್ರಭೆಯು ಪರಿಪೂರ್ಣವಾಗಿ ತುಂಬಲೂ ತುಂಬಿ ಕಾರ್ಯಗೆಯ್ಯಲೂ ಅನುವಾಯಿತು.

ಕಾಲ ಕೈಯೊಳಗಿರಿಸಿ ನಡೆವುತಿಪ್ಪಾತನ ನಡೆ ಶುದ್ಧ ;
ಕೈಯ ಕಣ್ಣೊಳಗಿರಿಸಿ ನೋಡುತಿಪ್ಪಾತನ ನೋಟ ಶುದ್ಧ ;
ಕಣ್ಣ ಮನದೊಳಗಿರಿಸಿ ನೆನೆವುತಿಪ್ಪಾತನ ಮನ ಶುದ್ಧ ;
ಮನ ಭಾವದೊಳಗಿರಿಸಿ ಭಾವಿಸುತಿಪ್ಪಾತನ ಭಾವ ಶುದ್ಧ ;
ಆಭಾವ ನಿರ್ಭಾವವನೈದಿದರೆ ಆತ ಸ್ವತಂತ್ರ ಸಿದ್ಧ!

ಸ್ವತಂತ್ರ ಸಿದ್ಧಲಿಂಗೇಶ್ವರನ ಈ ನುಡಿಯ ಬೆಡಗಿನಲ್ಲಿ ನಡೆಶುದ್ಧ ನೋಟಶುದ್ಧ ಮನಶುದ್ಧ ಭಾವಶುದ್ಧನಾಗಿ ಸ್ವತಂತ್ರ ಸಿದ್ಧನಾಗುವ ಶಿವಶರಣರ ದಾರಿಯ ಕೀಲವನ್ನರಿಯಬಹುದಾಗಿದೆ.

---

# ದಾಸ ಸಾಹಿತ್ಯ—ಶರಣ ಸಾಹಿತ್ಯ

## ಎರಡು ಸಂಪ್ರದಾಯಗಳು

ಕನ್ನಡ ನಾಡಿನಲ್ಲಿ ಪ್ರಾಮುಖ್ಯವಾಗಿ ಎರಡು ಅಧ್ಯಾತ್ಮ ಸಂಪ್ರದಾಯಗಳಿರುತ್ತವೆ. ಅವುಗಳಲ್ಲಿ ಒಂದು ಶರಣ ಸಂಪ್ರದಾಯ; ಇನ್ನೊಂದು ದಾಸ ಸಂಪ್ರದಾಯ. ಇವೆರಡು ತಮುಳು ನಾಡಿನಲ್ಲಿ ಈಗಲೂ ಕಂಡು ಬರುತ್ತಿರುವ ಅರಿವರ್ ಮತ್ತು ಆಳ್ವರ್ ಸಂಪ್ರದಾಯಗಳಿಗೆ ಹೋಲುತ್ತವೆ. ಅಥವಾ ಇನ್ನೊಂದು ಬಗೆಯಾಗಿ ಹೆಚ್ಚು ವ್ಯಾಪಕವಾಗಿ ಹೇಳುವದೆ ಇವು ಗ್ರೀಸದ ಡಾಯೋನೀಸ್ ಮತ್ತು ಅಪಲೋನಿಯನ್ ಇವರ ಜೀವನ ದೃಷ್ಟಿಗಳಂತಿವೆ ಎಂದು ಅನ್ನಬಹುದು. ಶರಣ ಸಂಪ್ರದಾಯದಲ್ಲಿ ಸತ್ಯವನ್ನು ಕಾಣುವ ಬಗೆಯು ಹೆಚ್ಚು ಬುದ್ಧಿಪ್ರಧಾನವಾಗಿಯೂ ಮನೋವಿಶ್ಲೇಷಣ ಮುಖಾಂತರವಾಗಿಯೂ ಇರುತ್ತದೆ. ದಾಸ ಸಂಪ್ರದಾಯವು ಭಾವನಾಪ್ರಧಾನವಾಗಿಯೂ ಸೌಂದರ್ಯಮಯವಾಗಿಯೂ ಇರುತ್ತದೆ. ಅನಾದ್ಯನಂತ ಪರವಸ್ತುವಿನ ನಿಲವನ್ನು ಅಳೆಯಬೇಕು; ಅದನ್ನು ಆಳವಡಿಸಿಕೊಳ್ಳಬೇಕು ಎಂಬ ಬಗೆಯಲ್ಲಿ ವೀರಶೈವ ಅನುಭಾವಿಗಳು ತಾಳಿರುವ ಮನೋವೃತ್ತಿಯು ಸ್ಥಿರ ಧೀರ ಗಂಭೀರಯುತವಾಗಿದೆ; ಸಾಹಸಯುತವಾಗಿದೆ. ಕನ್ನಡ ನಾಡಿನ ೧೫ನೆಯ ಮತ್ತು ೧೬ನೆಯ ಶತಮಾನಗಳ ವೀರಶೈವ ದಿವ್ಯಾನುಭಾವಿಗಳ ಮನೋವಿಶ್ಲೇಷಣ ದೃಷ್ಟಿಯಲ್ಲಿ ಪುರಾತನ ಋಷಿ-ಕವಿಗಳ ಕರಣ ಹಸುಗೆ ಪ್ರತಿಬಿಂಬಿತವಾಗಿದೆ. ಅರಿವಿನ ಅಂತರಾಳವನ್ನು ಅಳೆದಿರುವೆವೆಂದು ತಿಳಿದುಕೊಂಡಿರುವ ಇಂದಿನ ವಿಚಾರವಂತರು ಅವರು ಮುಟ್ಟಿದ ಆಳವಾದ ಮನಸಿನ ಮಟ್ಟವನ್ನು ಮುಟ್ಟಿರುವದಿಲ್ಲವೆಂದೇ ಹೇಳಬೇಕು. ಅವರವರ ತಿಳಿವಳಿಕೆ ಅಭ್ಯಾಸಗಳಲ್ಲಿ ಮಹದಂತರವಿದೆ ಎಂದು ಬೇರೆ ಹೇಳಬೇಕಾದುದಿಲ್ಲ. ಇದೂ ಅಷ್ಟು ಮುಖ್ಯವಾದ ಮಾತಲ್ಲ. ಆದರೆ ಆ ಅರುವಿನ ಆಳದ ವಿಷಯವಾಗಿ ಅವರವರ ದೃಷ್ಟಿಕೋನದಲ್ಲಿರುವ ಅಭ್ಯಂತರವು ಪ್ರಾಮುಖ್ಯವಾದುದು. ಅನಾದ್ಯನಂತ ಪರವಸ್ತುವಿನೊಡನೆ, ಪರವೆನಿಸುವ ಅರಿವಿನೊಡನೆ

ದಿವ್ಯಸಾಮರಸ್ಯವನ್ನು ಹೊಂದುವಾಗ ವೀರಶೈವ ಅನುಭಾವಿಯು ತನ್ನಲ್ಲಿ ಹುದುಗಿರುವ ಅದ್ಭುತವಾದ ಅನಂತವಾದ ಶಕ್ತಿಯನ್ನು ಪ್ರಕಟಗೊಳಿಸಿ, ಅದನ್ನು ಆ ಸಾಮರಸ್ಯಕ್ಕಾಗಿ ಉಪಯೋಗಿಸಿಕೊಳ್ಳುವನು. ಈ ಶಕ್ತಿಯು ಕಲಹದಲ್ಲಿ ಕುದುರುತ್ತಿರುವ, ಕಾರ್ಯರಂಗದಲ್ಲಿ ಕಡುಗಲಿಯಾಗಿ ಹೋರಾಡುತ್ತಿರುವ ಯುರೋಪದವರ ಉಗ್ರವೃತ್ತಿಯ ಕರ್ತೃತ್ವ ಶಕ್ತಿಗೆ ಸಮತೂಕವಾಗಿ ಕಾಣುತ್ತದೆ. ಅವನ ಭಕ್ತಿಯು ಒಮ್ಮೊಮ್ಮೆ ತೃಪ್ತಿಹೊಂದದ ಬಯಕೆ ಭೋಗಗಳಲ್ಲಿ ಜೀವನಯಾತ್ರೆಯು ಕೊನೆಗೊಳ್ಳುವವರೆಗೂ ಕಂಡು ಬರುವ ದ್ವಂದ್ವ ಕಲಹದ ಊರ್ಮಿಗಳಲ್ಲಿ, ಆನಂದಾತಿರೇಕದ ಹುಚ್ಚು ಹೊಳೆಯಲ್ಲಿ ರೂಪಾಂತರಗೊಳ್ಳಬಹುದು. ಜರ್ಮನಿಯ ಏಕ್‌ಹಾರ್ಟ ಎಂಬ ಅನುಭಾವಿಯು ಪರಮಾತ್ಮನಲ್ಲಿ ತಾದಾತ್ಮ್ಯವನ್ನು ಹೊಂದಿದ್ದನಂತೆ; ಅದಕ್ಕಿಂತ ಹೆಚ್ಚಿನದೆನಿಸುವ ಯಾವುದನ್ನೂ ಆತನು ಸಹಿಸುತ್ತಿದ್ದಿಲ್ಲವಂತೆ; ಪರಮಾತ್ಮನೆಂಬ ಮಾತನ್ನೂ ಅವನು ತಾಳಿಕೊಳ್ಳುತ್ತಿದ್ದಿಲ್ಲವಂತೆ. ಹೀಗೆ ತಲೆತಿರುಕನ ವಿಚಾರದಂತಿರುವ ಒಂದು ಪಿಚಾರವು ಅನುಭಾವಿಯನ್ನು ತನ್ನಳವಿಯಲ್ಲಿ ತೆಗೆದುಕೊಳ್ಳುತ್ತದೆ.

## ದಾಸ ಸಂಪ್ರದಾಯ

ಜೀವನದ ಬಗೆಗೆ ದಾಸ ಸಂಪ್ರದಾಯವು ಹೆಚ್ಚು ಭಾವನಾಪ್ರಧಾನವಾಗಿಯೂ ಹೆಚ್ಚು ಸೌಂದರ್ಯಮಯವಾಗಿಯೂ ಕಂಗೊಳಿಸುತ್ತಿದೆ, ಅದು ದೇವದೇವನ ಸೌಂದರ್ಯಾತಿಶಯದ ಮುಖಾಂತರವಾಗಿ ಮಾನವನ ಭಾವನೆಗಳನ್ನು ಪರಿಶುದ್ಧಗೊಳಿಸುವುದಲ್ಲದೆ ಅವನಲ್ಲಿ ದೇವನ ಬಗೆಗೆ ಭಕ್ತ್ಯಾತಿಶಯವೂ ಮೂಡುವಂತೆ ಮಾಡುತ್ತದೆ. ಇದರಿಂದ ಗೊತ್ತುಗುರಿಯಿಲ್ಲದೆ ವ್ಯವಹರಿಸುತ್ತಿರುವ ಝುರಿಯಂತೆ ಪ್ರವಹಿಸುತ್ತಿರುವ ಮಾನವನ ಅರಿವು ದೊಡ್ಡ ಪ್ರವಾಹದಂತೆ ರೂಪತಾಳಿ ಪ್ರಭುವಿನತ್ತ ತಿರುಗುವದು. ಸೌಂದರ್ಯವು ಹುಚ್ಚು ಹೆಚ್ಚಾದ ಒಂದು ಕಲ್ಪನೆಯಲ್ಲ; ಅದರಿಂದ ಪರವಸ್ತುವಿನ ನಿರಂತರವಾದ ಒಂದು ಪರಮಾನಂದದ ತಿಳುವಳಿಕೆಯಾಗುತ್ತದೆ. ಸೌಂದರ್ಯದಲ್ಲಿ ಹರಿದಾಸನು ಆನಂದದ ಪ್ರತೀಕವನ್ನು ಕಾಣುವನು. ಅನೇಕ ಸಾರೆ ದೇವನು

ಅನುಪಮವಾದ ಕಲಾವಿದನೆಂದು ವರ್ಣಿಸಿರುವುದುಂಟು. ಅವನು ತಾಲ ಲಯಬದ್ಧವಾದ ಸುಮಧುರವಾದ ಸಂಗೀತ ಮಾಟಗಾರನೆಂದೂ ಬಣ್ಣಿಸಿರುವುದುಂಟು. ಈ ಮಧುರ ಗಾನವಾವುದು ? ಹಿಡಿತದಿಂದ ಮಿಡಿತದಿಂದ ಸ್ವರಸಮ್ಮೇಲನದಲ್ಲಿ ಹೊರಹೊಮ್ಮಿದ ನಾದಗತಿಯೇ ಈ ಗಾನವು. ಕಲಾವಿದನ ಕೈಚಳಕದಲ್ಲಿ ಇದು ಕರ್ತೃತ್ವ ಶಕ್ತಿಯಾಗಿ ರೂಪುಗೊಳ್ಳುವುದು. ಹುರುಳುಗಾಣದ ಹುಸಿಗೆ ರಸಮಾಧುರ್ಯವನ್ನೂ ರೂಪುಮಾಧುರ್ಯವನ್ನೂ ಕೊಡುವದು ಈ ಕರ್ತೃತ್ವ ಶಕ್ತಿಯೇ. ನಮ್ಮ ಜೀವನವನ್ನೇ ಒಂದು ಕೊಳಲನ್ನಾಗಿ ಮಾಡಿಕೊಂಡು ಅದರಲ್ಲಿ ಪರಮಾತ್ಮನು ತನ್ನ ದಿವ್ಯ ಗಾನವನ್ನು ತುಂಬುವಂತೆ ಮಾಡಿಕೊಳ್ಳಬೇಕಾಗಿದೆ. ದಾಸ ಸಾಹಿತ್ಯವು ಸೌಂದರ್ಯವನ್ನು ಪುಟಗೊಳಿಸಿರುವ, ಹದವಾದ ಮಧುರ ಭಾವನೆಗಳನ್ನು ಮೂಡಿಸಿರುವ ಭಾಷೆಯಾದುದರಿಂದ ಅದರಲ್ಲಿ ಹೆಚ್ಚು ಹೆಚ್ಚಾದ ನಯವೂ ಮಾಧುರ್ಯವೂ ಬೆರೆತುಕೊಂಡಿವೆ. ಮತ್ತು ಅದು ತರ್ಕಾತೀತವಾದ ಸುಸಂಬದ್ಧವಾದ ಸಂಗೀತವನ್ನು ಹೊರಹೊಮ್ಮಿಸಬಲ್ಲಿದು; ವಿಚಾರಗಳನ್ನು ಗ್ರಹಿಸಿ ಪ್ರತಿಬಿಂಬಿಸಿ ಪ್ರಕಟಿಸಬಲ್ಲದು.

## ಶರಣ ಸಾಹಿತ್ಯ

ಶರಣ ಸಾಹಿತ್ಯವು ಮಾನವನ ಅರಿವಿನ ವಿವಿಧವಾದ ವಿವಿಕ್ತವಾದ ತೆರೆತೆರೆಗಳನ್ನು ಪರಿಗೊಳಿಸಿ ಒಂದು ಸುವ್ಯವಸ್ಥಿತವಾಗಿ ರೂಪಿಸಲು ಅನುಕೂಲವಾದ ಸಾಧನವಾಗಿದೆ. ಶರಣ ಸಾಹಿತ್ಯದಲ್ಲಿರುವ ನಿರ್ಮಲವಾದ ಮನದ ಮುದ್ರೆ, ಆತ್ಮನ ಆಳವಾದ ಕರಣಗಳ ಹಸುಗೆ–ಇವು ಅದರ ಸೊತ್ತಾಗಿರುವವು; ಮಾತ್ರವಲ್ಲ, ಇವು ಅದರ ವಿಶಿಷ್ಟವಾದ ಮೀಸಲು ಒಡವೆಗಳೂ ಆಗಿವೆ! ಅದು ಪಾರಲೌಕಿಕ ಹಸಿವೆಯ ಪೂರ್ತಿಗಾಗಿ, ಲೌಕಿಕ ತಿಳುವಳಿಕೆಯ ಹೊಂದಿಕೆಗಾಗಿ ತನ್ನಲ್ಲಿ ಒಂದು ಅಪೂರ್ವವಾದ ಗಾಂಭೀರ್ಯವನ್ನು ತಾಳಿದೆ; ಒಂದು ನವೀನ ತರಹದ ಸಂಸ್ಕೃತಿಯನ್ನು ಹೊಂದಿದೆ; ಒಂದು ಸೂಕ್ಷ್ಮವಾದ ಅರ್ಥಪೂರ್ಣತೆಯನ್ನು ಪಡೆದಿದೆ; ಒಂದು ಚೈತನ್ಯಮಯವಾದ ಸ್ಫುರಣಾತ್ಮಕವಾದ ವಿಚಾರ ಸೌಂದರ್ಯವನ್ನೂ ಸಂಗಳಿಸಿಕೊಂಡಿದೆ; ಮತ್ತು ಇದರಿಂದ ಗೂಢವಾದ

ಗಾಢವಾದ ಅಧ್ಯಾತ್ಮ ಜೀವನದ ಅಂತರಂಗದೊಡನೆ ಸಂಬಂಧವೊಂದನ್ನೂ ಬೆಳಸಿಕೊಂಡಿದೆ. ಈ ಸಾಹಿತ್ಯಗಳೆರಡರ ಸೊಬಗನ್ನು ಸಾಮಾನ್ಯವಾಗಿ ಹೀಗೆ ತಿಳಿಸಬಹುದು. ದಾಸ ಸಾಹಿತ್ಯವು ಮೇಲೆ ಮೇಲೆ ಹಾರುವದು; ಶರಣಸಾಹಿತ್ಯವು ಅಂತರಂಗದ ಆಳ ಆಳದಲ್ಲಿ ಇಳಿಯುವದು. ದಾಸ ಸಾಹಿತ್ಯಕ್ಕೆ ಜೀವನ ತಿಳಿಬಾನಿನ ಅಳತೆಗೆಯ್ಯುವ ಸಾಮರ್ಥ್ಯವಿದೆ. ಶರಣ ಸಾಹಿತ್ಯಕ್ಕೆ ಆತ್ಮನ ಸೂತ್ರಸಂಬಂಧವನ್ನು ಸುಲಭವಾಗಿ ಅಳವಡಿಸಿಕೊಳ್ಳುವ ಸಾಮರ್ಥ್ಯವಿದೆ. ಆತ್ಮನ ಈ ಸೂತ್ರಸಂಬಂಧದ ದೆಸೆಯಿಂದ, ತಿಳಿಯಾದ ಬುದ್ಧಿಗೆ ನಿಲುಕುವ ಈ ಅಂತರಂಗದ ಜೀವನಸೌಂದರ್ಯದ ದೆಸೆಯಿಂದ ಶರಣ ಸಾಹಿತ್ಯಕ್ಕೆ ಬಹಿರಂಗಭರಿತವಾದ ಒಂದು ಮೆರುಗು ದೊರೆತಿದೆ. ಅಧ್ಯಾತ್ಮ ಜೀವನದ ಉನ್ನತ ನಿಲವಿನ ಪೂರ್ಣತೆಗಾಗಿ ದಾಸ ಸಾಹಿತ್ಯದಲ್ಲಿ ಇಹದ ಪರಮಾದರ್ಶವೆನಿಸುವ ಅವೈಗಾಲ್ಯವಾದ ಇಂದ್ರಿಯಜ್ಞಾನವು ಬೆಳಗುತ್ತಿದೆ. ಆದುದರಿಂದ ಈ ಎರಡೂ ವಿಚಾರವಾಹಿನಿಗಳು ಅಚ್ಚರಿಯಾದ ರೀತಿಯಲ್ಲಿ ಒಂದಕ್ಕೊಂದು ಪೂರಕವಾಗಿ ಹರಿದಿವೆ. ಆದರ್ಶವಾದ ಮಾನವ ಸಂಸ್ಕೃತಿಯ ಅಖಂಡತೆ ಮತ್ತು ಪರಿಪೂರ್ಣತೆ ಇವು ನಮ್ಮ ಗುರಿಯಾಗಿದ್ದರೆ ಇವೆರಡಕ್ಕೂ ಸರಿಸಮಾನವಾದ ಮಹತ್ವವನ್ನೀಯಬೇಕು; ಸರಿಸಮಾನವಾದ ಲಕ್ಷವನ್ನೂ ನೀಡಬೇಕು.

### ಸಾಂತ-ಅನಂತಗಳ ಸಾಮರಸ್ಯ

ಈ ಪ್ರಪಂಚದಲ್ಲಿ ಜರುಗುತ್ತಿರುವ ಘಟನೆಗಳನ್ನು ಸೂಕ್ಷ್ಮವಾಗಿ ಆರೈಯ್ಯುವದಾದರೆ ಅದರಿಂದ ವಿವಿಧ ಸಂಸ್ಕೃತಿಗಳಲ್ಲಿ ಒಂದರ ಮೇಲೆ ಇನ್ನೊಂದು ಮೂಡಿಸಿರುವ ಪ್ರಭಾವವು ಮಸುಳಿಸಿಲ್ಲ. ಅದಕ್ಕೆ ಬದಲಾಗಿ ಇಂದಿನ ಯುಗದ ಪರಿಸ್ಥಿತಿಯಿಂದ ಈ ಪ್ರಭಾವವು ಈ ಸಂಸ್ಕೃತಿಗಳನ್ನು ಧೃಡವಾಗಿಯೇ ಬೆಳೆಸಿದೆ ಎಂಬುದು ಅತಿ ಸ್ಪಷ್ಟವಾಗುವದು. ಇಂದು ಈ ಪ್ರಭಾವದ ಸ್ವರೂಪ, ಇದು ಕರೆದೊಯ್ಯುತ್ತಿರುವ ಗುರಿ, ಈ ಗುರಿಯು ಅವ್ಯಾಹತವಾಗಿ ಈಡೇರಲು ಕೈಕೊಳ್ಳಬೇಕಾದಸಾಧನೆ-ಇವುಗಳಲ್ಲಿ ಮಾತ್ರವಿಪುಲವಾದವ್ಯತ್ಯಾಸ ಉಂಟಾಗಿದೆ. ಇಂದು ಇಡಿಯ ಜಗದ ವ್ಯವಹಾರವೆಲ್ಲ ಒಂದು ಸರ್ವಸಾಮಾನ್ಯವಾದ, ವಿಶಾಲವಾದ ಎಲ್ಲರಿಗೂ ಒಗ್ಗುವ ಮಾನವ ಜನಾಂಗದ ಸಂಸ್ಕೃತಿಯೊಂದರ ಕಡೆಗೆ ಸಾಗಿರುತ್ತದೆ. ಇದಕ್ಕಾಗಿ ಹಿಂದಿನ ಮತ್ತು ಇಂದಿನ ಸಂಸ್ಕೃತಿಗಳಲ್ಲಿ

ಪ್ರತಿಯೊಂದು ಸಂಸ್ಕೃತಿಯು, ಪ್ರತಿಯೊಂದು ಮಾನವ ಪ್ರಯತ್ನವು ತನ್ನ ತನ್ನ ಅವಶ್ಯಕವಾದ ಕಾಣಿಕೆಯನ್ನು ಸಲ್ಲಿಸಲು ಸಿದ್ಧವಾಗಿರುವವು. ಹಿಂದಿನಿಂದ ಇಂದಿನವರೆಗೆ ಕಾಣಿಸಿಕೊಂಡ ಮಾನವ ಜನಾಂಗಗಳ ಸಮ್ಮಿಶ್ರಣದಿಂದ ಹೊರಹೊಮ್ಮಿದ ಗಾನಮಾಧುರ್ಯವು ಭವ್ಯವಾಗಿದೆ. ಈ ಭವ್ಯಗಾನ ಮಾಧುರ್ಯಕ್ಕೆ ಸಾಂತ-ಅನಂತಗಳ ಸಾಮರಸ್ಯವೆಂದು ಕರೆಯಬಹುದು. ಈ ವಿಶಾಲವಾದ ಸಮಸ್ಯೆಯು ನಿತ್ಯನಹ ಒಂದು ಸಮಸ್ಯೆಯೇ ಆಗಿದೆ. ಪುರಾತನ ಕಾಲದಿಂದ ಸಾಧು-ಸಂತರು ಮುನಿ-ಯೋಗಿಗಳು ಇದನ್ನು ಬಿಡಿಸಲು ಪ್ರಯತ್ನಿಸುತ್ತಲೇ ಬಂದಿರುವರು. ತಮ್ಮಿಂದ ಪ್ರಾರಂಭಿಸಲ್ಪಟ್ಟ ಅಧ್ಯಾತ್ಮ ಮಂದಿರದ ಪ್ರಸಿದ್ಧ ಪತ್ರಿಕೆಯ ಪೀಠಿಕೆಯಲ್ಲಿ ಡಾಕ್ಟರ ಆರ್. ಡಿ. ರಾನಡೆ ಎಂ. ಏ. ಡಿ. ಲಿಟ್. ಅವರು ಈ ಬಗೆಯಲ್ಲಿ ಹೀಗೆ ತಿಳಿಸಿರುವರು.

"ಪ್ಲೇಟೋ, ಶಂಕರಾಚಾರ್ಯ, ಅಶೋಕ, ಅಕಬರ ಇವರು ಆಗಿಹೋದ ಕಾಲಕ್ಕೂ ಈಗಿನ ಕಾಲಕ್ಕೂ ಮಹದಂತರವಿದೆ. ಕಾಲಗತಿಗನುಸರಿಸಿ ಹೆಚ್ಚಾಗಿ ಜ್ಞಾನದಲ್ಲಿ ಪ್ರಗತಿಯಾಗಿದೆ. ವೆಗ್ಗಳವಾದ ಶಾಸ್ತ್ರೀಯ ಶೋಧಗಳಿಂದ ಇಂದು ಮನುಷ್ಯನ ಸಂಪತ್ತಿಯು ಸಮೃದ್ಧವಾಗಿದೆ. ಹಳೆಯದೆಲ್ಲ ಅಳಿದು ಹೊಸತನವು ಮೂಡ ಸುಳಿದೆಗೆದು ಬೆಳೆಯುತ್ತಲಿದೆ. ಹೀಗೆ ಇರುವುದಾದರೂ ಮಾನವನ ಧ್ಯೇಯ-ಧೋರಣೆಗಳೂ ಹಾಗು ಅದನ್ನು ಈಡೇರಿಸಿಕೊಳ್ಳುವ ಅವನ ರೀತಿ-ನೀತಿಗಳೂ ದಾರಿ-ಬಟ್ಟೆಗಳೂ ಅಚ್ಚಳಿಯದೆ ಈಗಲೂ ಅವೇ ಇರುತ್ತವೆ. ಇಂದಿಗೂ ಪರಮಾತ್ಮನ ಬಗೆಗೆ ಅರಿವನ್ನುಂಟುಮಾಡಿಕೊಳ್ಳುವ, ಅರಿತುಕೊಂಡು ಆತನನ್ನು ಅಂಗವಿಸಿಕೊಳ್ಳುವ ಈ ವಿಚಾರವೇ ಎಲ್ಲಕ್ಕೂ ಶ್ರೇಷ್ಠವಾದ ಮಾನವ ಕರ್ತವ್ಯವಾಗಿದೆ. ಮತ್ತು ಅಧ್ಯಾತ್ಮಿಕ ಜೀವನದ ತಾತ್ವಿಕ ಸಮರ್ಥನೆಯು ಹಿಂದಿನಂತೆ ಇಂದಿಗೂ ಅವಶ್ಯಕವಾಗಿದೆ."

### ರಾಗೋದ್ರೇಕ

ಪ್ರಪಂಚದಲ್ಲಿಯ ಅಧ್ಯಾತ್ಮ ಪರಿಷತ್ತುಗಳು ಅನುಭವಾಮೃತವನ್ನು ನೀಡುವುದರ ಜೊತೆಗೆ ಸಾಧಕರ ಆತ್ಮ ಸಾಕ್ಷಾತ್ಕಾರಕ್ಕೆ ಅನುಕೂಲ ಪರಿಸ್ಥಿತಿಯನ್ನೂ ನಿರ್ಮಿಸುವದು ಅತ್ಯವಶ್ಯವಾದುದು. ರಾಗಭಾವವು ಮಾನವ ಜೀವನದಲ್ಲಿ ಅತ್ಯಂತ ಕೀಳುಮಟ್ಟದ ಅವಸ್ಥೆಯನ್ನು ಸೂಚಿಸುವದು;

ಇದಕ್ಕಿಂತ ಕೆಳಗೆ ಇನ್ನಾರು ಇಳಿಯುವರು? ಯಾರೂ ಇಲ್ಲ. ಈ ಕೀಳು ಅವಸ್ಥೆಯಲ್ಲಿ, ಕೊರೆಯುವ ಚಳಿಮಳೆಯಲ್ಲಿ, ಗಾಢವಾದ ಮಬ್ಬಿನಲ್ಲಿ, ಕತ್ತಲೆಯ ಕರಾಳ ಲೋಕದ ಜೀವರುಗಳು ಅತ್ತಿತ್ತ ಹಾರಾಡುತ್ತಿವೆ. ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು, ದಂಭ ಆಸೆ ಆಮಿಷಗಳು, ಹೊಟ್ಟೆಯುರಿ ಕುನಸು ಕಿನಸುಗಳು, ಸೇಡಿಗೆ ಸೇಡುತೀರಿಸಿ ಕೊಳ್ಳುವದು, ಲೇಸಿಗೆ ಕೇಡನ್ನು ಬಗೆಯುವದು—ಈ ಮುಂತಾದ ದುರ್ಗುಣ ಗಳು ರಾಗರಂಜಿತ ರಾಜ್ಯದ ಆಳದಲ್ಲಿ ಅವಿತುಕೊಂಡಿರುತ್ತವೆ. ಈ ಕತ್ತಲೆಯ ಲೋಕದಲ್ಲಿ ಮೂರ್ಖರು ಹುಟ್ಟುವರು, ಸಾಯುವರು; ಪರಿ ಶುದ್ಧತೆಯ ಶಾಂತಿಪ್ರಭೆಯನ್ನು ಅರಿಯದೆ ತಮ್ಮ ಸುತ್ತ ಬಳಸಿದ ಎಂದೆಂದಿಗೂ ತಮ್ಮನ್ನು ವ್ಯಾಪಿಸಿದ ಪ್ರಭುವಿನ ಪ್ರಕಾಶದ ಆನಂದವನ್ನು ಅರಿಯದೆ ಮೂಡುವರು; ಮುಳುಗುವರು. ಸಾವು-ನೋವು ದುಃಖ-ದಾರಿದ್ರ್ಯದಿಂದ ಕೂಡಿದ ಈ ರಂಜನಾಭಾವವು ಸಾಮಾನ್ಯ ಮಾನವನ ಲಕ್ಷಣವಾಗಿರುವದು; ಇದು ಅವನ ಜೀವನಕ್ಕೆ ಆಧಾರಭೂತವಾಗಿರುವದು. ಆದರೆ ಪರಮ ಶಾಂತಿಯು ಅವನು ಅಂಗವಿಸಿಕೊಳ್ಳಬೇಕಾಗಿದ್ದ ಅತ್ಯುನ್ನತವಾದ ಆದರ್ಶ ವೆಂಬುದನ್ನು ತಿಳಿದುಕೊಂಡರೆ ಸಾಕು. ಪ್ರಾರಂಭದಲ್ಲಿ ರಾಗಗಳ ದಾಸ ನಾಗಿರದಿದ್ದರೆ ಕ್ರಿಯಾಪ್ರವೃತ್ತನಾಗಲು ಶಕ್ತಿಯೇ ಇರುತ್ತಿರಲಿಲ್ಲ; ಕ್ರಿಯಾ ನಿವೃತ್ತಿಯಾಗಲು ಸಿದ್ಧಿಯೇ ಇರುತ್ತಿರಲಿಲ್ಲ; ರಾಗೋದ್ರೇಕವು ಶಕ್ತಿಸೂಚಕ ವಾಗಿರುವುದೇನೋ ಸರಿ; ಆದರೆ ಅದು ದುಷ್ಪ್ರವೃತ್ತಿಯ ಶಕ್ತಿಸೂಚಕವಾಗಿದೆ. ಅದರಿಂದ ಸುಖದ ಬದಲು ದುಃಖವೇ ಉದಿಸುವದು. ತಿಳಿಗೇಡಿಗಳ ಕೈಯಲ್ಲಿ ಅದರ ಸೆಳೆತ-ಸೂರೆಗಳು ಸಂಹಾರಕ ಉಪಕರಣಗಳಾಗುವಂತೆ ತಿಳುವಳಿಕೆಯುಳ್ಳವರ ಕೈಯಲ್ಲಿ ಅವೇ ಸಂರಕ್ಷಕ ಉಪಕರಣಗಳಾಗುವವು. ಅವನ್ನು ಹಿಡಿತದಲ್ಲಿಟ್ಟುಕೊಂಡು, ಕೇಂದ್ರೀಕರಿಸಿಕೊಂಡು ಉತ್ತಮ ಕಾರ್ಯದಲ್ಲಿ ಪರಿವರ್ತಿಸಿಕೊಂಡುದಾದರೆ ಅವು ಅತ್ಯದ್ಭುತವಾದ ಸತ್ಕ್ರಿಯಾಶಕ್ತಿಯನ್ನು ನಿದರ್ಶಿಸುವವು. ಸಾವು ನೋವಿನಿಂದ ಕೂಡಿದ ಈ ರಂಜನಾ ಭಾವವು ಮಾನವ ಜೀವನದ ಪ್ರತೀಕವಾಗಿರುವು ದಾದರೆ ಅಪಾರವಾದ ನವನವೋನ್ಮೇಷಶಾಲಿನಿಯಾದ ಸ್ಫುರಣಜ್ಞಾನವೂ

ಅನುಪಮವಾದ ಆನಂದ-ವೈಭವಗಳಿಂದ ಕೂಡಿದ ಶಾಂತಿಯೂ ದಿವ್ಯ ಜೀವನದ ಪ್ರತೀಕವಾಗಿರುವವು. ಮಾನವ ಜೀವನದಿಂದ ದಿವ್ಯ ಜೀವನಕ್ಕೆ ಸಾಗುವಾಗ ಅಲ್ಲಿ ಉಂಟಾಗುವ ಮಾರ್ಪಾಟವನ್ನು ಅಲೌಕಿಕವಾದ ಶಕ್ತಿಯೊಂದು ಹಿಂಬಾಲಿಸುವದು. ಈ ಶಕ್ತಿಯೇ ಪರುಷಮಣಿಯಂತೆ ಎರಡನ್ನೂ ಜೋಡಿಸುವದು. ವ್ರತ-ನೇಮಗಳು ತ್ಯಾಗ-ಸನ್ಯಾಸಗಳು ದಿವ್ಯಜೀವನವನ್ನು ಹೇಳಿಕೊಡುವದಿಲ್ಲ; ಆದರೆ ಆ ಜೀವನವು ಆಳವಡಲು ಅವು ಕೇವಲ ಸಾಧನೆಗಳು ಮಾತ್ರ. ಪ್ರಶಾಂತ ಶಕ್ತಿಯನ್ನು ನೀಡುವ ಪ್ರಶಾಂತವಾದ ಜ್ಞಾನದಲ್ಲಿ ದಿವ್ಯಜೀವನವು ಆವಿರ್ಭವಿಸುವದು. ಯಾಕೆಂದರೆ ದಿವ್ಯಜೀವನದಲ್ಲಿ ರಾಗಾದಿಗಳ ಆಟವಿಲ್ಲ; ಸತ್ಯ-ಸಿದ್ಧಾಂತಗಳ ಮಾಟವಿರುತ್ತದೆ. ಅದು ಗೊತ್ತು ಗುರಿಗಳಿಲ್ಲದ ಮನೋಭಾವನೆಗಳ ಆಧಾರದಲ್ಲಿ ನಿಲ್ಲುವದಿಲ್ಲ; ಸ್ಥಿರಸತ್ಯವಾದ ನಿತ್ಯವಾದ ನಿಯಮಗಳ ಆಧಾರದಲ್ಲಿ ನಿಲ್ಲುವದು. ಅದರ ಅಚ್ಚ ಪ್ರಶಾಂತವಾದ ವಾತಾವರಣದಲ್ಲಿ ಎಲ್ಲ ವಸ್ತು ಒಡವೆಗಳಿಗೆ ಒಂದು ಕ್ರಮವಾದ ಕಾರ್ಯ ಕಾರಣ ನ್ಯಾಯದ ಹೊಂದಿಕೆಯಿದೆ. ಅಲ್ಲಿ ದುಗುಡ ದುಮ್ಮಾನಗಳಿಗೆ ಕಾತರ ಕಾರ್ಪಣ್ಯಗಳಿಗೆ ಆಪತ್ತು ವಿಪತ್ತುಗಳಿಗೆ ಅನುತಾಪ ಪಶ್ಚಾತ್ತಾಪಗಳಿಗೆ ಅವಕಾಶವೇ ಇರುವದಿಲ್ಲ.

## ಧ್ಯಾನವು ದಿವ್ಯಜೀವನದ ಹೆಬ್ಬಾಗಿಲು

ಆಧ್ಯಾತ್ಮ ಪರಿಷತ್ತುಗಳು ಪರಿಶುದ್ಧರಾದವರ ಹೆಜ್ಜೆಯಲ್ಲಿ ಹೆಜ್ಜೆಯಿಡಲು ಅನುಕೂಲತೆಯನ್ನು ನೀಡುವದಾದರೆ ಅವು ಸಾಧಕರ ಸಮೂಹಕ್ಕೆ ಆಶ್ರಯವನ್ನೀಯಬೇಕು; ಶುದ್ಧಾಂತಃಕರಣದ ಸತ್ಯಸೇವಕರಿಗೆ ಸಹಾಯವನ್ನು ಸಲ್ಲಿಸಬೇಕು. ದೇವ ದೇವನ ದಿವ್ಯಯೋಜನೆಯಲ್ಲಿ ನಂಬುಗೆಯನ್ನು ತಾಳಿದ, ಆ ಯೋಜನೆಯಲ್ಲಿ ಪಾಲುಗಾರರಾಗಿ ವರ್ತಿಸಲು ಹಂಬಲಿಸುವ, ಆ ದೇವನ ಸಹೋದ್ಯೋಗಿಗಳಾಗಿ ವ್ಯವಹರಿಸುವ, ಅದಕ್ಕಾಗಿ ಧ್ಯಾನ ಮೌನದಲ್ಲಿ ಪ್ರಾರ್ಥನೆ ಪರಿಣಾಮಗಳಲ್ಲಿ ಜೀವನವನ್ನು ಮೀಸಲಾಗಿರಿಸುವ ಮತಿಯುತರಿಗೆ ಅದು ನೆರಳಾಗಬೇಕು. ಧ್ಯಾನವು ದಿವ್ಯಜೀವನದ ಥಳಥಳಿಸುವ ಹೆಬ್ಬಾಗಿಲು. ಅನನ್ಯವಾದ ಧ್ಯಾನದಿಂದ ಅಗಾಧವಾದ ಜೀವನದ ಆಳವನ್ನು ಅಳೆಯಲು ಅವಕಾಶವಿದೆ. ಭಕ್ತಿಜ್ಞಾನಗಳ ಉತ್ತುಂಗವಾದ ಶಿಖರವನ್ನು

ಕಾಣಲು ಶಕ್ಯವಿದೆ. ಧ್ಯಾನಗೆಯ್ಯದ ಜೀವನು ಬುದ್ಧನಾಗಲಾರ, ಬುದ್ಧನಾಗಿ ಮುಕ್ತನಾಗಲಾರ. ಆತ್ಮವಿದ್ಯೆಯ ಹಸಿವನ್ನು ಹಿಂಗಿಸಲು ಅಧ್ಯಾತ್ಮಪರಿಷತ್ತು ಗಳನ್ನು ರಚಿಸುವ ಆವಶ್ಯಕತೆಯು ಅಪಾರವಾದುದೇನೋ ನಿಜ. ಆದರೆ ಅವು ಶುಷ್ಕವಾದ ವಿತ್ತಂಡವಾದಿಗಳ ಚರ್ಚಾಕೂಟವಾಗಿ ಪರಿಣಮಿಸಿ ಅಧೋ ಗತಿಗಿಳಿಯದಂತೆ ಎಚ್ಚರಪಟ್ಟುಕೊಳ್ಳತಕ್ಕದ್ದು. ಬರಿಯ ಸಪ್ಪೆಯಾದ ಬೌದ್ಧಿಕ ತರ್ಕವಾದದ ಮಂದಿರದಲ್ಲಾಗಲಿ ವ್ಯಾಪಾರದ ಲಾಭದಾಸೆಗೆ ಸೇರುವ ಸಂತೆಯ ಅಂಗಡಿಯಲ್ಲಾಗಲಿ ಅವು ಮಾರ್ಪಟ್ಟು ಕೀಳು ತರಗತಿಯ ಅವಸ್ಥೆಗಿಳಿಯದಂತೆ ದಕ್ಷತೆಯನ್ನು ತಾಳತಕ್ಕದ್ದು. ಹಲಕೆಲವು ಪ್ರಾಮುಖ್ಯವಾದ ಸಿದ್ಧಾಂತ ತತ್ವಗಳ ತಳಹದಿಯಲ್ಲಿ ಸಂಸ್ಥೆಗಳು ರಚಿತವಾ ಗುವವು. ಆದರೆ ಸತ್ವ ಹೀನವಾದ ಸಿದ್ಧಾಂತಗಳಲ್ಲಿ ನವಚೈತನ್ಯವನ್ನು ತುಂಬು ವವರು, ಹೊಸ ಉಸಿರನ್ನು ಊದುವವರು ಅದರಲ್ಲಿ ಪಾತ್ರವನ್ನು ವಹಿಸುವ ವ್ಯಕ್ತಿಗಳು. ಸಂಘ ಸಂಸ್ಥೆಗಳ ಮಹತ್ವವು ಅವುಗಳ ಉದ್ದೇಶವನ್ನು ಈಡೇರಿ ಸುವಲ್ಲಿ ಕಟಿಬದ್ಧರಾದ ಅವುಗಳ ಸದಸ್ಯರ ಯೋಗ್ಯತೆಯನ್ನೇ ಅವಲಂಬಿ ಸಿರುತ್ತದೆ. ಆದುದರಿಂದ ದಿವ್ಯಯೋಜನೆಯಲ್ಲಿ ಪ್ರಬುದ್ಧವಾದ ನಂಬುಗೆಯನ್ನು ತಾಳಿರಬೇಕೆಂದು ಬೇರೆ ಹೇಳಬೇಕಾದುದಿಲ್ಲ.

ವಿಶ್ವದಲ್ಲೆಲ್ಲ ಅನಂತವಾದ ಅಪಾರವಾದ ಅಗಾಧವಾದ ಅನುಪಮ ವಾದ ದಿವ್ಯ ಜೀವನದ ಉಸಿರು ಹಾಸುಹೊಕ್ಕಾಗಿ ಹರಿದಾಡುತ್ತಿದೆ. ಕಣ್ಣ ಮಣಿಯಾಗಿ ಕುಣಿಯುತ್ತಿದೆ.—ಎಂದು ಪುರಾತನ ಜ್ಞಾನ ರಾಶಿಯು ಹೇಳಿ ಕೊಡುತ್ತಿದೆ. ಆ ಜೀವನವು ದಿವ್ಯಯೋಜನೆಯನ್ನು ಕ್ರಮಬದ್ಧವಾದ ಸೂತ್ರ ಸೌಂದರ್ಯಯುತವಾದ ಕಲಾವಿದನ ಕೃತಿಯನ್ನು ವಿಶ್ವದ ಬಗೆಬಗೆಯ ಆಗು ಹೋಗುಗಳ ವ್ಯವಹಾರದಲ್ಲಿ, ಅನಂತವಾದ ಸ್ಥಿತಿಗತಿಯಲ್ಲಿ, ಆವಿರ್ಭಾವ ಗೊಳಿಸುತ್ತದೆ. ಆದರೆ. ಭೌತಶಾಸ್ತ್ರದ ವಿವರಣೆಯಲ್ಲಿ ಅಡಕವಾಗಿರುವ ತತ್ವ ಗಳು. ಅದರಿಂದ ಹೊರಹೊಮ್ಮಿದ ಸಿದ್ಧಾಂತಗಳು ಈ ಭವ್ಯವಾದ ನವ್ಯವಾದ ವಿಚಾರಕ್ಕೆ ಪ್ರತಿರೋಧವಾಗಿ ಕಾರ್ಯಗೈಯುತ್ತಿವೆ. ಬಯಲು ವಕ್ರವಾಗಿದೆ. ಜಗವೆಲ್ಲ ಕಣ್ಕಾಣದ ಕುರುಡ ಶಕ್ತಿಗಳಿಂದ ತುಂಬಿದೆ. ನಾವೆಲ್ಲ ಅಪಾರ ವಾದ ಈ ವಿಶ್ವದಲ್ಲಿ ಧೂಳಿಕಣವೊಂದರ ಎದುರು ಅಣುವಿಗಿಂತಲೂ

ಅಣುವಾಗಿ ತೋರುವ ಘಟಕಗಳು—ಎಂದು ಅದು ಸಾರಿ ಹೇಳುತ್ತಿದೆ. ಈ ವಿಶ್ವದಿಂದ ಅರಿವು ಜೀವನ ಜೀವನಗಳು ಅಡಗಿ ಹೋಗಿರುವುವೆಂದೇ ಅದು ಎತ್ತಿ ಹೇಳುತ್ತಿದೆ. ಭೌತ ಶಾಸ್ತ್ರದಿಂದ ವಿವರಿಸಲ್ಪಟ್ಟ ನಮ್ಮ ವಿಶ್ವವು ಕೇವಲ ಯಾಂತ್ರಿಕವಾಗಿದೆ. ಪದಾರ್ಥ ವಿಜ್ಞಾನದ ಖಗೋಲ ವಿಜ್ಞಾನದ ಪಡಿಯಚ್ಚಿನಲ್ಲಿ, ಅರಿಯಲಾಗದ ಮೂಲ ವಸ್ತುವಿನಿಂದ ಅದು ರಚಿತವಾಗಿರುವದರಿಂದ ಅದರ ಸ್ವರೂಪವನ್ನು ಬೇರೆ ವಿಧವಾಗಿ ಅರಿಯಲು ಅವಕಾಶವಿಲ್ಲ.

## ಪ್ರಪಂಚವೊಂದು ಪಾಠಶಾಲೆ

ಅನಂತ ಪರವಸ್ತುವು ಈ ವಿಶ್ವದಲ್ಲಿ ಅಂತರ್ಗತವಾಗಿದೆಯೆಂದು ಪುರಾತನ ಜ್ಞಾನಿಗಳ ಸಿದ್ಧಾಂತವಿದೆ. ಈ ಪರವಸ್ತುವು ಅರಿವಿನ ಪ್ರತಿಯೊಂದು ಅವಸ್ಥೆಯಲ್ಲಿ ಅಣುರೇಣು ತೃಣಕಾಷ್ಠದ ಪ್ರತಿಯೊಂದು ಕಣದಲ್ಲಿ ವ್ಯಾಪಕವಾಗಿರುವುದೆಂದು ನೆನಿಸುವುದಾದರೆ ಈ ಪ್ರಪಂಚವು ಮೂರು ದಿನದ ಒಂದು ಸಂತೆಯಲ್ಲ; ಪ್ರವಾಸಕ್ಕಾಗಿ ಹೊರಟವರಿಗೆ ತಂಗುವದಕ್ಕಾಗಿ ರಚಿತವಾದ ಒಂದು ಧರ್ಮಶಾಲೆಯೂ ಅಲ್ಲ; ಆದರೆ ಮಾನವನಲ್ಲಿ ಹುದುಗಿದ ಅನಂತ ಶಕ್ತಿಗಳನ್ನು ಪ್ರಕಟಿಸಲು ತಕ್ಕುದಾದ ಒಂದು ಪಾಠಶಾಲೆಯಾಗಿದೆ. ವಿಶ್ವದ ಗತಿಯು ತಾಳಮೇಳವಿಲ್ಲದ ಗತಿಯು ಗಮಕವಲ್ಲ. ಆದರೆ ಅದೊಂದು ಸುಸಂಬದ್ಧವಾದ ಸುಮನೋಹರವಾದ ಕ್ರಮವು; ಬುದ್ಧಿಮತ್ತೆಯಿಂದ ಬೆರೆತ ಸಂಗೀತವನ್ನು ಹೊರಹೊಮ್ಮಿಸಲು ಮೊಸಲಾಗಿರಿಸಿದ ಕಲಾಕೃತಿಯು. ಈ ಯೋಜನೆಯು ಗತಿಯ ಗಮಕದ ಗುರಿಯಿಲ್ಲದೆ ತಿರುಗುವ ಅಣುಗಳಿಂದ ಉಂಟಾದ ಪ್ರತಿಕೃತಿಯಲ್ಲ. ಆದರೆ ಇದರಿಂದ ಗಣಿತದ ನಿಶ್ಚಿತವಾದ ಫಲಿತಾಂಶವೂ ಕ್ರಮಬದ್ಧವಾದ ಸಾಮರಸ್ಯವೂ ಸುಂದರವಾದ ಚಿತ್ರ ವಿಶೇಷವೂ ಸೂಚಿತವಾಗುತ್ತಿದೆ. ಇದರಿಂದ ನಮ್ಮೆದುರಿಗೆ ತೋರುವ ಈ ವಿಶ್ವರಂಗದ ಹಿನ್ನೆಲೆಯಲ್ಲಿ ಉದ್ದೇಶಪೂರ್ವಕವಾದ, ಅದನ್ನು ಸಂಚಾಲನಗೊಳಿಸುವ ಕಾಣದ ಕೈಯು ತುಂಬ ವ್ಯಾಪಿಸಿ ಕಾರ್ಯಗೈಯುತ್ತಲಿದೆ ಎಂದು ವ್ಯಕ್ತವಾಗುವದು. ಆ ಯೋಜನೆಯನ್ನು ಕಾಣಲು ದಿವ್ಯಾನಂದ ಬೆರೆತ ದಿವ್ಯದೃಷ್ಟಿಯೊಂದಿರಬೇಕು; ಆ ಯೋಜನೆಯನ್ನು ಕೃತಿಗಿಳಿಸಲು ಮಾನವ ಸ್ವಭಾವವನ್ನು ಅಮರವಾದ ದೈವೀಶಕ್ತಿಯಲ್ಲಿ ಪರಿವರ್ತಿಸಬೇಕು. ಜೀವನದಲ್ಲಿ

ಅಮರತತ್ವವು, ಕಾಲಾವಧಿಯಲ್ಲಿ ನಿರಂತರತ್ವವು, ಮಾನವತೆಯಲ್ಲಿ ದೇವತ್ವವು—ಇವು ಈ ಯೋಜನೆಯನ್ನು ಕಂಡರಿತು ಆದರ ಸಿದ್ಧಿಗಾಗಿ ಅವಿರತವಾಗಿ ಹೆಣಗಾಡುವವನ ಪದರಿಗೆ ಸೇರುವವು. ನಾಸ್ತಿಕನು ಈ ಯೋಜನೆಯನ್ನು ಅಲ್ಲಗಳೆಯುತ್ತಾನೆ; ಸಂದೇಹ ಸೂತಕಿಯು ಇದರ ಬಗೆಗೆ ಸಂಶಯಪಟ್ಟು ಕೊಳ್ಳುತ್ತಾನೆ; ತತ್ವಜ್ಞಾನಿಯು ಇದನ್ನು ಊಹಿಸುತ್ತಾನೆ; ಕವಿಯು ಭಾವಿಸುತ್ತಾನೆ; ಕಲಾವಿದನು ಕಲ್ಪಿಸುತ್ತಾನೆ; ಅನುಭಾವಿಯು ಅಂತರಿಕವಾಗಿ ತಿಳಿದುಕೊಳ್ಳುತ್ತಾನೆ; ಸಿದ್ಧ ಪುರುಷನು ಇದ್ದಕ್ಕಿದ್ದಂತೆಯೇ ಆ ದಿವ್ಯ ಯೋಜನೆಯನ್ನು ದಿವ್ಯದೃಷ್ಟಿಯಿಂದ ಅರಿಯುತ್ತಾನೆ. ಇಂತಹ ಅರಿವಿನ ಮಹಾಂತರು ಅಧ್ಯಾತ್ಮ ಪರಿಷತ್ತುಗಳಲ್ಲಿ ಸಾಧನೆಗೆಯ್ಯುವ ಸಾಧಕರ ಅನುಭವ ಸಾಧನೆಯನ್ನು ಸುಗಮವಾಗಿ ಸಾಗಿಸಲಿ.

---

# ಮರಣದ ಮಹತಿ

ಗ್ರೀಸ ದೇಶದ ಸಪ್ತಜ್ಞಾನಿಗಳಲ್ಲಿ ಒಬ್ಬ ಮೇಲಿಟಸ್ಸಿನ ಜ್ಞಾನಿಯನ್ನು ಕಂಡು ಒಬ್ಬನು ಕೇಳಿದನಂತೆ ಪ್ರಪಂಚಲ್ಲಿ ಅತಿ ಸುಲಭವಾದ ಕೆಲಸ ವಾವುದು? ಎಂದು. "ಇತರರಿಗೆ ಬುದ್ಧಿ ಹೇಳುವದು" ಎಂದು ಆ ಜ್ಞಾನಿಯು ಉತ್ತರ ಕೊಟ್ಟನಂತೆ. ಹಾಗೆಯೇ ಪ್ರಪಂಚದಲ್ಲಿ ಅತಿಕಠಿಣವಾದ ಕೆಲಸ ವಾವುದು ಎಂಬುವಕ್ಕೆ 'ನಿನ್ನ ನೀನರಿಯುವದು' ಎಂದು ಹೇಳಿದನಂತೆ. ತನ್ನ ತಾನರಿಯುವದು ಮತ್ತು ಆರು ನಾನೆಂದು ವಿಚಾರಿಸುವದು ನಿಜವಾಗಿಯೂ ಕಠಿಣವಾದ ಕೆಲಸವೇಕೆ ? ಕೋಽಹಂ ಎಂಬ ಪ್ರಶ್ನೆಗೆ 'ಸೋಽಹಂ' ಎಂಬುದು ಉಪನಿಷತ್ಕಾರರು ಕಂಡುಕೊಂಡ ಉತ್ತರ. ಬಹು ಪುರಾತನ ಕಾಲದ ಹಿಂದೆಯೇ 'ಆರು ನಾನು, ಎಂದು ತನ್ನಲ್ಲಿ ತಾನು ಆಲೋಚಿಸಿದಾಗ 'ಅವನೇ ನಾನು, ಇಲ್ಲವೆ 'ಅದುವೆ ನಾನು' ಎಂದು ಭಾರತವು ಉತ್ತರವನ್ನು ಹುಡುಕಿಕೊಂಡಿತು. "ಯೋ ಸಾವಸೌ ಪುರುಷ ಸೋಽಹಮಸ್ಮಿ—ಎಂದು ಈ ಈಶಾವಾಸ್ಯೋಪನಿಷತ್ತು ತಿಳಿಸಿಕೊಟ್ಟಿತು. ಆ ಪುರುಷನೇ ನಾನು—ಎಂದು ಹೇಳುವದಾದರೆ ಆ ಪುರುಷನ ಸ್ವರೂಪವಾವುದು? ಅವನ ನೆಲೆ ಕಲೆಗಳಾವವು ಎಂದು ಕೇಳುವದೂ ನೈಜವಾದ ಮಾತು. ಎಲ್ಲ ದೇಶಗಳಲ್ಲಿ ಎಂದಿನಿಂದಲೂ ಈ ಬಗೆಯಲ್ಲಿ ವಿಚಾರವು ನಡೆಯುತ್ತಲೇ ಬಂದಿರುತ್ತದೆ.

ಬಾಹ್ಯ ಪದಾರ್ಥಗಳ ಜ್ಞಾನವುಂಟಾಗುವದು ಇಂದ್ರಿಯಗಳ ಮುಖಾಂತರವಾಗಿಯಷ್ಟೆ. ಕಣ್ಣು ಕಿವಿ ನಾಲಗೆ ಇತ್ಯಾದಿ ಇಂದ್ರಿಯಗಳು ಬಾಹ್ಯವಿರಲಿ, ಚಿತ್ತ ಮನ ಬುದ್ಧಿ ಇತ್ಯಾದಿ ಆಂತರಿಕವಿರಲಿ ಈ ಉಪಕರಣಗಳಿಂದಲೇ ನಮಗೆ ಬಾಹ್ಯಪದಾರ್ಥಗಳ ವಿಷಯವಾಗಿ ತಿಳಿವಳಿಕೆಯುಂಟಾಗುವದು. ಬಾಹ್ಯಪದಾರ್ಥಗಳು ಪ್ರಕೃತಿಯಲ್ಲಿ ಸಮಾವೇಶವಾಗುವವು. ಅದರಂತೆ ನಮ್ಮ ಇಂದ್ರಿಯಗಳೂ ಪ್ರಕೃತಿಯಲ್ಲಿಯೇ ಸಮಾವೇಶವಾಗುವವು. ಪ್ರಕೃತಿಯ ಸಹಾಯದಿಂದ ಪ್ರಕೃತಿಯನ್ನರಿಯುವದೆಂತು? ನಿಜಕ್ಕೂ ವಸ್ತುಜ್ಞಾನ ಮಾಡಿಕೊಳ್ಳುವವನೂ ವಸ್ತುಗಳೂ ಬೇರೆಯಾಗಿರುತ್ತವೆ. ಈ ಭೇದವನ್ನು ಪಾಶ್ಚಿಮಾತ್ಯ ಸುಪ್ರಸಿದ್ಧ ತತ್ವಜ್ಞಾನಿಯಾದ ಕಾಂಟನೂ ಒಪ್ಪಿಕೊಳ್ಳುತ್ತಾನೆ.

ತಿಳಿಯಲ್ಪಡುವ ವಸ್ತುಗಳು ತಿಳಿದುಕೊಳ್ಳುವವನಿಂದ ಭಿನ್ನವಾಗಿದ್ದರೂ ಅವನಲ್ಲಿ ಅರುಹು ಜಾಗ್ರತವಾದ ಹೊರತು ವಸ್ತುಜ್ಞಾನವಾಗಲು ಅವಕಾಶವೇ ಇಲ್ಲ. ತಿಳಿವಳಿಕೆಗೆ ಅರುಹು ತಿಳಿಯಲ್ಪಡುವ ವಸ್ತುವಿಗೆ ಕುರುಹು ಎಂದು ವಚನಕಾರರು ಹೇಳುತ್ತಾರೆ. ಇದರಿಂದ ಪ್ರಕೃತಿಯು ಕುರುಹು, ಪುರುಷನು ಅರುಹು ಎಂದಂತಾಯಿತು. ಇಂದಿನ ವೈಜ್ಞಾನಿಕ ವ್ಯವಹಾರಗಳಿಗೆಲ್ಲ ಕಾರ್ಯ ಕಾರಣ ಭಾವವೇ ಮುಖ್ಯವಾಗಿದೆ. ಅಂತಹ ಕಾರ್ಯಕಾರಣ ಭಾವಕ್ಕೆ ಸಹ ಅರುಹೇ ಆಧಾರವಾಗಿದೆ. ಕಾರ್ಯಕಾರಣ ಭಾವವು ಪ್ರಕೃತಿಯಲ್ಲಿದೆಯೇ ಹೊರತು ಪುರುಷನಲ್ಲಿಲ್ಲ. ಬಹುಕಾಲದ ಹಿಂದೆಯೇ ಸಾಂಖ್ಯರು ಪ್ರಕೃತಿಯಲ್ಲಿಯ ಕಾರ್ಯಕಾರಣ ಭಾವವನ್ನು ಕಂಡುಕೊಂಡರು; ಮಾತ್ರವಲ್ಲ, ವಿಕಾಸವಾದ ಅಥವಾ ಪರಿಣಾಮವಾದವು ಪ್ರಕೃತಿಗೇ ಸಂಬಂಧ ಪಟ್ಟಿರುವುದೆಂಬುದನ್ನೂ ಅರಿತುಕೊಂಡರು. ವಸ್ತುಗಳೇನೋ ಹಲವಾಗಿರುವವು, ಆದರೆ ಅವನ್ನೆಲ್ಲ ನಿಯಂತ್ರಿಸುವ ಧರ್ಮವು (Law) ಮಾತ್ರ ಒಂದು; ಜಾಗರದ ಅವಸ್ಥೆಯಲ್ಲಿ ಬಿಡಿಬಿಡಿಯಾಗಿ ಕಾಣುವ ಈ ವಸ್ತುಗಳ ಜ್ಞಾನಕ್ಕೆ ಆಧಾರವಾಗಿರುವದು ನಮ್ಮ ಅರುಹು ಮಾತ್ರ. ನಾವು ಅರೆನಿದ್ದೆಯಲ್ಲಿದ್ದಾಗ, ನಾವು ಸ್ವಪ್ನ ಸೃಷ್ಟಿಯಲ್ಲಿ ಸುಳಿದಾಡುತ್ತಿರುವಾಗ, ಹಿಂದಿನ ಮತ್ತು ಇಂದಿನ ನಮ್ಮ ಸಂಸ್ಕಾರಗಳನ್ನು ಅವಲಂಬಿಸಿಯೇ ನಮ್ಮ ವ್ಯವಹಾರವು ಸಾಗುತ್ತಿರುವದು. ಈ ಸಂಸ್ಕಾರಗಳ ಮುಖಾಂತರವಾಗುವ ಅನುಭಾವಕ್ಕೂ ಅರುಹೇ ಆಧಾರವಾಗಿರುವದು. ಹಾಗೆಯೇ ತನಿಸಿದ್ದೆಯಲ್ಲಿ ನಾವು ಸುಖವಾಗಿ ಮಲಗಿದೆವೆನ್ನೋಣ; ನಮ್ಮ ವೃತ್ತಿಗಳು ಅಡಗಿದ ಆ ಸ್ಥಿತಿಯಲ್ಲಿಯ ಆನಂದಕ್ಕೂ ನಮ್ಮ ಅರುಹೇ ಆಧಾರವಾಗಿರುವದು. ನಮ್ಮ ಎಲ್ಲ ಅವಸ್ಥೆಗಳಿಗೂ ಎಲ್ಲ ಬಗೆಯ ವ್ಯವಹಾರಗಳಿಗೂ ಈ ಅರುಹು ಆಧಾರಸ್ತಂಭವಾಗಿರುವದು. ಇದನ್ನು ನೆನಿಸಿಕೊಂಡು ಈ ಅರುಹಿನ ಬಗೆಗೆ ನಿಜಗುಣಶಿವಯೋಗಿಗಳು ಹೀಗೆ ಹೇಳಿರುವರು :

ಅರಿವೆ ನೀನೆಂದು ಸದ್ಗುರು ಪೇಳೆ ತಿಳಿವನೆ—ಜಾಣರದೇವ.
ಅರಿವಿನೊಳನ್ಯ ಕಲ್ಪನೆಗಳನುಳಿದನೆ—ಜಾಣರದೇವ
ಅರಿವೆ ಪರಬ್ರಹ್ಮವೆಂದು ಭಾವಿಸುವನೆ—ಜಾಣರದೇವ
ಅರಿವನೆ ನಿತ್ಯ ನಿರ್ಮಳವೆಂದು ನೆನೆವನೆ—ಜಾಣರದೇವ
ಅರಿವೆ ನಿರ್ಗುಣ ನಿರ್ವಿಕೃತಿಯೆಂದು ಬಗೆವನೆ—ಜಾಣರದೇವ
ಅರಿವಿಲ್ಲದುದೆ ಜಡವೆಂದು ಬಿಡುವನೆ—ಜಾಣರದೇವ.

# ಮರಣದ ಮಹತಿ

ಗ್ರೀಸ ದೇಶದ ಸಪ್ತಜ್ಞಾನಿಗಳಲ್ಲಿ ಒಬ್ಬ ಮೇಲಿಟಸ್ಸಿನ ಜ್ಞಾನಿಯನ್ನು ಕಂಡು ಒಬ್ಬನು ಕೇಳಿದನಂತೆ ಪ್ರಪಂಚಲ್ಲಿ ಅತಿ ಸುಲಭವಾದ ಕೆಲಸ ವಾವುದು? ಎಂದು. "ಇತರರಿಗೆ ಬುದ್ಧಿ ಹೇಳುವದು" ಎಂದು ಆ ಜ್ಞಾನಿಯು ಉತ್ತರ ಕೊಟ್ಟನಂತೆ. ಹಾಗೆಯೇ ಪ್ರಪಂಚದಲ್ಲಿ ಅತಿಕಠಿಣವಾದ ಕೆಲಸ ವಾವುದು ಎಂಬುವಕ್ಕೆ 'ನಿನ್ನ ನೀನರಿಯುವದು' ಎಂದು ಹೇಳಿದನಂತೆ. ತನ್ನ ತಾನರಿಯುವದು ಮತ್ತು ಆರು ನಾನೆಂದು ವಿಚಾರಿಸುವದು ನಿಜವಾಗಿಯೂ ಕಠಿಣವಾದ ಕೆಲಸವೇಕೆ ? ಕೋಽಹಂ ಎಂಬ ಪ್ರಶ್ನೆಗೆ 'ಸೋಽಹಂ' ಎಂಬುದು ಉಪನಿಷತ್ಕಾರರು ಕಂಡುಕೊಂಡ ಉತ್ತರ. ಬಹು ಪುರಾತನ ಕಾಲದ ಹಿಂದೆಯೇ 'ಆರು ನಾನು, ಎಂದು ತನ್ನಲ್ಲಿ ತಾನು ಆಲೋಚಿಸಿದಾಗ 'ಅವನೇ ನಾನು, ಇಲ್ಲವೆ 'ಅದುವೆ ನಾನು' ಎಂದು ಭಾರತವು ಉತ್ತರವನ್ನು ಹುಡುಕಿಕೊಂಡಿತು. "ಯೋ ಸಾವಸೌ ಪುರುಷ ಸೋಽಹಮಸ್ಮಿ—ಎಂದು ಈ ಈ ಶಾವಾಸ್ಯೋಪನಿಷತ್ತು ತಿಳಿಸಿಕೊಟ್ಟಿತು. ಆ ಪುರುಷನೇ ನಾನು—ಎಂದು ಹೇಳುವದಾದರೆ ಆ ಪುರುಷನ ಸ್ವರೂಪವಾವುದು? ಅವನ ನೆಲೆ ಕಲೆಗಳಾವವು ಎಂದು ಕೇಳುವದೂ ಸ್ವೈಜವಾದ ಮಾತು. ಎಲ್ಲ ದೇಶಗಳಲ್ಲಿ ಎಂದಿನಿಂದಲೂ ಈ ಬಗೆಯಲ್ಲಿ ವಿಚಾರವು ನಡೆಯುತ್ತಲೇ ಬಂದಿರುತ್ತದೆ.

ಬಾಹ್ಯ ಪದಾರ್ಥಗಳ ಜ್ಞಾನವುಂಟಾಗುವದು ಇಂದ್ರಿಯಗಳ ಮುಖಾಂತರವಾಗಿಯಷ್ಟೆ. ಕಣ್ಣು ಕಿವಿ ನಾಲಗೆ ಇತ್ಯಾದಿ ಇಂದ್ರಿಯಗಳು ಬಾಹ್ಯವಿರಲಿ, ಚಿತ್ತ ಮನ ಬುದ್ಧಿ ಇತ್ಯಾದಿ ಆಂತರಿಕವಿರಲಿ ಈ ಉಪಕರಣಗಳಿಂದಲೇ ನಮಗೆ ಬಾಹ್ಯಪದಾರ್ಥಗಳ ವಿಷಯವಾಗಿ ತಿಳಿವಳಿಕೆಯುಂಟಾಗುವದು. ಬಾಹ್ಯಪದಾರ್ಥಗಳು ಪ್ರಕೃತಿಯಲ್ಲಿ ಸಮಾವೇಶವಾಗುವವು. ಅದರಂತೆ ನಮ್ಮ ಇಂದ್ರಿಯಗಳೂ ಪ್ರಕೃತಿಯಲ್ಲಿಯೇ ಸಮಾವೇಶವಾಗುವವು. ಪ್ರಕೃತಿಯ ಸಹಾಯದಿಂದ ಪ್ರಕೃತಿಯನ್ನರಿಯುವದೆಂತು? ನಿಜಕ್ಕೂ ವಸ್ತುಜ್ಞಾನ ಮಾಡಿಕೊಳ್ಳುವವನೂ ವಸ್ತುಗಳೂ ಬೇರೆಯಾಗಿರುತ್ತವೆ. ಈ ಭೇದವನ್ನು ಪಾಶ್ಚಿಮಾತ್ಯ ಸುಪ್ರಸಿದ್ಧ ತತ್ವಜ್ಞಾನಿಯಾದ ಕಾಂಟನೂ ಒಪ್ಪಿಕೊಳ್ಳುತ್ತಾನೆ.

ತಿಳಿಯಲ್ಪಡುವ ವಸ್ತುಗಳು ತಿಳಿದುಕೊಳ್ಳುವವನಿಂದ ಭಿನ್ನವಾಗಿದ್ದರೂ ಅವನಲ್ಲಿ ಅರುಹು ಜಾಗ್ರತವಾದ ಹೊರತು ವಸ್ತುಜ್ಞಾನವಾಗಲು ಅವಕಾಶವೇ ಇಲ್ಲ. ತಿಳಿಸಲಿಕೆಗೆ ಅರುಹು ತಿಳಿಯಲ್ಪಡುವ ವಸ್ತುವಿಗೆ ಕುರುಹು ಎಂದು ವಚನಕಾರರು ಹೇಳುತ್ತಾರೆ. ಇದರಿಂದ ಪ್ರಕೃತಿಯು ಕುರುಹು, ಪುರುಷನು ಅರುಹು ಎಂದಂತಾಯಿತು. ಇಂದಿನ ವೈಜ್ಞಾನಿಕ ವ್ಯವಹಾರಗಳಿಗೆಲ್ಲ ಕಾರ್ಯಕಾರಣ ಭಾವನೇ ಮುಖ್ಯವಾಗಿದೆ. ಅಂತಹ ಕಾರ್ಯಕಾರಣ ಭಾವಕ್ಕೆ ಸಹ ಅರುಹೇ ಆಧಾರವಾಗಿದೆ. ಕಾರ್ಯಕಾರಣ ಭಾವವು ಪ್ರಕೃತಿಯಲ್ಲಿದೆಯೇ ಹೊರತು ಪುರುಷನಲ್ಲಿಲ್ಲ. ಬಹುಕಾಲದ ಹಿಂದೆಯೇ ಸಾಂಖ್ಯರು ಪ್ರಕೃತಿಯಲ್ಲಿಯ ಕಾರ್ಯಕಾರಣ ಭಾವವನ್ನು ಕಂಡುಕೊಂಡರು; ಮಾತ್ರವಲ್ಲ, ವಿಕಾಸವಾದ ಅಥವಾ ಪರಿಣಾಮವಾದವು ಪ್ರಕೃತಿಗೇ ಸಂಬಂಧ ಪಟ್ಟಿರುವುದೆಂಬುದನ್ನೂ ಅರಿತುಕೊಂಡರು. ವಸ್ತುಗಳೇನೋ ಹಲವಾಗಿರುವವು, ಆದರೆ ಅವನ್ನೆಲ್ಲ ನಿಯಂತ್ರಿಸುವ ಧರ್ಮವು (Law) ಮಾತ್ರ ಒಂದು; ಜಾಗರದ ಅವಸ್ಥೆಯಲ್ಲಿ ಬಿಡಿಬಿಡಿಯಾಗಿ ಕಾಣುವ ಈ ವಸ್ತುಗಳ ಜ್ಞಾನಕ್ಕೆ ಆಧಾರವಾಗಿರುವದು ನಮ್ಮ ಅರುಹು ಮಾತ್ರ. ನಾವು ಅರೆನಿದ್ದೆಯಲ್ಲಿದ್ದಾಗ, ನಾವು ಸ್ವಪ್ನಸೃಷ್ಟಿಯಲ್ಲಿ ಸುಳಿದಾಡುತ್ತಿರುವಾಗ, ಹಿಂದಿನ ಮತ್ತು ಇಂದಿನ ನಮ್ಮ ಸಂಸ್ಕಾರಗಳನ್ನು ಅವಲಂಬಿಸಿಯೇ ನಮ್ಮ ವ್ಯವಹಾರವು ಸಾಗುತ್ತಿರುವದು. ಈ ಸಂಸ್ಕಾರಗಳ ಮುಖಾಂತರವಾಗುವ ಅನುಭಾವಕ್ಕೂ ಅರುಹೇ ಆಧಾರವಾಗಿರುವದು. ಹಾಗೆಯೇ ತನಿನಿದ್ದೆಯಲ್ಲಿ ನಾವು ಸುಖವಾಗಿ ಮಲಗಿದೆವೆನ್ನೋಣ; ನಮ್ಮ ವೃತ್ತಿಗಳು ಅಡಗಿದ ಆ ಸ್ಥಿತಿಯಲ್ಲಿಯ ಆನಂದಕ್ಕೂ ನಮ್ಮ ಅರುಹೇ ಆಧಾರವಾಗಿರುವದು. ನಮ್ಮ ಎಲ್ಲ ಅವಸ್ಥೆಗಳಿಗೂ ಎಲ್ಲ ಬಗೆಯ ವ್ಯವಹಾರಗಳಿಗೂ ಈ ಅರುಹು ಆಧಾರಸ್ತಂಭವಾಗಿರುವದು. ಇದನ್ನು ನೆನಿಸಿಕೊಂಡು ಈ ಅರುಹಿನ ಬಗೆಗೆ ನಿಜಗುಣಶಿವಯೋಗಿಗಳು ಹೀಗೆ ಹೇಳಿರುವರು :

ಅರಿವೆ ನೀನೆಂದು ಸದ್ಗುರು ಪೇಳೆ ತಿಳಿವನೆ—ಜಾಣರದೇವ
ಅರಿವಿನೊಳನ್ಯ ಕಲ್ಪನೆಗಳನುಳಿದನೆ—ಜಾಣರದೇವ
ಅರಿವೆ ಪರಬ್ರಹ್ಮವೆಂದು ಭಾವಿಸುವನೆ—ಜಾಣರದೇವ
ಅರಿವನೆ ನಿತ್ಯ ನಿರ್ಮಳವೆಂದು ನೆನೆವನೆ—ಜಾಣರದೇವ
ಅರಿವೆ ನಿರ್ಗುಣ ನಿರ್ವಿಕೃತಿಯೆಂದು ಬಗೆವನೆ—ಜಾಣರದೇವ
ಅರಿವಿಲ್ಲದುದೆ ಜಡವೆಂದು ಬಿಡುವನೆ—ಜಾಣರದೇವ.

ಈ ಅರುಹಿಗೆ ಪುರುಷ, ಸಂವಿತ್, ಆತ್ಮ ಎಂದು ಪರ್ಯಾಯ ನಾಮ ಗಳುಂಟು. ಆತ್ಮ ಶಬ್ದದ ವ್ಯುತ್ಪತ್ತಿಯನ್ನು ಹೇಳುವಾಗ ವಿದ್ಯಾರಣ್ಯರು- 'ಆತ್' – ಎಡೆವಿಡದೆ ಎಲ್ಲ ಕಡೆಗೂ ಇರು—ಎಂಬ ಸಂಸ್ಕೃತ ಧಾತುವಿ ನಿಂದ ಆಗಿದೆಯೆಂದು ತಿಳಿಸುತ್ತಾರೆ. ಯಾವಾಗಲೂ ಎಲ್ಲೆಡೆಯಲ್ಲಿಯೂ ಇದ್ದುದೇ ಆತ್ಮ ಎಂದವರು ವಿವರಿಸುತ್ತಾರೆ. ಫಾದರ ಹಿರಾಸ ಅವರು ಮಾತ್ರ ಆತ್ಮಪದವು ಮೂಲತಃ ಸಂಸ್ಕೃತ ಶಬ್ದವಲ್ಲವೆಂದು ಸಾಧಿಸುತ್ತಾರೆ. ಅವರು 'ಅತಮ್' ಮತ್ತು 'ಆನ್' ಎಂಬ ದ್ರವಿಡ ಶಬ್ದಗಳಿಂದ 'ಅತವ ಮಾನ್' ಎಂಬುದುಂಟಾಗಿ ಸ್ವರ ಪಲ್ಲಟದಿಂದ 'ಆತಮನ್' 'ಆತ್ಮನ್' ಎಂದಾಯಿತೆಂದು ನಿರ್ವಚನ ಮಾಡಿದ್ದಾರೆ. 'ಅತವು' ಎಂದರೆ ಅಧೋ ಲೋಕ; ಜಾಗ್ರ ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಗಳಿಗೆ ಸಂಬಂಧ ಪಟ್ಟುದು. ಈ ಅಧಃಸೃಷ್ಟಿಗೆ ಒಡೆಯನಾದವನೂ ಈ ಅವಸ್ಥಾತ್ರಯ ಗಳಿಗೆ ಅಧಿಪತಿಯಾದವನೂ ಆತ್ಮನು. ಅವನು ಈ ಪ್ರಪಂಚಕ್ಕೆಲ್ಲ ಆದಿಯಾ ಧಾರವಾಗಿದ್ದಾನೆ. ಹೊರಹೊಮ್ಮಿ ರೂಪುಗೊಳ್ಳುವ ಈ ಸೃಷ್ಟಿಗೆಲ್ಲ ಗೊತ್ತಿನ ಗುರಿಯಾದವನು ಈ ಆತ್ಮನೇ! ತನ್ನ ತಾನರಿದಡೆ ತನ್ನರಿವೇ ಗುರು ಎಂದು ಹೇಳುವರಷ್ಟೆ! ಈ ಅರುಹಿನ ದೆಸೆಯಿಂದ ಅವನು ಗುರುವಾಗಿಹನು ತಾನು ಅರುಹು ಸ್ವರೂಪನಾದರೆ ತಾನೆಂದೂ ಲಘುವಾಗನು. ಎಂದೆಂದಿಗೂ ಗುರುವವನು. ಆದುದರಿಂದ ಪ್ರಕೃತಿಯು ಲಘು, ಪುರುಷನು ಗುರು; ಕುರುಹು ಲಘು, ಅರುಹು ಗುರು. ಪ್ರಕೃತಿ ಪುರುಷಗಳನ್ನು ಕುರುಹು ಅರುಹುಗಳನ್ನು ಎರಡು ಪರಡಿಗಳಲ್ಲಿಟ್ಟು ತೂಗಿದರೆ ಪ್ರಕೃತ್ತಿಯು ಲಘು ವಾಗಿ ಪುರುಷನು ಗುರುವಾಗುವನು; ಎಂದರೆ ಪ್ರಕೃತಿಯ ಪರಿಪರಿಯ ಪಸಾರಕ್ಕೆ ಅದರೊಳಗಿನ ವಿಲಾಸ ವ್ಯಾಮೋಹಗಳಿಗೆ ಅವನು ಎಷ್ಟೂ ಬಾಗಲಾರನು. ಆದುದರಿಂದಲೇ ಅವನು ಗುರು. ಪದಾರ್ಥಗಳ ಯಥಾರ್ಥ ಜ್ಞಾನ ಇಲ್ಲವೆ ತಿಳಿವಳಿಕೆ ಮಾಡಿಕೊಳ್ಳುವದೆಂದರೆ ಅದರ ಮೇಲೆ ಪ್ರಭುತ್ವ ವನ್ನು ಪಡೆದಂತೆಯೇ ಸರಿ. ಈ ತಿಳಿವಳಿಕೆಗೆ ಚಿತ್—ಜ್ಞಾನ—ಎಂದು ಹೆಸರು. ಪ್ರಭುತ್ವವು ಶಕ್ತಿಗೆ ಲಕ್ಷಣವಾಗಿದೆ. ಜ್ಞಾನವೇ ಶಕ್ತಿ ಎಂದು ಪಾಶ್ಚಿಮಾತ್ಯರು (Knowledge is Power) ಹೇಳುವರು. ಪಂಚಭೂತ ಗಳನ್ನೆಲ್ಲ ಅಳವಾಡಿ ಅವುಗಳಲ್ಲಿ ಅಡಗಿದ ಗೂಢವನ್ನರಿತು ಅವುಗಳ ಮೇಲೆ

ಪಡೆದ ಪ್ರಭುತ್ವವೇ ಜ್ಞಾನ. ಆದುದರಿಂದ ಜ್ಞಾನವು ಶಕ್ತಿಯ ಗುರುತು. ಈ ಜ್ಞಾನಕ್ಕಾಗಿ ಆನಂದ. ಆನಂದ, ಶಕ್ತಿ, ಜ್ಞಾನ— ಇವೆಲ್ಲವೂ ಆತ್ಮನ ಅರುಹಿನ ಸ್ವರೂಪಗಳು.

ಇಲ್ಲಿ ಒಂದು ಮಾತನ್ನು ನೆನಪಿನಲ್ಲಿಡಬೇಕು. ಆತ್ಮವೆಂದರೆ ಪಾಶ್ಚಿಮಾತ್ಯರು ತಿಳಿಸುವಂತೆ. Ego, ಅಹಂಕಾರವಲ್ಲ. ಆತ್ಮನು ಅಥವಾ ಅರುಹು ಅಪರಿಮಿತವಾಗಿ ಪ್ರವಾಹ ರೂಪದಲ್ಲಿರುವದು. (Dynamic) ಅಹಂಕಾರವು ಪರಿಮಿತವಾಗಿ ಕೆಲವು ವಸ್ತು-ಒಡವೆಗಳಿಗೆ ಅಂಟಿಕೊಂಡು ಸ್ಥಗಿತವಾಗಿರುವದು (Static); ಅಂದರೆ ಅದು ಮಲದಿಂದ ಆವರಿಸಲ್ಪಟ್ಟಿರುವದು. ಸ್ವರೂಪ ವಿಸ್ಮೃತಿಯೇ ಮಲ. ಇದರಿಂದ ಅಹಂಕಾರವು ಮಾಯೆಗೀಡಾಗಿರುವದು; ಭಿನ್ನದೃಷ್ಟಿಗೆ ಒಳಗಾಗಿರುವದು. ಆದುದರಿಂದ ಪಾಪ ಪುಣ್ಯಗಳ ಕರ್ಮಕ್ಕೂ ಅದು ಗುರಿಯಾಗಿರುವದು. ಹಲವು ವಸ್ತು ಒಡವೆಗಳಿಗೆ ಕೆಲವು ವಿಚಾರ ವ್ಯಾಮೋಹಗಳಿಗೆ ಅಂಟಿಕೊಂಡಿರುವ ಸಂಕುಚಿತವಾದ ಅರುಹಿಗೆ ಅಹಂಕಾರವೆಂದು ನಾವು ಹೇಳಬಹುದು. ಆದರೆ ಮಲ ಮಾಯಾ ಕರ್ಮ—ಮರವೆ ಮೋಹಗಳಿಗೆ ಒಳಗಾಗದಿದ್ದ ಅರುಹು ನಿರ್ಮಲವಾಗಿ ಅಪರಿಮಿತವಾಗಿ ಅಪಾರವಾಗಿ ನಿರಂತರವಾಗಿ ಪ್ರವಹಿಸುತ್ತಿರುವದು; ನವನವೋನ್ಮೇಷಶಾಲಿನಿಯಾಗಿ ಅದು ಕಂಗೊಳಿಸುತ್ತಿರುವದು. ಒಂದು ಅವಸ್ಥೆಯಲ್ಲಿ, ಒಂದು ಪ್ರಕಾರದ ನಿಲವಿನಲ್ಲಿ, ಮಗದೊಂದು ಸನ್ನಿವೇಶದಲ್ಲಿ ನಮಗೆ ಉಂಟಾಗದೆ ಇದ್ದ ಜ್ಞಾನವು ಇನ್ನೊಂದು ಅವಸ್ಥೆಯಲ್ಲಿ, ಮತ್ತೊಂದು ನಿಲವಿನಲ್ಲಿ, ಮಗದೊಂದು ಸನ್ನಿವೇಶದಲ್ಲಿ ಆಗುತ್ತಿರುವದು. ಅನಿರೀಕ್ಷಿತವಾಗಿಯೂ ಒಮ್ಮೊಮ್ಮೆ ಗಮ್ಯವಾಗುತ್ತಿರುವದು; ಕಠಿಣವಾದ ' ಸಮಸ್ಯೆಗಳನ್ನು ಬಿಡಿಸಲು ಹೆಣಗಿ ಸಾಧ್ಯವಾಗದೆ ಅವುಗಳ ಬಗೆಗೆ ಇದ್ದ ಅಭಿಮಾನ ವ್ಯಾಮೋಹಗಳನ್ನು ತೊರೆದು ನಿರಾಸೆಯಿಂದಲೋ ಇಲ್ಲವೆ ನಿಶ್ಚಿಂತೆಯಿಂದಲೋ ಮಲಗಿರುವಾಗ ಆ ಸಮಸ್ಯೆಗಳಿಗೆ ಉತ್ತರವು ಎಷ್ಟೋ ಸಾರೆ ಸ್ವಪ್ನದಲ್ಲಿ ಸಿಗುತ್ತಿರುವದು; ಇಲ್ಲವೆ ಆ ಸಮಸ್ಯೆಗಳ ಪರಿಹಾರದಲ್ಲಿ ಇನ್ನೊಮ್ಮೆ ತೊಡಗಿದಾಗ ಅವು ಆಯಾಸವಿಲ್ಲದೆ ಬಿಟ್ಟು ಹೋಗುತ್ತಿರುವವು. ಈ ಎಲ್ಲ ಸಂಗತಿಗಳು ಜರುಗುವದು ನಮ್ಮ ಅವಸ್ಥೆಗಳನ್ನೆಲ್ಲ ಅಖಂಡವಾಗಿ ಬಳಸಿದ ಅರುಹಿನಿಂದಲೆ ! ಆಂಗ್ಲಕವಿ ಕಾಲರಿಜನು 'ಕುಬ್ಲಾಖಾನ'ಎಂಬ ಹೆಸರಿನ

ತನ್ನ ಕವಿತೆಯೊಂದನ್ನು ಸ್ವಪ್ನದಲ್ಲಿಯೇ ರಚಿಸಿ ಎಚ್ಚತ್ತು ಬರೆದಿಟ್ಟನಂತೆ. ಆರ್. ಎಲ್. ಸ್ಟಿವನ್‌ಸನ್ ಎಂಬ ಇನ್ನೊಬ್ಬ ಪ್ರಖ್ಯಾತನಾದ ಬರೆಹಗಾರನು ತನಗೆ ಸ್ವಪ್ನದಲ್ಲಿ ತೋರುತ್ತಿದ್ದ 'ಲಿಟಲ್ ಬ್ರಾವ್‌ನೀಜ' ಎಂಬವುಗಳ ಮುಖಾಂತರವಾಗಿ ತನ್ನ ಕಥೆ ಕಾದಂಬರಿಗಳಿಗೆ ವಸ್ತುಗಳನ್ನು ಪಡೆಯುತ್ತಿದ್ದ ನಂತೆ. ಇವೆಲ್ಲ ಮಾತುಗಳು ಅರುಹಿನ ಅಡೆತಡೆಯಿಲ್ಲದ ಕಾರ್ಯಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ. ಮನೋವಿಜ್ಞಾನಿಗಳು ಇಂತು ಕಾರ್ಯಗೆಯ್ಯುವ ಈ ಅರುಹಿಗೆ (Sub-conscious Mind) ಎಂದು ಹೇಳುವರು. ಆದರೆ Ego--ಅಹಂ--ಇದರ ಲಕ್ಷಣವೇ ಬೇರೆ. ಮಾನವನಲ್ಲಿ ಕರ್ತೃತ್ವಾಭಿಮಾನ ಫಲಾಪೇಕ್ಷೆ ಇವು ನೈಜವಾಗಿರುವವು. ಇವು ಇರುವಲ್ಲೆಲ್ಲ ಅಹಂ ಕಾರಕ್ಕೆ ಅವಕಾಶವುಂಟು. ಇವೆರಡೂ ಇಲ್ಲನಾದರೆ—ಮಲ ಮಾಯೆ ಮರವೆಯೆಂದೆನಿಸಿದ ಇವುಗಳಿಂದ ಮಾನವನು ನಿರ್ಲಿಪ್ತನಾದರೆ--ಅವನು ಅಹಂಕಾರ ಮಮಕಾರಗಳಿಂದ ನಿವೃತ್ತಿಯನ್ನು ಪಡೆಯುವನು. ಅಹಂಕಾರದಿಂದ ಬಿಡುಗಡೆಯನ್ನು ಹೊಂದಿದಾಗ ಅಂದರೆ ನಿರಹಂಕಾರದಲ್ಲಿ ನಿಲವನ್ನು ಪಡೆದಾಗ ಅವನಲ್ಲಿ ನಿರ್ಮಲಮತಿಯು ಮೂಡುವದು, ಅರುಹು ಬೆಳಗುವದು, ಆತ್ಮಸ್ವರೂಪವು ಥಳಥಳಿಸಿ ಹೊಳೆಯುವದು. ನಿವೃತ್ತಿಯನ್ನು ಪಡೆಯುತ್ತ ನಡೆಯವದಕ್ಕೆ ವಿಯೋಗ ಸಾಧನೆಯೆಂದು ಕರೆಯೋಣ. ಈ ಸಾಧನೆಯಲ್ಲಿ ಮಾನವನು ಧ್ಯಾನಯೋಗದಿಂದ ವೃತ್ತಿಲಯವನ್ನು ಸಾಧಿಸಬೇಕು. ಆಗ ಅರುಹು ಸಮಗ್ರವಾಗಿದೆಯೆಂದೂ ಎಲ್ಲ ಅವಸ್ಥೆಗಳನ್ನು ಅದು ಬಳಸಿದೆಯೆಂದೂ ಅದು ಬಿಡಿಬಿಡಿಯಾಗಿಲ್ಲವೆಂದೂ ತಿಳಿಯುವನು; ಇಂತಹ ಅರುಹು ಪ್ರಕಾಶಮಯವಲ್ಲದೆ ಪ್ರಶಾಂತವೂ ಆಗಿದೆ ಎಂದೂ ಅವನ ಅನುಭವಕ್ಕೆ ನಿಲುಕುವದು. ವಿಕಲ್ಪಗಳಿಲ್ಲದ ನಿರ್ವಿಕಲ್ಪ ಸ್ಥಿತಿಯಲ್ಲಿ ಅವನು ನಿಃಶಬ್ದ ನೀರವವಾದ ಶಾಂತಿಯನ್ನು, ಪ್ರಗಲ್ಭ ಪ್ರಗಾಢವಾದ ಶಾಂತಿಯನ್ನು, ಅಪಾರವಾದ ಅನುಪಮವಾದ ಶಾಂತಿಯನ್ನು, ಗಹನವಾದ ಗಂಭೀರವಾದ ಶಾಂತಿಯನ್ನು; ಆಳವಾದ ನೀಳವಾದ ನಿರರ್ಗಳವಾದ ಶಾಂತಿಯನ್ನು (Infinite Luminous Silence) ಅನುಭವಿಸುವನು.

ತನಿನಿದ್ರೆಯಲ್ಲಿಯೂ ಒಂದು ಬಗೆಯ ಶಾಂತಿಯನ್ನು ಕಾಣುವೆವು. ಆದರೆ ಅಲ್ಲಿ ಅನುಭಾವ ಪ್ರಕಾಶವಿಲ್ಲ; ಅದಕ್ಕಾಗಿ ಪದಾರ್ಥಗಳ ಜ್ಞಾನವೂ

ಇಲ್ಲ, ಅರಿವೂ ಇಲ್ಲ. ಅದೇ ತುರೀಯದಲ್ಲಿ (Super-consciousness) ಅಥವಾ ನಿರ್ವಿಕಲ್ಪ ಧ್ಯಾನದಲ್ಲಿ ಇದ್ದಾಗ ಪ್ರಕಾಶಮಯವಾದ ಶಾಂತಿಯು ಪ್ರಸ್ಫುರಿಸುವದು. ಪಾಶ್ಚಿಮಾತ್ಯ ತತ್ವಜ್ಞಾನಿಗಳು ಈ ತುರೀಯ ಅವಸ್ಥೆಯನ್ನು ಒಪ್ಪಿಕೊಳ್ಳುವುದರಲ್ಲಿ ಇನ್ನೂ ಅನುಮಾನಿಸುತ್ತಲೇ ಇದ್ದಾರೆ. ಆದರೆ ಅಚ್ಚ ಅರುಹಿನ ನಿಚ್ಚ ಎಚ್ಚರಿಕೆಯ ಈ ಅವಸ್ಥೆಯನ್ನು, ಪರಮಶಾಂತಿಯು ಮೂಡಿರುವ ಈ ಯೋಗದ ನಿಲವನ್ನು ಭಾರತೀಯರು ಅದು ಎಂದೋ ಕಂಡು ಆನಂದ ಪಡೆಯಲು ಹವಣಿಸುತ್ತ ಬಂದಿರುವರು. ನದಿಗಳು ಸಾಗರದೆಡೆಗೆ ಧಾವಿಸುವಂತೆ ಮಾನವನ ಸಹಜವಾದ ಪ್ರವೃತ್ತಿಗಳೂ ಆವನ ಕಾರ್ಯಕಲಾಪಗಳೂ ಈ ಶಾಂತಿಗಾಗಿ ತವಕಿಸುತ್ತಿವೆ. ವಿಶ್ವದ ವಿವಿಧ ಘಟಕಗಳಾದರೂ ತಮ್ಮ ಮೊದಲಿನ ಸಮಾನಸ್ಥಿತಿಯನ್ನು ಹೊಂದುವ ಪಕ್ಕಾಗಿಯೇ ಹೆಣಗಾಡುತ್ತಿವೆ. ಪ್ರಾಜ್ಞರೂ ಪರಿಣತಮತಿಗಳೂ ಎಂದೆನಿಸಿ ಕೊಳ್ಳುವವರು ಪಾಡುಪಡುತ್ತಿರುವದಾದರೂ ಈ ಶಾಂತಿಗಾಗಿ! ಬುದ್ಧಿವಂತರು ಇದ್ದ ಬುದ್ಧಿಯನ್ನು ಕಳೆದುಕೊಂಡು ಯುದ್ಧಮಾಡುವದೂ ಶಾಂತಿಗಾಗಿ ಎನ್ನೋಣವೇ ? ಶಾಂತಿಗಾಗಿ ಇರುವ ಈ ಹೆಣಗಾಟ ಹೋರಾಟಗಳ ಗೂಢವನ್ನರಿಯಬೇಕು. ಯಾವ ಶಾಸ್ತ್ರಕ್ಕಾದರೂ ಒಂದು ಪ್ರಯೋಜನ ಪುಂಟು. ಅದರಂತೆ ಅಹಂಕಾರವನ್ನು ಮೃತ್ಯುವಿಗೆ ಈಡು ಮಾಡಿ ಅನುಪಮವಾದ ಶಾಂತಿಯನ್ನು ನೀಡುವದು ಅಧ್ಯಾತ್ಮಶಾಸ್ತ್ರದ ಪ್ರಯೋಜನ. ಈ ಅನುಪಮವಾದ ಶಾಂತಿಯನ್ನು ಪಡೆಯುವದು ಅಧ್ಯಾತ್ಮ ಜೀವನದ ಗುರಿ. ತೋರಿಕೆಗೆ ತ್ರಿವಿಧವಾಗಿ ಕಾಣುವ ಅರುಹಿನ ಅವಸ್ಥೆ ಗಳನ್ನೊಳಗೊಂಡು ಅವನ್ನೆಲ್ಲ ಮೀರಿ ಹೊರಚಲ್ಲಿ ನಿಲ್ಲುವದು ಅನುಭಾವದ ಘನವಾದ ನಿಲವು. ಕರ್ತೃತ್ವಾಭಿಮಾನ ಫಲಾಪೇಕ್ಷೆ— ಇವುಗಳಿಂದೊಡ ಗೂಡಿದ ಅಹಂಭಾವವನ್ನು ತುಳಿದು ನಿಂತು ಸೋಹಂ ಭಾವವನ್ನು ಸಂಪಾದಿಸಿಕೊಳ್ಳುವದು ಅಧ್ಯಾತ್ಮ ಸಂಪತ್ತಿ. ಬಾಹ್ಯ ಕುರುಹಿಂಗೆ ಅಂಟ ಕೊಳ್ಳದೆ ವೃತ್ತಿಗಳನಳಿದುಕೊಂಡು ಆತ್ಮಾನಾತ್ಮ ವಿವೇಕದಿಂದ ಕೈವಲ್ಯ ಪಡೆಯುವದೇ ಅನುಭಾವ ಸಿದ್ಧಿ! ಇದರಿಂದ ಅಧ್ಯಾತ್ಮಶಾಸ್ತ್ರದಿಂದಣ್ಮುವ ಅಧ್ಯಾತ್ಮ ಜೀವನ ಅನುಭಾವ ಸಿದ್ಧಿಗಳ ಆವಶ್ಯಕತೆ ಎಷ್ಟಿದೆ—ಎಂಬುದು ಸ್ಪಷ್ಟವಾಗುವದು.

ಆದರೆ ಇಂತಹ ಅಮರಶಾಂತಿಯು ಅನಾಯಾಸವಾಗಿ ಲಭಿಸದೆಂಬುದನ್ನು ಅರಿಯಬೇಕು; ಅಹಂಭಾವವು ಅಮರಶಾಂತಿಯನ್ನು ಮರೆಮಾಡಿದಂತೆ ಅಂಜಿಕೆಯನ್ನೂ ಮುಂದು ಮಾಡಿದೆ. ಅಂಜಿಕೆ ಅಳುಕುಗಳು ಮಾನವನಲ್ಲಿ ಅಧೈರ್ಯವನ್ನು ಹುಟ್ಟಿಸಿ ಅವನ ಪ್ರಗತಿಗೆ ತಡೆಯನ್ನೊಡ್ಡುವವು. ತ್ರಿಕರಣ ಪೂರ್ವಕವಾದ ಪ್ರಯತ್ನವಿಲ್ಲದೆ ಪ್ರಪಂಚದಲ್ಲಿ ಯಾವದೂ ಸಾಧ್ಯವಿಲ್ಲ. ಅಂಜಿಕೆಯು ಜೀವನದ ಎಲ್ಲ ರಂಗಗಳನ್ನೂ ವ್ಯಾಪಿಸಿರುವದರಿಂದ ಧೈರ್ಯದಿಂದ, ಧೀರೋದಾತ್ತ ವೃತ್ತಿಯಿಂದ ಅದನ್ನು ಎದುರಿಸಿ ದಿವ್ಯಜೀವನವನ್ನೂ ಅಮರ ಶಾಂತಿಯನ್ನೂ ಪಡೆಯಬೇಕು. ಈ ಸಂದರ್ಭದಲ್ಲಿ ಅಲ್ಲಮ ಪ್ರಭುದೇವರ ವಚನವೊಂದನ್ನು ನೆನೆದುಕೊಳ್ಳುವಾ—

ಕಳ್ಳಗಂಜಿ ಕಾಡ ಹೊಕ್ಕಡೆ ಹುಲಿ ತಿಂಬುದ ಮಾಣ್ಬುದೇ ?
ಹುಲಿಗಂಜಿ ಹುತ್ತವಹೊಕ್ಕಡೆ ಸರ್ಪ ಕಚ್ಚದೆ ಮಾಣ್ಬುದೇ ?
ಕಾಲಗಂಜಿ ಭಕ್ತನಾದಡೆ ಕರ್ಮ ತಿಂಬುದ ಮಾಣ್ಬುದೇ ?
ಮೃತ್ಯುವಿನ ಬಾಯ ತುತ್ತಾದ ವೇಷಡಂಬಕರನೇನೆಂಬೆ ಗುಹೇಶ್ವರ.

ಇಂದ್ರಿಯಂಗಳ ವ್ಯವಹಾರಕ್ಕೆ ಸಂಸಾರವೆಂದೂ ಕರೆಯುವರು. ಸಂಸಾರದ ಸವಿಗಾಗಿ ಇಂದ್ರಿಯ ಭೋಗೋಪಭೋಗಕ್ಕಾಗಿ ಇಲ್ಲವೆ ಅವುಗಳ ತೃಪ್ತಿಗಾಗಿ ಮಾನವನು ತವಕಿಸುತ್ತಾನೆ. ಆದರೆ ಭೋಗಲಾಲಸೆಯು ಬೆಳೆದಂತೆ ಇಂದ್ರಿಯಗಳು ತೃಪ್ತಿಯನ್ನು ಪಡೆಯದೆ ತಪ್ತವಾಗುತ್ತ ನಡೆಯುವವು. ವಶವರ್ತಿಯಾಗದ ಇಂದ್ರಿಯಗಳು ಅರುಹನ್ನು ಕೆಡಸಿ ಕುರುಹನ್ನು ಅಂದರೆ ವಿಷಯಗಳನ್ನು ಆರಡಿಗೊಳ್ಳುವವು. ಅವು ಆತ್ಮನನ್ನು ಅಪಹರಿಸುವವು, ಕದ್ದುಬಿಡುವವು. ವಿಷಯಸುಖವನ್ನು ಬಲ್ಲಂತೆ ಬಯಸಿ ಯಾರಿಗೂ ತಿಳಿಯದಂತೆ ಆತ್ಮನನ್ನು ಕಳವು ಮಾಡಿ ಪೀಡಿಸುವ ಈ ಇಂದ್ರಿಯಗಳ ಭಯವು ಸಂಸಾರದಲ್ಲಿ ಸರ್ವತ್ರ ವ್ಯಾಪಿಸಿದೆಯೆಂದು ಆಲೋಚಿಸಿ ಮಾನವನು ಸಂಸಾರದೀಕ್ಷೆ ಪಡೆಯಲೆಳಸುವನು. ಆಗ ಕಳ್ಳರಂಜಿಕೆಯಿಂದ ಕಾಡನ್ನು ಸೇರಿದರೆ—ಸಂಸಾರವನ್ನು ತ್ಯಜಿಸಿ ಸನ್ಯಾಸ ಮಾರ್ಗವನ್ನಾಶ್ರಯಿಸಿದರೆ-ಅಲ್ಲಿಯೂ ಒಂದಂಜಿಕೆ. ಕಾಮಕ್ರೋಧಾದಿಗಳ ಉಪಟಳ ಭೀತಿಗಳು ಸಾಕಷ್ಟಿವೆ ಅಲ್ಲಿ. ಕಾಡನಲ್ಲಿ ಹುಲಿ ಮೊದಲಾದ ಕ್ರೂರ ಪಶುಗಳ ಭೀತಿಯಿರುವಂತೆ ಸನ್ಯಾಸದೀಕ್ಷೆಯನ್ನು

ಪಡೆದು ಕಾಡಿನಲ್ಲಿ, ಸಜ್ಜನಿಕೆಯಲ್ಲಿ ವ್ಯವಹರಿಸುತ್ತಿರುವ ಮಾನವನಿಗೆ ಕಾಮಾದಿಗಳೆಂಬ ಕ್ರೂರ ಕುರೂಪಿಗಳಾದ ಗುಣಗಳ ಭಯವುಂಟಾಗುವದು. ಅವನನ್ನು ತಿಕ್ಕಿ ಮುಕ್ಕುವ ಇವುಗಳ ಕೈಯೊಳಗಿಂದ ಪಾರಾಗಿ ಮುನ್ನಡೆಯಿಡುವಾಗ ಸಾಕುಬೇಕಾಗುವದು. ಆದುದರಿಂದ ಸನ್ಯಾಸ ಮಾರ್ಗವನ್ನು ಬಿಟ್ಟು ಯೋಗ ಮಾರ್ಗವನ್ನಾದರೂ ಕೈಕೊಳ್ಳೋಣವೆಂದು ಮಾನವ ಬುದ್ಧಿಗೆ ಅನಿಸುವದು. ಅಗಲಾದರೂ ಅಂಜಿಕೆ ತಪ್ಪೀತೆಂದು ಅದು ಹಂಬಲಿಸುವದು. ಯೋಗ ಮಾರ್ಗವೇನೋ ಚಿತ್ತವೃತ್ತಿನಿರೋಧಕ್ಕಾಗಿ. ಆದರೆ ಅಲ್ಲಿಯೂ ಯೋಗ ಸಾಧಕನಿಗೆ ಅತುಲವಾದ ಭಯ. ಯೋಗಿಗೆ ಸುಷುಮ್ನೆಯ ದ್ವಾರದಿಂದ ಬ್ರಹ್ಮರಂಧ್ರದಲ್ಲಿ ನಿಂತು ಓತಪ್ರೋತವಾಗಿ ಸುರಿಯುವ ಅಮೃತರಸಾಸ್ವಾದನೆಯೇ ಲಕ್ಷ್ಯವಾಗಿರುವದು. ಇದಕ್ಕಾಗಿ ಅವನು ಆಧಾರಚಕ್ರದಿಂದ ಮೊದಲ್ಗೊಂಡು ಆಜ್ಞಾಚಕ್ರದ ವರೆಗಿನ ಷಟ್‌ಚಕ್ರಗಳ ನಿಲವನ್ನು ಮೀರಿ, ತನಗೆ ಕೈಸೆರೆಯಾಗುವ ಸಿದ್ಧಿಗಳ ಕೈಯೊಳಗಿಂದ ಜಾರಿ, ಸಹಸ್ರಾರದಲ್ಲಿ ಸೇರಬೇಕು; ದೇಹದ ಈ ಹುತ್ತದಲ್ಲಿ ನಿಲುಕಡೆಯನ್ನು ಪಡೆಯಬೇಕು; ಅಧೋಮುಖಿಯಾದ ಸುಪ್ತವಾದ ಕುಂಡಲಿನಿ ಶಕ್ತಿಯನ್ನು ಜಾಗ್ರತಗೊಳಿಸಿ ಊರ್ಧ್ವಮುಖಕ್ಕೆ ತಿರುಗಿಸಿ ಅದನ್ನು ಷಟ್‌ಚಕ್ರ ಭೇದಿನಿ ಎನಿಸಬೇಕು ಎಂದು ಉತ್ಕಟ ಇಚ್ಛೆಯುಳ್ಳವನಾಗುವನು; ಉನ್ನತ ಆಕಾಂಕ್ಷೆಯುಳ್ಳವನಾಗುವನು. ಈ ಅವನ ಸಾಹಸದಲ್ಲಿ ಷಟ್‌ಕರ್ಮಗಳಿಂದ ಅವನಿಗೊದಗುವ ತೊಂದರೆಯೊಂದೆಡೆಗಿರಲಿ; ಆದರೆ ಅಜಾಗರೂಕತೆಯಿಂದ ಆ ಜಾಗ್ರತವಾದ ಕುಂಡಲಿನಿ ಎಂಬ ಸರ್ಪವು ಕಚ್ಚುವ ಭಯವುಂಟು; ಕಾಯಸಿದ್ಧಿಯನ್ನು ಪಡೆಯಬೇಕೆಂಬ ಹಂಬಲದಲ್ಲಿ ಕಾಯದ ಸುಸ್ಥಿತಿಯೇ ಕೆಟ್ಟು ಅನಂತ ಯಾತನೆಗಳಿಗೆ ಗುರಿಯಾಗುವ ಭಯವೂ ಉಂಟು. ಸನ್ಯಾಸ ಯೋಗಮಾರ್ಗಗಳು ಎಲ್ಲರಿಗೂ ಸಾಧಿಸುವ ಹಾದಿಗಳಲ್ಲ; ಇದಕ್ಕಾಗಿ ಭಕ್ತಿಯನ್ನೇನಾದರೂ ಮಾಡಿ ಸುಖವನ್ನು ಕಾಣೋಣವೇ?—ಎಂದು ಮಾನವನು ಹರಿದಾಡುವದು ಸಹಜ. ಭಕ್ತಿಯನ್ನು ವಹಿಸಿ ನಡೆಯುವದು ಸುಲಭವಾದ ದಾರಿಯೆಂದೂ ಅನೇಕರು ಹೇಳುತ್ತಾರೆ. ಈ ಪ್ರಪಂಚದಲ್ಲಿ ಉಂಟಾಗುವ ಕಷ್ಟನಷ್ಟಗಳಿಗೆ, ಆಪತ್ತು-ವಿಪತ್ತುಗಳಿಗೆ, ವ್ಯಸನ-ವಿಡ್ಡುರಗಳಿಗೆ ಹೆದರಿ ಕಾಲನ ತುತ್ತಿಗೀಡಾಗದೆ ಕಾಲಹರನನ್ನು ಮೊರೆಹೋಗಬೇಕೆಂಬನು ಮಾನವನು; ಮಾಡಿದ್ದನ್ನುಣ್ಣ

ಬೇಕು ಮಾಹಾರಾಯನೇ ಎಂದು ಹೇಳುವನು ದೇವನು. ಕರ್ಮಗಳ ಕತ್ತರಿಗೆ ಹೆದರಿ ಭಕ್ತನಾಗ ಬಯಸುವದು ಹೊಲ್ಲ. ದೇವನಿಗಾಗಿ ದೇವ ನಲ್ಲಿ ಪ್ರೇಮವನ್ನು ವ್ಯಕ್ತಗೊಳಿಸಬೇಕು; ತನಗಾಗಿ ನೀಡಿದ ದಾನವನ್ನು ನೆನೆದು ದಾತೃವಿನ ಮೊರೆಹೊಗಬೇಕು ಭಕ್ತನಾದವನು. ನಿಸ್ಸೀಮವಾಗಿ ಲೀನವಾಗಿರಬೇಕು ಪ್ರೇಮದ ನಿಚ್ಚೈರಗಿನಲಿ. ಭಯದಿಂದ ಬಾಗುವದು ಭಕ್ತಿಯ ನಿಲವಿನಲ್ಲಿರುವ ಕುಂದು ಕೊರತೆಯ ಲಕ್ಷಣವು. ಪ್ರೇಮಕ್ಕೆ ಭಯ ಗೊತ್ತಿಲ್ಲ. ಪ್ರೇಮಕ್ಕೆ ಕೊಡುಕೊಳ್ಳೆಯ ವ್ಯವಹಾರವೂ ಗೊತ್ತಿಲ್ಲ. ಪ್ರೇಮ ಕ್ಕಾಗಿ ನಿರ್ಹೇತುಕವಾದ ನಿರ್ವ್ಯಂಜಕವಾದ ಪ್ರೇಮವೇ ಇರಬೇಕು. ಕಷ್ಟವನ್ನು ಪರಿಹರಿಸೆಂದಾಗಲಿ, ಸುಖವನ್ನು ನೀಡೆಂದಾಗಲಿ ಕಾರ್ಪಣ್ಯದಿಂದ ಬೇಡುತ್ತ ಮಾಡುವ ಭಕ್ತಿಯು ಕಾಮ್ಯಭಕ್ತಿಯಾಗಿ ಬಿಡುವದು. ಕಾಮ್ಯ ಭಕ್ತಿಗೆ ದೇವನೊಲಿಯನು, ಕರ್ಮವೂ ನಾಶವಾಗದು. ಪ್ರಾರಬ್ಧವನ್ನು ಸವೆಸಬೇಕಾದರೆ ಎರಡೇ ಎರಡು ಹಾದಿಗಳು: ಒಂದು ಅದನ್ನೆಲ್ಲ ತಾಳ್ಮೆ ಯಿಂದ ಅನುಭವಿಸುವಷ್ಟು ಕಷ್ಟಸಹಿಷ್ಣುತೆ, ಇನ್ನೊಂದು ಜ್ಞಾನ. ಕಷ್ಟ ಗಳಿಗೆ ಹೆದರಿ ದೇವನಲ್ಲಿ ಮೊರೆಯಿಡುವ ಹೇಡಿತನವು ಭಕ್ತಿಯಲ್ಲಿಲ್ಲ. ಕೊಡಲು ನಿನ್ನಲ್ಲೇನುಂಟು ಎಂದು ದೇವನೆದುರು ನಿಂತು, ನಿನಗೇನು ಬೇಕು ಎಂದು ಅವನನ್ನೇ ಕೇಳಬೇಕು. 'ಎಲೆ ಎಲೆ ಹಂಪೆ, ಬೇಡು, ನಿನಗೇನು ಬೇಕು ಬೇಡು; ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ. ಕರ್ಮಕ್ಕೆ ಕರ್ತೃವೇ ಕಡೆ, ಆನು ನಿಮ್ಮ ಹಾರೆನು: ಮಾನವರ ಬೇಡೆನು' ಎಂದು ನುಡಿಯುವದೂ ನುಡಿದಂತೆ ನಡೆಯು ವದೂ ಬಸವಣ್ಣನು ಕಲಿಸಿದ ವೀರಭಕ್ತಿ. ಕಷ್ಟವನ್ನು ಧೈರ್ಯ ದಿಂದಲೂ ಶಾಂತಮನಸ್ಸಿನಿಂದಲೂ ಭೋಗಿಸಿ ಕರ್ಮನಾಶವನ್ನು ಮಾಡಿ ಕೊಳ್ಳಬೇಕೆಂಬುದಕ್ಕೆ ಬಾಯ್‌ಬಲ್ಲಿನ ಹಳೆಯ ಒಂಡಬಡಿಕೆಯಲ್ಲಿ ಬಂದ ಜಾಬನ ಕಥೆಯು ಒಂದು ಒಳ್ಳೆಯ ಮಾದರಿಯಾಗಿದೆ.

ಹೀಗೆ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಎಂದರೆ ಸಂಸಾರದಲ್ಲಿ, ಸನ್ಯಾಸ ಮಾರ್ಗದಲ್ಲಿ, ಯೋಗಮಾರ್ಗದಲ್ಲಿ ಭಕ್ತಿಮಾರ್ಗದಲ್ಲಿ, ಅಂಜಿಕೆಯು ಅವಿತು ಕೊಂಡು ಕುಳಿತಿದೆ. ಧೈರ್ಯದಿಂದ ಅದನ್ನೆದುರಿಸಿ ದಿವ್ಯ ಜೀವನವನ್ನು ಸಾಧಿ ಸಬೇಕು. ಆದರೆ ನಿರ್ಭಯವೃತ್ತಿಯು ಮಾನವನ ನಿಸ್ಪೃಹ ವೃತ್ತಿಯನ್ನು

ಅವಲಂಬಿಸಿರುವದರಿಂದ ನಿಸ್ಪೃಹನಾಗಿ ಭಯದ ಮೂಲೋತ್ಪಾಟನ ಮಾಡಿ ಅಮರಶಾಂತಿಯನ್ನು ಪಡೆಯಬೇಕು. ಆಸೆ ಅಂಜಿಕೆಗಳು ಮರಣದ ಮುಂಗು ರುಳು. ನಿಸ್ಪೃಹ ವೃತ್ತಿಯಲ್ಲಿ ಮರಣದ ಭೀತಿಯನ್ನು ಪರಿಹರಿಸಿಕೊಳ್ಳುವದ ರಲ್ಲಿಯೇ ಮರಣದ ಮಹತಿಯನ್ನು ಮೆರೆಯಿಸುವನಾ ಅರುಹಿನ ಮಹಾಂತನು.

ಆಂಗ್ಲ ಕವಿಯಾದ ಶೆಲೆಗೆ ಅರುಹು ಅಪರಿಮಿತವಾಗಿಯೇ ಇರುವ ದೆಂಬ ಸಾಕ್ಷಾತ್ಕಾರವಾಗುತ್ತದೆ. "ಆ ಅಚ್ಚ ಅರುಹು ಆ ಪರಾಸಂವಿತ್ ಒಂದೇ ಶಾಶ್ವತವಾಗಿ ಉಳಿಯುವದು; ವಿವಿಧವಾಗಿ ಕಾಣುವ ಪಸಾರವೆಲ್ಲ ಸೂಳೆಯುವದು, ಉಳಿಯುವದು, ಅಳಿಯುವದು. ಪಾರ್ಥಿವ ಮಾಟ ಮೋಡಿಗಳು ಮಾಯವಾಗುವವು. ದೈವಿಕ ಜ್ಯೋತಿಯು ನಂದಾದೀವಿಗೆ ಯಾಗಿ ಬೆಳಗುವದು. ನೀನಾವುದನ್ನರಸುತ್ತ ಅಲೆದಾಡುವಿಯೋ ಅದನ್ನು ಹೊಂದಬೇಕೆಂಬಾಸೆ ನಿನಗಿದ್ದರೆ ಮರಣವನ್ನು ಶರಣು ಹೋಗು"–ಎಂದು ಅವನು ಭಾವಬತ್ತಲೆಯಾಗಿ ಉತ್ತಾನತೆಯನ್ನು ಪಡೆದ ಅವಸ್ಥೆಯಲ್ಲಿ ನುಡಿಯುತ್ತಾನೆ. ಇಲ್ಲಿ ವಿಷಯಬದ್ಧವಾದ ಕ್ಷುದ್ರ ಅಹಂ ಭಾವದ ಮರ ಣವೇ ಆತ್ಮನ ಅಮರವಾದ ಶಾಂತಿಗೆ ಕಾರಣ, ಅರುಹಿನ ಅನುಪಮವಾದ ಆನಂದಕ್ಕೆ ತೋರಣ, ಅಧ್ಯಾತ್ಮದ ದಿವ್ಯವಾದ ಜೀವನಕ್ಕೆ ತಾಣ– ಎಂಬ ಮಹೋನ್ನತವಾದ ವಿಚಾರವಿದೆ. ಇಲ್ಲಿ ಕಾಣಬಹುದು ಮರಣದ ಮಹತಿಯ ಕಿರಣವನ್ನು!

---

# ಮಹರ್ಷಿ ಶ್ರೀ ಅರವಿಂದರು

೧೯೫೦ ನೆಯ ಡಿಸೆಂಬರ ೫ ನೆಯ ದಿನ. ಅಂದು ಭಾರತಕ್ಕೆ ಮಾತ್ರವಲ್ಲ, ಇಡಿಯ ಜಗತ್ತಿಗೇ ದುಗುಡ ವಾವರಿಸಿದ ದುರ್ದಿನ. ಮರಣ ದೇವತೆಯು ಪಾಂಡಿಚೆರಿಯ ಮಹರ್ಷಿ ಶ್ರೀ ಅರವಿಂದರ ಭೌತಿಕ ಶರೀರವನ್ನು ಅಂದು ನಮ್ಮಿಂದ ಎತ್ತಿಕೊಂಡು ಒಯ್ಯಿತು. ಶ್ರೀ ಅರವಿಂದರು ಪ್ರತಿಭಾನ್ವಿತ ಪಂಡಿತರೂ, ಮಿಗಿಲಾದ ಮೇಧಾವಿಗಳೂ ಆಗಿದ್ದರಲ್ಲದೆ ಸತ್ಯವಾದ ಆಚರಣೆಯ ಶರಣರೂ (Superman-ಅತಿಮಾನವ) ಆಗಿದ್ದರು. ಕವಿಯೆಂದು, ರಾಷ್ಟ್ರಭಕ್ತರೆಂದು, ಸುವಿಚಾರಶೀಲರೆಂದು, ಸುಪ್ರಸಿದ್ಧ ಲೇಖಕರೆಂದು, ತತ್ವಜ್ಞಾನಿಯೆಂದು, ಕಾಲಜ್ಞಾನಿಯೆಂದು ಅವರು ನಾನಾಬಗೆಯಾಗಿ ದೇಶ-ಪರದೇಶಗಳ ಗಣ್ಯ ವ್ಯಕ್ತಿಗಳ, ಜನಸಾಮಾನ್ಯರ ಮನವನ್ನು ಸೆಳೆದಿದ್ದರು. ಯುದ್ಧದ ಗದ್ದಲ ದಿಂದ ಗಾಸಿಯಾಗಿದ್ದ ಈ ಜಗಕ್ಕೊದಗಿದ ದುರ್ಘಟ ಪರಿಸ್ಥಿತಿಯಲ್ಲಿ ಪ್ರಶಾಂತವಾದ ವಾತಾವರಣವನ್ನು ಬೀರಲು ಅವರ ಸಾನಿಧ್ಯ-ಸಲಹೆ-ಸಹ ಕಾರಗಳು ಅತ್ಯಂತ ಅವಶ್ಯವಾಗಿದ್ದವು. ರಾಜಕೀಯ ಜೀವನದಲ್ಲಿ ಹಿಂದೊಮ್ಮೆ ಅವರು ಅಗ್ರಗಣ್ಯರಾಗಿದ್ದರೆಂಬ ಮಾತು ಸಂಸ್ಮರಣೀಯವಾಗಿದೆ. ಬಂಗಾಲ ಪ್ರಾಂತದ ಸರ್ವಸಮ್ಮತವಾದ ಅಧಿನಾಯಕರಾಗಿ ಲಾರ್ಡ ಕರ್ಝನ್ ಅವರ ಪ್ರಾಂತವಿಭಾಗಧೋರಣವನ್ನು ಪ್ರತಿಭಟಿಸುವ ವಂಗಭಂಗದ ಆಂದೋಲನದಲ್ಲಿ ಅವರು ಧುಮುಕಿದ್ದರು. ಆಗಿನ ಸಂದುಕಟ್ಟಿನ ಸಮಯ ದಲ್ಲಿ ಭಾರತದ ರಾಷ್ಟ್ರೀಯ ಭಾವನೆಯನ್ನು ತಿದ್ದಿ ಅದಕ್ಕೊಂದು ಮಹೋ ನ್ನತವಾದ ರೂಪವನ್ನು ಕೊಟ್ಟರು. ಆಗಿನ ಅವರ ವ್ಯಾಖ್ಯಾನ ಪ್ರವಚನ ಗಳ ಪರಿಣಾಮವನ್ನೀಗ-ಇಂದು ಅನೇಕ ಸ್ಥಿತ್ಯಂತರಗಳಾಗಿದ್ದರೂ-ಸ್ಪಷ್ಟ ವಾಗಿ ಕಾಣಬಲ್ಲೆವು. ಅವರ ರಾಜಕೀಯ ಜೀವನದಲ್ಲಿ ಒಂದು ಸಲವಲ್ಲ, ಮೂರು ಸಲ ಆಗಿದ್ದ ಆಂಗ್ಲ ಸರಕಾರವು ಅವರ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಿತು; ಆಪಾದನೆಗೆ ಗುರಿಮಾಡಿತು. ಅವರು ದಬ್ಬಾಳಿಕೆಗೆ ಬೆಚ್ಚದೆ ಬೆದರದೆ ಮುನ್ನುಗ್ಗಿ ರಾಜಕೀಯ ಆಂದೋಲನದ ಸೂತ್ರಧಾರಿಯಾಗಿ

ಪ್ರತಿಮವಾದ ಕಾರ್ಯಗೆಯ್ದರು. ಧ್ಯಾನ - ಮೌನ - ಜೀವನವನ್ನು ಪ್ರಾರಂಭಿಸಲು ಕರೆಬರುವ ವರೆಗೆ ಕಡುಗಲಿಗಳಾಗಿ ಅವರು ಹೋರಾಡಿದರು.

ವಿಶ್ವವ್ಯಕ್ತಿ

ಏಕಾಂತದ ಹೊಸ ಜೀವನದಲ್ಲಿ ಕಾಲಿಟ್ಟಂದಿನಿಂದ, ಇಹಲೋಕದ ಆಚೆಗಿನ ಜೀವನವನ್ನು ಬಯಸುವ ಶುಷ್ಕ ವಿಚಾರಗಳ ಸನ್ಯಾಸಿಯಂತಿರದೆ, ಅವರು ದಿವ್ಯಜೀವನವನ್ನು ಬಯಸುವ ನಿಷ್ಠಾಗರಿಷ್ಠವಾದ ಹಂಬಲಿಗರಾಗಿದ್ದರು. ಮಾನವ ಸ್ವಭಾವದಲ್ಲಿ ಸಮಶಿಖಾಂತವಾದ ಪರಿವರ್ತನೆಯನ್ನು ಮಾಡುವದು ಅವರ ಗುರಿಯಾಗಿತ್ತು. ಅದರಿಂದಾಗಿ ಮನದ ವ್ಯವಹಾರ ಲಕ್ಷಣ ಬದ್ಧವಾದ ಮಾನವನನ್ನು ಘನಮನ ಸಂಪಾದಿಸಿದ ಅತಿಮಾನವನನ್ನಾಗಿ-ಶರಣನನ್ನಾಗಿಮಾರ್ಪಡಿಸಬಯಸಿದರು. ಅದಕ್ಕಾಗಿ ಪಾಂಡಿಚೆರಿಯಲ್ಲಿ ಅವರು ಕಟ್ಟಿದ ಇಂದು ಅದರ ಸುತ್ತುಮುತ್ತಲು ಭವ್ಯವಾಗಿ ಬೆಳೆದಿದ್ದ ಅವರ ಆಶ್ರಮವು ಬಗೆಬಗೆಯ ಕಾರ್ಯಕುಶಲತೆಯ ರಂಗವಾಗಿ, ಬಗೆಬಗೆಯ ಬದ್ಧಿಸಾಮರ್ಥ್ಯ ಭಾವನಾ ಸಾಮರ್ಥ್ಯಗಳ ಕ್ಷೇತ್ರವಾಗಿ ಪರಿಣಮಿಸಿದೆ. ಇಂಗ್ಲಂಡ-ಅಮೇರಿಕೆಗಳಲ್ಲಿ ಕುತೂಹಲದಿಂದ ಕೂಡಿದ ಕುಶಾಗ್ರಬುದ್ಧಿಯ ಅನೇಕರು ಶ್ರೀ ಅರವಿಂದರ ವಿಚಾರಗಳತ್ತ ಹೊರಳುತಿದ್ದಾರೆ. ಅಮೇರಿಕೆಯ ಸ್ಟ್ಯಾನ್ ಫೋರ್ಡ ಮತ್ತು ಕಾರ್ನೆಲ್ ವಿಶ್ವವಿದಾಲಯಗಳಲ್ಲಿ ಕ್ರಮವಾಗಿ ಗೀತೆಯ ಬಗೆಗೆ ಬರೆದ ಅವರ ಪ್ರಬಂಧಗಳನ್ನು ಮತ್ತು ಅವರ 'ದಿವ್ಯ ಜೀವನ' ಎಂಬ ಗ್ರಂಥವನ್ನು ಸ್ನಾತಕೋತ್ತರ ಅಭ್ಯಾಸಕ್ಕಾಗಿ ನಿಯಮಿಸಿದ್ದಾರೆ. ನಮ್ಮ ದೇಶದಲ್ಲಿ ಬನಾರಸ ವಿಶ್ವವಿದ್ಯಾಲಯವೂ ಶ್ರೀ ಅರವಿಂದರ ಗ್ರಂಥಗಳನ್ನು ಅಭ್ಯಾಸ ಪತ್ರಿಕೆಯಲ್ಲಿ ಸೇರಿಸಿದೆ. ಘನವಾದ ನೋಬೆಲ್ ಪಾರಿತೋಷಕವನ್ನು ಅವರಿಗೆ ಕೊಡಬೇಕೆಂದು ಪಡುವಣ ನಾಡುಗಳಲ್ಲಿ, ಅದರಂತೆ ಮೂಡಣ ನಾಡುಗಳಲ್ಲಿ ಮೂಡಿದ್ದ ಪ್ರೇರಣೆಯು ಅವರು ವಿಶ್ವವ್ಯಕ್ತಿಗಳಾಗಿದ್ದರು ಎಂಬುದಕ್ಕೆ ಒಂದು ವೈಭವ ಸಂಪನ್ನವಾದ ನಿದರ್ಶನವಾಗಿದೆ.

ಶ್ರೀ ಅರವಿಂದರ ತತ್ವಜ್ಞಾನ

ಶ್ರೀ ಅರವಿಂದರು ಬರೆದ 'ದಿವ್ಯ ಜೀವನ' ಗ್ರಂಥವು ಒಂದು ಮನೋಹರವಾದ ತತ್ವಜ್ಞಾನ ಮತ್ತು ಅನುಭವ ಶಾಸ್ತ್ರವನ್ನು ನಿರೂಪಿಸುವ

ಋದ್ಗ್ರಂಥವೆಂದು ಸಾರ್ವತ್ರಿಕವಾದ ಮನ್ನಣೆ ಪಡೆದಿದೆ. ಅದರಲ್ಲಿ ಅವರು ಮಾನವ ಜನಾಂಗದ ಭವಿತವ್ಯದ ಬಗೆಗೆ ತಮ್ಮ ಹೃದಯದಿಂದುಕ್ಕುವ ಆಶೆ-ಆಕಾಂಕ್ಷೆಗಳನ್ನು ಮತ್ತು ಆತ್ಮದಿಂದ ಹೊರಹೊಮ್ಮಿದ ಅಂತಃಸ್ಫುರಣೆ ಗಳನ್ನು ಬಿತ್ತರಿಸಿರುವರು. ಅದರ ಸರಿಯಾದ ಪರಿಶೀಲನೆಯಿಂದ ಅವರ ತತ್ವಜ್ಞಾನದ ತಿರುಳನ್ನೇ ಅರಿಯಬಹುದಾಗಿದೆ. ಅದರಲ್ಲಿ ಮೊಟ್ಟಮೊದಲು ನಮ್ಮ ಮನವನ್ನು ಸೆಳೆಯುವ ಮಾತಿದು: ನಮ್ಮೀ ಜಗತ್ತು ನಿತ್ಯಸತ್ಯ ವಾಗಿದೆ. ಇದರ ನಿರ್ಮಾಣವು ನಮ್ಮ ತರ್ಕ ತಿಳುವಳಿಕೆಗೆ ಮೀರಿದುದು. ಇದನ್ನು ನಾವು ಪ್ರೀತಿಸಲಿ ಪ್ರೀತಿಸದಿರಲಿ ನಾವೆಲ್ಲ ಈ ಜಗತ್ತಿನ ಘಟಕಗಳೇ. ಇದನ್ನು ನಾವು ಅಲ್ಲಗಳೆಯಲಾಗುವದಿಲ್ಲ—ಈ ಮಾತುಗಳಿಂದ ಅವರು 'ಸತ್' ವಾದವನ್ನು ಎತ್ತಿ ಹಿಡಿದಿದ್ದಾರೆ. ಸಾಮಾನ್ಯವಾಗಿ ತಿಳಿದಿರುವ ತತ್ವಜ್ಞಾನಕ್ಕೆ ಜೀವನವನ್ನು ಅರ್ಥೈಸುವದು ಆಗದು. ಜೀವನವು ಊಹೆ ವಿಚಾರಗಳಿಗೆ ಮೀರಿದುದು ಎಂದು ಶ್ರೀ ಅರವಿಂದರ ಅಭಿಮತ. ಅವರ ಅಭಿಪ್ರಾಯದಲ್ಲಿ ಜೀವನದ ಆವಿರ್ಭಾವವೇ ತತ್ವಜ್ಞಾನ. ವಿಚಾರವೀಚಿಗಳನ್ನು ಸುಸಂಬದ್ಧಗೊಳಿಸಿ ವಿವರಿಸುವದು ಮಾತ್ರವೇ ಜ್ಞಾನವಲ್ಲ. ಯಾಕಂದರೆ ಜೀವನವು ಅನೇಕ ಅವಸ್ಥಾಂತರಗಳಲ್ಲಿ ಅರಳುತ್ತ ಸಾಗುವದು. ಈ ಅವಸ್ಥೆಗಳಲ್ಲಿ ಹಲಕೆಲವು ನಮ್ಮ ವಿಚಾರಕ್ಕೆ ನಿಲುಕುತ್ತಿರುವದಿಲ್ಲ. ಸುಸಂಬ ದ್ಧವಾದ ವಿಚಾರ ಸರಣಿಯೇ ತತ್ವಜ್ಞಾನವೆಂದು ನಾವು ಬಗೆಯುದಾದರೆ ಅದು ಮನ-ಪ್ರಕೃತಿ, ವಿವೇಕ, ಸಹಜಪ್ರವೃತ್ತಿ ಇಂದ್ರಿಯ-ಆತ್ಮ ಎಂಬ ಒಂದಕ್ಕೊಂದು ವಿರೋಧವಾದ ಪದಗಳ ವಿಚಾರದಲ್ಲಿ ನಮ್ಮನ್ನಿಳಿಸಿಬಿಡು ವದು; ಮತ್ತು ಇವುಗಳ ವಿಚಾರವು ಬಗೆಹರಿಯದೆ ನಾವು ಕೈಸೋತು ದಣಿದು ಬಿಡುವೆವು. ಅವನ್ನು ಸಮಂಜಸವಾಗಿ ಬಿಡಿಸುವ ವಿಧಾನದ ದೆಸೆಯಿಂದ ಪಾರು ಗಾಣದ ಅನೇಕ ಅಡೆತಡೆಗಳು ಮುಂಬಂದು ನಿಲ್ಲುವವು. ಆದರಿಂದ ನವೀನ ತೆರನಾದ ದೃಷ್ಟಿಯೊಂದು ಅವಶ್ಯವಾಗಿ ಬೇಕಾಗುವದು. ಇಂದ್ರಿಯ ಸನ್ನಿಕರ್ಷ ಜ್ಞಾನದ ಸುಸಂಬದ್ಧ ವಿವರಣೆಗೆ ಮಾತ್ರ ಅಂಟಿಕೊಳ್ಳದೆ ಇಡಿಯ ಜೀವನ ಮತ್ತು ಅನುಭಾವದಿಂದ ಅಂಕುರಗೊಳ್ಳುವ ಸ್ಫುರಣ ಜ್ಞಾನವನ್ನು ಅಂಗೀ ಕರಿಸಿದಾಗ ತತ್ವಜ್ಞಾನದ ಬಗೆಗೆ ಈ ನವೀನ ದೃಷ್ಟಿಯು ಮೂಡಲು ಅವಕಾಶವುಂಟಾದೀತು ! ಶ್ರೀ ಅರವಿಂದರು ತತ್ವಜ್ಞಾನಕ್ಕೆ ಜೀವನವನ್ನೇ

ತಳಹದಿಯಾಗಿರಿಸಿಕೊಂಡಿದ್ದಾರೆ. ಆದುದರಿಂದ ಅವರದು ಪರಂಪರಾಗತವಾಗಿ ತಿಳಿಯುತ್ತ ಬಂದ ತತ್ವಜ್ಞಾನವಲ್ಲ, ವೈಭವಯುಕ್ತವಾದ ದಿವ್ಯ ಜೀವನವನ್ನು ಆಂತರಿಕ ಪ್ರೇರಣೆಯರಿತು ಕ್ರಮಕ್ರಮವಾಗಿ ಅರಳುವಂತೆ ಸರಿಯಾದ ರೀತಿಯಲ್ಲಿ ವಿವರಿಸುವದೇ ಅವರಿಗೆ ತತ್ವಜ್ಞಾನವಾಗಿಹುದು.

ಶಕ್ತಿಯುಲಿ ಭಾಷ್ಯ

ಈ ಪ್ರೇರಣೆಯ ವೈಶಿಷ್ಟ್ಯಕ್ಕೆ ಶ್ರೀ ಅರವಿಂದರು 'ಶಕ್ತಿ' ಎಂದು ಕರೆಯುತ್ತಾರೆ. ಈ ಪರಾಶಕ್ತಿಯು ಸೃಷ್ಟಿಯ ಮೂಲದಲ್ಲೆಲ್ಲ ಹುದುಗಿದೆ. ಅಂತರಂಗದಲ್ಲಾಗಲಿ, ಬಹಿರಂಗದಲ್ಲಾಗಲಿ ವ್ಯಕ್ತವಾಗುವ ಅದರ ಸ್ವರೂಪಗಳು ವಿವಿಧವಾಗಿ ಕಾಣಬಹುದು. ಆದರೆ ಈ ಪರಾಶಕ್ತಿಯು ಮೂಲತಃ ಅಖಂಡವಾಗಿ ಒಂದೇ ಒಂದಾಗಿದೆ. ಮೂಲಶಕ್ತಿಯು ಆವಿರ್ಭಾವಗೊಳ್ಳುವಾಗ ಪ್ರಕೃತಿಯಿಂದೊದಗುವ ಒತ್ತಡವನ್ನು ಅಪ್ರತಿಹತವಾಗಿ ಎದುರಿಸುವ ಸಾಮರ್ಥ್ಯಕ್ಕನುಗುಣವಾಗಿ ವಿವಿಧ ರೂಪಗಳನ್ನು ತಳೆಯುತ್ತದೆ. ಬಾಹ್ಯಪ್ರಕೃತಿ ಮತ್ತು ಅಂತಃಸ್ಫೂರ್ತಿ ಇವು ಈ ಶಕ್ತಿಯ ದ್ವಿವಿಧ ಸ್ವರೂಪಗಳು. ಈ ಶಕ್ತಿಯು ಹೆಚ್ಚು ಹೆಚ್ಚು ಅಂದಚಂದವಾದಾಗ ಮತ್ತು ಬಿಡಿಬಿಡಿಯಾದ ಅಂಶಗಳನ್ನೆಲ್ಲ ಹೊಂದಿಸಿಕೊಂಡು ಒಂದಾಗಿ ತೋರಿದಾಗ ಸುಂದರ ಸಮನ್ವಯ ಸ್ವರೂಪವನ್ನು ವ್ಯಕ್ತಗೊಳಿಸುವದು. ಇದರಿಂದಾಗಿ ಶರೀರ ಪ್ರಾಣ ಮನ ಮತ್ತು ಘನಮನದಲ್ಲಿಯೂ ಸಹ ಹುದುಗಿದ ಶಕ್ತಿಯ ಬಗೆ ಬಗೆಯ ಸ್ವರೂಪಗಳಿಗೆ ಅವಕಾಶವುಂಟಾಗುತ್ತದೆ. ಆದರೆ, ಶಕ್ತಿಯು ಶಿವನಲ್ಲಿ ಆಶ್ರಯ ಹೊಂದುತ್ತದೆ. ಶ್ರೀ ಅರವಿಂದರು ಶಿವ-ಶಕ್ತಿಗಳಲ್ಲಿ ಸತ್ಯ-ಸೌಂದರ್ಯಗಳಲ್ಲಿ ಅವಿರಳವಾದ ಸಾಮರಸ್ಯವನ್ನು ಕಂಡಿದ್ದಾರೆ. ಈ ಶಿವಶಕ್ತಿಯ ಅವಿನಾಭಾವ ಸಂಬಂಧವು ಅವರಿಗೆ ಆತ್ಯಂತಿಕ ಘನವಾದ ಸತ್ಯವಾಗಿದೆ. ಅದಕ್ಕಾಗಿ ಪ್ರಶಾಂತತೆಯ ಗೌರವಕ್ಕೆ ಗಮನವಿತ್ತಂತೆ ಜೀವನದ ಗಾಂಭೀರ್ಯಕ್ಕೂ ಅವರು ಗಮನವನ್ನು ನೀಡಿದ್ದಾರೆ. ಅವರು ತಮ್ಮ ಗ್ರಂಥವಾದ 'ದಿವ್ಯ ಜೀವನ'ದಲ್ಲಿ "ಶಿವ ಮತ್ತು ಕಾಳಿ, ಬ್ರಹ್ಮ ಮತ್ತು ಶಕ್ತಿ ಇವು ಒಂದರಿಂದೊಂದು ಭಿನ್ನವಾಗಿಲ್ಲ; ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ಪ್ರಪಂಚವನ್ನೆಲ್ಲ ವ್ಯಾಪಿಸಿದ ಶಕ್ತಿಯು ಪ್ರಶಾಂತವಾದ

ಸ್ಥಿತಿಯಲ್ಲಿರಬಹುದು. ಇಲ್ಲವೆ ಅದು ಪ್ರಕ್ಷುಬ್ಧವಾದ ಗತಿಯಲ್ಲಿರಬಹುದು. ಪ್ರಶಾಂತವಾದ ಸ್ಥಿತಿಯಲ್ಲಿದ್ದಾಗಲೂ ಅದಕ್ಕೊಂದು ಅವಕಾಶವುಂಟು. ಆದರೆ ಅದು ಆಗ ಇಲ್ಲವೆಂದಾಗಲಿ ಕುಂದಿದೆಯೆಂದಾಗಲಿ ಇಲ್ಲದೆ ಪೂರ್ಣತಃ ಪರಿವರ್ತನೆಯಾಗಿದೆಯೆಂದಾಗಲಿ ಅರ್ಥವಲ್ಲ " ಎಂದು ಹೇಳುತ್ತಾರೆ.

**ಲೀಲಾಸ್ಥಾನ**

ಈ ವಿಶ್ವವು ದೇವ ದೇವನೆನ್ನಿಸಿಹ ಕರ್ತನ ಲೀಲಾಸ್ಥಾನವೆಂದು ಶ್ರೀ ಅರವಿಂದರು ಬಗೆಯುತ್ತಾರೆ. ಮತ್ತು ಆನಂದದ ಆಳವಡಿಕೆಗಾಗಿಯೇ ದಿವ್ಯ ಲೀಲೆಯ ಗುರಿಯಿದೆಯೆಂದೂ ಅವರು ಭಾವಿಸಿದ್ದಾರೆ. ಜೀವನದ ಪ್ರತಿಯೊಂದು ಸ್ಪಂದನವು, ಸಂಕಲ್ಪಶಕ್ತಿಯ ಪ್ರತಿಯೊಂದು ಸ್ಫುರಣೆಯು ಆ ದಿವ್ಯಾನಂದದ ಲಹರಿಯೇ ಆಗಿದೆ. ಯಾಕಂದರೆ ಅದು ಅಖಂಡತೆಯಿಂದೊಡಗೂಡಿ ಮೂಡುವ ಶಕ್ತಿಯ ಪರಿಪೂರ್ಣತೆಯನ್ನು ಪ್ರಕಟಿಸುವದು. ಆನಂದವು-ಪರಿಪೂರ್ಣತೆಯ ಆನಂದ, ಕ್ರಿಯಾಪ್ರವೃತ್ತಿಯ ಆನಂದ ಎಂದು-ಇತ್ತೆರನಾಗಿದೆ. ತಾಳಮೇಳದಿಂದ ಬೆರೆತ ಆನಂದಕ್ಕೆ ಪರಿಪೂರ್ಣತೆಯ ಆನಂದವೆಂದು ಹೆಸರು; ಯಾಕಂದರೆ ಎಂದೆಂದಿಗೂ ಪರಿಪೂರ್ಣವಾದ, ಎಂದೆಂದಿಗೂ ಪರಿಣತವಾದ ಅನಂತವಾದ ಜೀವನದಲ್ಲಿ ತಾಳಮೇಳದ ತಿಳಿವಳಿಕೆಗೆ ಎಂದೂ ಚ್ಯುತಿಯಿಲ್ಲ. ಒಂದುವೇಳೆ ಆ ಜೀವನದಲ್ಲಿ ಮಾರ್ಪಾಟಗಳುಂಟಾದರೆ—ಎಡೆಬಿಡದ ಮಾರ್ಪಾಟಗಳುಂಟಾಗುವದು ಸಹಜವೇ!—ಅವು ತಾಳಮೇಳಗತಿಯ ನಿಯಮಕ್ಕನುಗುಣವಾಗಿ ಉಂಟಾಗುತ್ತವೆ. ಕ್ರಿಯಾಪ್ರವೃತ್ತಿಯಲ್ಲಿ ತೋರುವ ಆನಂದವು ಜೀವನದ ಗತಿಯಲ್ಲಿ ಪೂರ್ಣತೆಯನ್ನು ಕಾಪಾಡಿಕೊಳ್ಳುವುದು. ಪರಿಪೂರ್ಣತೆಯ ಆನಂದವು ಮಾತ್ರ ತನ್ನ ಅಖಂಡತ್ವವನ್ನು ನಿರಂತರವಾಗಿ ಕಾಯ್ದುಕೊಳ್ಳುವುದು. ಕಾರ್ಯಪ್ರವೃತ್ತಿಯು ಮಾನವ ಜೀವನಕ್ಕೆ ದಿವ್ಯ ಜೀವನದ ವ್ಯಾವಹಾರಿಕ ತಳಹದಿಯನ್ನು ಹಾಕುವದು ಶಕ್ಯವಿದೆ ಎಂದು ತಿಳಿಸಿ, ಆ ದಿಶೆಯಲ್ಲಿ ಶ್ರೀ ಅರವಿಂದರು ಕಾರ್ಯೋನ್ಮುಖರಾದರು. ಆ ದಿವ್ಯ ಜೀವನಕ್ಕೆ ಆನಂದ, ಶಕ್ತಿ ಇವೇ ಪ್ರಾಮುಖ್ಯವಾದ ಲಕ್ಷಣಗಳು. ಮಾನವ ಜನಾಂಗವು ಕ್ರಮೇಣ, ಪ್ರಗತಿಯನ್ನು ಪಡೆಯುವದೆಂದು ಅವರು ದೃಢವಾಗಿ ನಂಬುತ್ತಾರೆ. ಆದರೆ ಮಾನವನ ವಿಚಾರ ವಿಕಾಸದಲ್ಲಿ ಕಟುವಾದ ಕೊಳೆ ಸೀಳುಗಳುಂಟಾಗಿರುವೆಂಬುದನ್ನರಿತು ಅವರು ಭಯಚಕಿತರಾಗಿದ್ದಾರೆ. ಸಂಸಾರಿಯು ದೇವನ

ಅಸ್ತಿತ್ವವನ್ನೂ ಅರಿವಿನ ಅವಸ್ಥೆಯನ್ನೂ ಅಲ್ಲಗಳೆಯುವದಾಗಲಿ, ಸನ್ಯಾಸಿಯು ಅನಾದ್ಯನಂತವಾದ ಪರಮವಸ್ತುವಿನ ಆನಂದದಲ್ಲಿಯೇ ಮುಳುಗಿ ವಿಶ್ವದ ಆಗುಹೋಗುಗಳನ್ನೂ ಮರವೆಯನ್ನೂ ಗಮನಿಸದಿರುವದಾಗಲಿ ಅವರನ್ನು ಆಲೋಚನೆಗೀಡುಮಾಡಿವೆ. ಪ್ರಾಪಂಚಿಕ ಪಾರಮಾರ್ಥಿಕ ದೃಷ್ಟಿಯು ಇವ ರೀರ್ವರಲ್ಲಿ, ವಿಜ್ಞಾನಿ ಆತ್ಮಜ್ಞಾನಿಗಳೆನಿಸಿದ ಈ ಇಬ್ಬರಲ್ಲಿ ತೋರಿರುವ ಈ ಕೊಲ್ಲಿಗೆ ಸೇತುವೆಯನ್ನು ಕಟ್ಟಲು ಶ್ರೀ ಅರವಿಂದರು ಪ್ರಯತ್ನಿಸಿದ್ದಾರೆ. ಮಾನವ ಪ್ರಗತಿಯು ಪ್ರಕೃತಿಯ ನೆರವಿನತ್ತಣಿಂದಲೂ ಸಾಗುವದು. ಪುರುಷನ ನೆರ ವಿನತ್ತಣಿಂದಲೂ ಸಾಗುವದು—ಎಂದು ಅವರು ಹೇಳುವರು. ತೋರಿಕೆಗೆ ವಿರು ದ್ಧವಾಗಿ ಕಾಣುವ ಪಡುವಣದವರ ಮತ್ತು ಮೂಡಣದವರ ಸಂಸ್ಕೃತಿಗಳಲ್ಲಿ ಒಂದು ಬೆಸಗೆಯನ್ನುಂಟು ಮಾಡಲು ಅವರು ಹವಣಿಸಿ ಅವೆರಡೂ ಸಂಸ್ಕೃತಿ ಗಳನ್ನು ಬೆರಸುವಪರಿಂದಲ್ಲ, ಆದರೆ ಅಧ್ಯಾತ್ಮಿಕ ಸಾಮರಸ್ಯವನ್ನು ಅಳವಡಿಸಿ ಕೊಳ್ಳುವದರಿಂದ ಒಂದು ಸಮನ್ವಯವನ್ನುಂಟು ಮಾಡಲು ಅವರು ಹಂಬಲಿ ಸುತ್ತಾರೆ. "ನಮ್ಮ ಆದರ್ಶವಾಗುವುದು?" ಎಂದು ಪ್ರಶ್ನಿಸಿ ಅದಕ್ಕುತ್ತರ ವನ್ನು ತಾವೇ ಹೀಗೆ ಹೇಳಿರುವರು. "ಬಾಹ್ಯ ಹಿತಾಹಿತ ಸಂಬಂಧದಿಂದುಂ ಟಾದ ಸಂಗದಿಂದ ಮಾತ್ರವಲ್ಲ, ಅಂತರಂಗದ ಏಕತ್ವದಿಂದ ಮಾನವ ಜನಾಂ ಗದಲ್ಲಿ ಐಕ್ಯತೆಯು ಒಡಮೂಡಬೇಕು. ಪಶು ಜೀವನದಿಂದ ಹಾಗು ಹೊನ್ನೇ ಪ್ರಾಣವೆಂಬ ಹೆಣಗಾಟದ ಜೀವನದಿಂದ, ಅಥವಾ ಕೇವಲ ಬೌದ್ಧಿಕ ವ್ಯವ ಹಾರದ ಜೀವನದಿಂದ ಹಾಗು ರಸಿಕ ಜೀವನದಿಂದ—ಒಟ್ಟಾರೆ, ಲೌಕಿಕ ಜೀವನದಿಂದ ಪಾರಮಾರ್ಥಿಕ ಜೀವನದ ಪರಮೈಶ್ವರ್ಯದಲ್ಲಿ ಮಾನವನು ಕಾಲಿಡಬೇಕು. ಕ್ರಿಮಿಕೀಟಕ-ಪಶುಪಕ್ಷಿಗಳ ಅವಸ್ಥೆಯಿಂದ ಮಾನವನ ನಿಲವು ರೂಪಾಂತರ ಹೊಂದಿತೆಂದು ವಿಜ್ಞಾನವು ತಿಳಿಸುವದು. ಮಾನವ ಜೀವನವು ಇನ್ನುಳಿದ ಪ್ರಾಣಗಳ ಜೀವನಕ್ಕಿಂತ ಮಿಗಿಲಾದುದು, ನಮ್ಮೀ ಮಾನವ ಬಾಳುವೆಗಿಂತ ಅತಿಮಾನವನ ಜೀವನವು ಮಿಗಿಲಾದುದು. ಮಾನ ವನ ತನು, ಅವನಲ್ಲಿ ವಿಶಷ್ಟವಾದ ಇಂದ್ರಿಯವಾಗಿರುವ ಅವನ ಮನ ಇವು ಗಳಲ್ಲಿ ಅತಿ ಮಾನವ ಜೀವನವು ಮೊಳೆತು ಬೆಳೆದು ಬಾಳಲೆಂದು ಪ್ರಭು ಶಕ್ತಿಯು ಇಳಿಯಬೇಕು. ಮಾನವ ಜನಾಂಗದ ಸಾಮರಸ್ಯ, ಮಾನವನ ಪಾರಮಾರ್ಥಿಕ ಜೀವನ ಸೌಂದರ್ಯ, ಮಾನವನ ಅಂಗಾಂಗಗಳಲ್ಲಿ

ಪ್ರಭುಶಕ್ತಿಯ ಪ್ರಾದುರ್ಭಾವ—ಈ ಮೂರೂ ಒಂದಾಗಿ ಹೊಂದಿಕೊಳ್ಳಬೇಕು ಮಾನನತೆಯ ಐಕ್ಯ ಮತ್ತು ಅತಿಮಾನವತೆ ಇವು ಪರವಸ್ತುವಿನಲ್ಲಿ ಏಕತಾನವನ್ನು ಪಡೆದು ಜೀವಿಸುವುದರಿಂದ ಮಾತ್ರವೆ ಸಾಧ್ಯ!"—

## ಶ್ರೀ ಅರವಿಂದರ ಯೋಗ

ಅರಿವಿನ ಸಪ್ತ ಅವಸ್ಥೆಗಳ ಬಗೆಗೆ ಪರಂಪರಾಗತವಾಗಿ ಬಂದ ತಿಳಿವಳಿಕೆಯನ್ನೇ ಅವಲಂಬಿಸಿ ಶ್ರೀ ಅರವಿಂದರು ತಮ್ಮ ಯೋಗದ ರೂಪರೇಷೆಯನ್ನು ಕೊಟ್ಟಿರುವರು. ಮನಸ್‌ಶಾಸ್ತ್ರದ ದೃಷ್ಟಿಯಿಂದ ಈ ಅವಸ್ಥೆಗಳು ಮಾನವನ ಅಂತರಂಗದಲ್ಲಿ ಒಂದರ ಮೇಲೊಂದು ಇರುತ್ತವೆಂದು ಭಾವಿಸುತ್ತಾರೆ. ವಿಶ್ವೋತ್ಪತಿ ಶಾಸ್ತ್ರದ ದೃಷ್ಟಿಯಿಂದ ಇವು ಒಂದರ ಸುತ್ತು ಮತ್ತೊಂದಾಗಿ ಇದ್ದು ಸಪ್ತಲೋಕಗಳೆಂದು ಪೆಸರ್ಪೆತ್ತಿವೆಯೆಂದು ತಿಳಿಯುತ್ತಾರೆ. ಶರೀರ, ಪ್ರಾಣ, ಮನ, ಘನಮನ, ಜ್ಞಾನ, ಸಂಕಲ್ಪಶಕ್ತಿ, ಆತ್ಮ-ಇವು ಏಳೂ ಅರಿವಿನ ಅವಸ್ಥೆಗಳೆಂದು ಮನಸ್‌ಶಾಸ್ತ್ರದ ದೃಷ್ಟಿಯಿಂದ ಹೇಳುತ್ತಾರೆ. ಶರೀರ ಮತ್ತು ಆತ್ಮ ಇವು ಎರಡು ಇರುವಿನ ಕನಿಷ್ಟ ಮತ್ತು ಶ್ರೇಷ್ಠ ಪದವಿಯನ್ನು ಸೂಚಿಸುವ ಪದಗಳು. ಘನಮನವು ಸತ್ವರಜತಮೋಮಯವಾದ ಮೊದಲಿನ ಅರ್ಧ ಭಾಗವೆನಿಸುವ ಪರಾಜ್ಞಾನ ಮತ್ತು ಸತ್-ಚಿತ್-ಆನಂದಮಯವಾದ ಎರಡನೆಯ ಅರ್ಧಭಾಗವೆನಿಸುವ ಅಪರಾಜ್ಞಾನ ಇವುಗಳಿಗೆ ಮಧ್ಯವರ್ತಿಯಾಗಿರುತ್ತದೆ. ಮೊದಲಿನ ಅರ್ಧದ ಮುಖಾಂತರ ಕೆಳಗಿನಿಂದ ಮೇಲೇರುವುದರಲ್ಲಿ ಮತ್ತು ಎರಡನೆಯ ಅರ್ಧದ ಮುಖಾಂತರ ಮೇಲಿನಿಂದ ಕೆಳಗಿಳಿಯುವುದರಲ್ಲಿ ಸಾಧನದ ರಹಸ್ಯವಿರುತ್ತದೆ. ಈ ಸಾಧನೆಯಿಂದಾಗಿ ಮೇಲೇರುವ ಪುರುಷಪ್ರಯತ್ನವೂ ಕೆಳಗಿಳಿಯುವ ಪ್ರಭುಕಾರುಣ್ಯವೂ ಮಧ್ಯವರ್ತಿಯಾದ ಕಾರಣಸೃಷ್ಟಿಯ ಅರಿವಿನ ಅವಸ್ಥೆಯಲ್ಲಿ ಬೆರೆತು, ಘನಮನದ ಶಕ್ತಿ ಸಾಮರ್ಥ್ಯಗಳಲ್ಲಿ ಅರಳಿಕೊಳ್ಳುವದು. ಹೀಗೆ ಅನುಭವ ಸಾಕ್ಷಾತ್ಕಾರವು ಮೇಲೇರುವ ಪುರುಷಭಕ್ತಿ ಕೆಳಗಿಳಿಯುವ ಪ್ರಭುಶಕ್ತಿ ಇವುಗಳಿಂದ ಕೂಡಿಕೊಂಡು ಇಬ್ಬಗೆಯಾಗಿರುತ್ತದೆ. ಪ್ರಕೃತಿಯ ವಿಕಾಸಕ್ರಮದಲ್ಲಿ, ಸೃಷ್ಟಿಯಲ್ಲಿ ಈ ಅನುಭವಸಾಕ್ಷಾತ್ಕಾರವು ನಿರಂತರವಾಗಿ ಸಾಗಿರುತ್ತದೆ. ಆದರೆ ಮಾನವನಲ್ಲಿ ಈ ಬಗೆಯಲ್ಲಿ ತಿಳಿವಳಿಕೆ ತಲೆದೋರಿದಾಗ ಮಾತ್ರ ಅದು ಜೀವನದ ಸಾಧನವಾಗಿ ಪರಿಣಮಿಸುತ್ತದೆ.

ವಿಕಾಸವನ್ನು ಪಡೆಯುವ ಎಲ್ಲದರಲ್ಲಿ ಪರಬ್ರಹ್ಮವು ಮೊದಲಿಗೆ ಪರಿಪೂರ್ಣವಾಗಿಯೇ ತಾನೇ ತಾನಾಗಿರುತ್ತದೆ. ಅದು ವಿಕಾಸದ ಕಳಸಕ್ಕೆ ಕಣಜವಾಗಿಯೂ ಕಂಗೊಳಿಸುತ್ತದೆ. ಘನಮನವು ತ್ವರಿತಜ್ಞಾನಲಕ್ಷಿತವಾದ ಪರವಸ್ತುವಿನ ಅಂಶವೆ ಆಗಿದ್ದು, ಅರಿವಿನ ಅಧಃಸೃಷ್ಟಿಯನ್ನು ಬೆಳೆಸಿ ಉನ್ನತಗೊಳಿಸುವದು; ಕೊನೆಗೆ ಅದನ್ನು ಸಾಮರಸ್ಯದ ನಿಲವಿನತ್ತ ಒಯ್ಯುವದು. ಮಿಥ್ಯೆಗೆ ವಿರೋಧವಾಗಿ ಸತ್ಯವನ್ನು ಕಾಣುವಂತೆ ಅಥವಾ ವಿಶ್ವದ ರಚನೆಯಲ್ಲಿ ಪೂರ್ಣತ್ವವು ಎಂದೂ ಕಾಣದಿರುವಂತೆ ಅದು ವಸ್ತುಗಳ ಸತ್ಯತೆಯನ್ನು ಗರ್ಭೀಕರಿಸಿಕೊಂಡಿರುವದಿಲ್ಲ. ಆದರೆ ವಿಶ್ವದ ರಚನೆಗಳೆಲ್ಲ ವಿಕಾಸದ ಲಕ್ಷಣವನ್ನು ತಿಳಿಸುವ ಪದಗಳಾಗಿರುವಂತೆ ಅದರ ಸತ್ಯತೆ ಪೂರ್ಣತೆಗಳನ್ನು ಸೂಚಿಸುವ ಅರ್ಥದಲ್ಲಿ ಆ ಘನಮನದ ಆಳವನ್ನರಿಯಬೇಕು. ಶ್ರೀ ಅರವಿಂದರು ಇಂತಹ ಜನಮನದ ಅರಿವಿನ ಅವಸ್ಥೆಯನ್ನು ಕಂಡು ಅರಿತವರು. ಈ ದೆಸೆಯಿಂದ ಅವರ ಬೆಂಬಳಿಗೆ ಅತುಲವಾದ ಬೆಳ್ಜಸವು ಕಾದಿರುತ್ತದೆ.

### ಅತಿಮಾನವ

ಅತಿಮಾನವ ಅಥವಾ ಶರಣ ಈ ವಿಚಾರದಲ್ಲಿ ಶ್ರೀ ಅರವಿಂದರ ತತ್ತ್ವಜ್ಞಾನದ ನಾವೀನ್ಯತೆಯನ್ನು ಕಾಣಬೇಕು. ನಿಟ್ಶೆ ಆತನೂ ಅತಿಮಾನವನ ಬಗೆಗೆ ತಿಳಿಸಿದ್ದಾನೆ. ಆದರೆ ಅವನಲ್ಲಿದ್ದಂತೆ ಇಲ್ಲಿ ಅತಿಮಾನವನ-ಶರಣನ ಉದಯದ ವಿಚಾರವಿಲ್ಲ. ಇಲ್ಲಿ ಮಾನವನಲ್ಲಿ ಪರವಸ್ತುವಿನ ದಿವ್ಯವಾದ ಅವತಾರವುಂಟು. ಮಾನವನ ಶಕ್ತಿ ಸಾಮರ್ಥ್ಯಗಳು ದಿವ್ಯಶಕ್ತಿಯಲ್ಲಿ ಹೊಂದುಗೆಗೊಂಡು ಮಾರ್ಪಡುವ ಕ್ರಮದ ವಿಚಾರವುಂಟು. ಮಾರ್ಪಡಿಸುವ ದಿವ್ಯಶಕ್ತಿಯ ಸಹಾಯಸಂಪದದಿಂದ ಮಾನವನ ನಿರ್ಮಾಣವಿದೆಯೇ ಹೊರತು ನಿರಂತರವಾಗಿ ಮೇಲೆ ಮೇಲೆ ಏರುವ ಪುರುಷಪ್ರಯತ್ನದ ಫಲವೊಂದರಿಂದಲೆ ಮಾನವ ನಿರ್ಮಾಣವಿಲ್ಲ. ಪ್ರಭುಕಾರುಣ್ಯವು ಉಪಕರಣವೆನಿಸುವ ಒಂದು ವ್ಯಕ್ತಿಯನ್ನು ತನ್ನ ಕಾರುಣ್ಯಪ್ರಭೆಯಲ್ಲಿ ಸ್ವೀಕರಿಸಿ ಅದರಲ್ಲಿ ತನ್ನ ಶಕ್ತಿ ಸಾಮರ್ಥ್ಯಗಳನ್ನು ಹರಿಬಿಟ್ಟಾಗ ಅತಿ ಉಚ್ಚವಾದ ಸ್ಫುರಣಜ್ಞಾನವೂ

ಅಳವಿಗೆ ಸಿಲುಕದ ಶಕ್ತಿ ಪ್ರಭಾವವೂ ಅಡೆತಡೆಗಳನ್ನು ಲೆಕ್ಕಿಸದ ಉತ್ಕಟವಾದ ಸಂಕಲ್ಪ ಶಕ್ತಿಯೂ ತುಂಬಾ ಆವರಿಸುವ ಅತುಲ ಪ್ರೇಮರಸವೂ ಆಗಿ ಅಲ್ಲಿ ಹೊರಹೊಮ್ಮಿ ತೋರುವವು. ಇಳಿದು ಬರುವ ಪ್ರಭುಕಾರುಣ್ಯದ ಪ್ರವಾಹ ಕ್ಕನುಗುಣವಾಗಿ, ಮಾರ್ಪಾಟಗೊಳ್ಳುವ ಏರುತ್ತಲಿರುವ ಪುರುಷನ ಆಧಾರ ಶುದ್ಧಿಗನುಗುಣವಾಗಿ ಈ ಅತಿಮಾನವರಲ್ಲಿ-ಶರಣರಲ್ಲಿ-ಅನೇಕ ತರಗತಿಗಳನ್ನು ಕಾಣಬಹುದು. ಇದು ಅಲ್ಲದೆ ಮೇಲಿನಿಂದ ಓತಪ್ರೋತವಾಗಿ ಸುರಿಯುವ ಪ್ರಭುಶಕ್ತಿಯನ್ನು ಹಿಡಿದಿಟ್ಟುಕೊಳ್ಳಲಿಕ್ಕೆ ಯೋಗ್ಯವಾದ ಆಧಾರವೆನಿಸುವ ಆ ವ್ಯಕ್ತಿಯಲ್ಲಿ ತಕ್ಕ ಬಲವೂ ಇರಲಿಕ್ಕಿಲ್ಲ. ಒಮ್ಮೊಮ್ಮೆ ಅಂತರ್‌ದೃಷ್ಟಿ ಯುಂಟಾಗುವ ಆಜ್ಞೆಗೆ ದಿವ್ಯ ಶಕ್ತಿಯು ಇಳಿಯುವದನ್ನೂ ಮಾಡಲಿಕ್ಕಿಲ್ಲ. ಇನ್ನುಳಿದ ಅಂಗಾಂಗಗಳನ್ನು ಇದ್ದಕ್ಕಿದ್ದಂತೆ ಇರಿಸಿ ಸ್ಫುರಣಜ್ಞಾನಕ್ಕೆ ಅವಕಾಶ ವಿಲ್ಲದಂತೆಯೂ ಆಗಿಬಿಡಬಹುದು. ಇಂತಹ ವ್ಯಕ್ತಿಗಳು ಆತ್ಯಂತಿಕವಾದ ಮತ್ತು ಅತಿ ಸೊಬಗಿನ ಮಾರ್ಪಾಟನ್ನು ವ್ಯಕ್ತಗೊಳಿಸಲಾರವು. ದಿವ್ಯಪ್ರಭೆಯು ತನ್ನ ಅಖಂಡವಾದ ಸಾಮರ್ಥ್ಯ, ಕಾರುಣ್ಯ, ಜ್ಞಾನ, ಸಮರಸಗಳಿಂದ ಮಾನವನಲ್ಲಿ ಸಂಪೂರ್ಣವಾಗಿ ಇಳಿದು ಬರುವುದರಲ್ಲಿಯೇ ಅಂತಿಮವಾದ ಪರಮಾದರ್ಶದ ಪೂರ್ಣತೆಯಿರುವುದೆಂದು ಶ್ರೀ ಅರವಿಂದರು ಭಾವಿಸಿದ್ದಾರೆ. ಮಾನವನಲ್ಲಿ ಪ್ರಾಮುಖ್ಯವಾದ ಎಲ್ಲ ಅಂಶಗಳ ದಿವ್ಯ ಮತ್ತು ಸಮನ್ವಯ ಪರಾಕಾಷ್ಠತೆ ಯನ್ನೇ ಅವರ ಅತಿಮಾನವನು-ಶರಣನು ಪ್ರಕಟಿಸುತ್ತಾನೆ. ಈ ಬಗೆಯಲ್ಲಿ ಅವರು ಹೇಳುತ್ತಾರೆ. " ದೇವನು ಗೂಢಾತ್ ಗೂಢತರವಾಗಿದ್ದಾನೆ. ನಾವು ತಿಳಿಯುವಷ್ಟು ಸುಲಭವಾಗಿ ಅವನ ನಿಲವಿಲ್ಲ. ದೇವತ್ವದ ಅನೇಕ ಸಿದ್ಧಾಂತ ಕಲ್ಪನೆಗಳಲ್ಲಿ ಯಾವುದೊಂದರ ಕೇವಲ ಆರಾಧನೆಯಿಂದ ಒಂದು ನೇರವಾದ ದಾರಿಯನ್ನು ಕಂಡು ಆ ಗೂಢವನ್ನರಿಯಬೇಕೆಂದು ಮಾನವ ಬುದ್ಧಿಯು ಹಂಬಲಿಸುವದು. ಆನಂದ ಶಕ್ತಿ ಸಮರಸಗಳೇ ಕುರುಪಾದ ಭಕ್ತಿ ಜ್ಞಾನಗಳು ದೇವನ ಹಲಕೆಲವು ನಾಮಗಳನ್ನು ನಿರೂಪಿಸುತ್ತಿವೆ. ಅವೆಲ್ಲ ಪೂಜ್ಯವಾಗಿ ದ್ದರೂ ಅವುಗಳಲ್ಲಿ ಕೆಲವನ್ನು ಮಾತ್ರ ಮುಖ್ಯವೆಂದು ಗ್ರಹಿಸಿ ಅನುಸರಿಸು ವದು—ಮೊದಲ ಮೆಟ್ಟನ ಉತ್ಸಾಹಶಕ್ತಿ ಕಂದಿಕಳೆಗುಂದಿದ ಬಳಿಕ ಅವನು ನಮ್ಮಿಂದ ಓರೆಯಾಗಲಿ, ನಮ್ಮನ್ನವನು ಬಿಟ್ಟುಕೊಡಲಿ ಎಂದು ಬಯಸಿ

ಬಿನ್ನಹವನ್ನು ಮಾಡಿಕೊಂಡಂತೆಯೇ ಸರಿ. ಒಂದನ್ನೇ ಗುರಿಯಾಗಿಟ್ಟುಕೊಂಡ ಸಾಮರಸ್ಯವೂ ಸಮರಸದ ಆ ಪ್ರಕಟತೆಯನ್ನು ನಿಲ್ಲಿಸಿ ಬಿಡುವದು. ಗೂಢವಾದ ಜ್ಞಾನಯುಕ್ತವಾದ ಭಾವಪ್ರಧಾನವಾದ ಸಾಮರಸ್ಯವು ಒಂದು ಒಡೆಯು ಲಾಗದ ಒಗಟವೇ ಸರಿ. ಭಕ್ತಿಭಾವನೆಯಿಂದ ತುಂಬಿ ತುಳುಕುವ ಹೃದಯವು ಜ್ಞಾನದ ನೆರವಿನಿಂದ ಪ್ರಶಾಂತವಾದ ತನ್ಮಯತೆಯಲ್ಲಿ ಪರಿವರ್ತನೆಗೊಂಡು ಪ್ರಬಲವಾಗಿ ಸ್ಪಂದನಗೊಳ್ಳುವಾಗ, ಶಕ್ತಿಯ ಬಾಹುಬಲವು ವಿಶ್ವದ ಹಿತ-ಸಾಧನೆಗಾಗಿ ಆನಂದ ಪ್ರಕಾಶಗಳ ಸಂಪೂರ್ಣವಾದ ಹೊಂಬೆಳಗಿನಲ್ಲಿ ಅವಿಶ್ರಾಂತವಾಗಿ ಕಾರ್ಯಗೆಯ್ಯುವಾಗ, ಥಳಥಳಿಸುವ ಜ್ಞಾನಪ್ರಭೆಯು ಹೃದಯದ ಮಸುಕು ಮಸಕಾದ ಭಾವಸ್ಫುರಣೆಗಳನ್ನು ಸ್ವೀಕರಿಸಿ ಪಲ್ಲಟಗೊಳಿಸಿ ಅತಿ ಎತ್ತರದ ಸ್ಥಾನದಲ್ಲಿರುವ ಸಂಕಲ್ಪ ಶಕ್ತಿಯ ಕಾರ್ಯಕಲಾಪಗಳಿಗೆ ಸಹಾಯ ಹಸ್ತವನ್ನು ನೀಡುವಾಗ, ಈ ಎಲ್ಲ ದೇವರುಗಳು ಎಲ್ಲರೊಳು ತಾನಿರ್ದು ಎಲ್ಲವ ವ್ಯಾಪಿಸಿ ಪರಿವರ್ತನೆಗೊಳಿಸುವ ತ್ಯಾಗಾಂಗದ ಸಿದ್ಧಾಸನದಲ್ಲಿ ಮಂಡಿಸಿದಾಗ ಮಾನವನಿಗೆ ಅಖಂಡವಾದ ಅತೀಂದ್ರಿಯದ ನಿಲವು ಕೈಸೆರೆಯಾಗುವದು. ಇದುವೆ ಅತಿಮಾನವತೆಯನ್ನು-ಶರಣಪದವಿಯನ್ನು ಪಡೆಯಲು ಶ್ರೇಷ್ಠವೂ ಜ್ಯೇಷ್ಠವೂ ಪ್ರೇಷ್ಠವೂ ಆದ ಮಾರ್ಗವು. ಅಹಂಕಾರದಿಂದ ಬೆರೆತುಕೊಂಡು, ಪ್ರಬಲವೂ ತೀಕ್ಷ್ಣವೂ ಆದ ನಾನು ನನ್ನದೆಂಬ ಮೊಂಡ ಸಂಸ್ಕಾರವು-ಮಾನವ ಜನಾಂಗವನ್ನು ದಾಸ್ಯಪಂಕದಲ್ಲಿ ದೂಡಿ ಅದರ ಮೇಲೆ ನಿರಂಕುಶ ವಾದ ಆಧಿಪತ್ಯ ನಡೆಯಿಸಬೇಕೆಂಬ ದುಷ್ಟ ಮಮಕಾರವು—ಆ ಅತಿಮಾನ ವತೆಯ-ಆ ಶರಣ ಪದವಿಯ ಬಟ್ಟೆಯನ್ನೆಂದೂ ತೋರದು."

## ಅಮರರಾದ ಶ್ರೀ ಅರವಿಂದರು

ಅತಿಮಾನವತೆಯ – ಶರಣಮಾರ್ಗದ – ಇಂತಹ ಅಧಿನಾಯಕನು ದೇಹದಿಂದ ನಮ್ಮನ್ನು ಅಗಲಿದರೂ ತನ್ನ ಅಧ್ಯಾತ್ಮ ಪ್ರತಿಭೆಯಿಂದ ಬೆಳಕನ್ನು ಬೀರಿ ಪರಿಣಾಮವನ್ನುಂಟುಮಾಡುವನು. ಆ ಬೆಳಕು ಮಾನವ ಜನಾಂಗಕ್ಕೆಲ್ಲ ಅಪ್ರತಿಹತವಾದ ಚೈತನ್ಯವನ್ನಿತ್ತು ದಾರಿ ದೀಪವಾಗು ವದು. ಅವರು ಸ್ವತಃ ದಿವ್ಯ ಪ್ರಭೆಯು ಪರಿಪೂರ್ಣವಾದ ಪ್ರಖರವಾದ ನಡೆನಡಿಕೆಯಿಂದ ಅತಿಮಾನವ-ಶರಣರಾಗಿದ್ದು ದಿವ್ಯ ಜೀವನದಲ್ಲಿ

ಅಡಿಯಿಟ್ಟು ಬೆಳೆಯಬೇಕು—ಎಂದು ಹಂಬಲಿಸುವ ಆತ್ಮರಿಗೆ ದೀಪಸ್ತಂಭವಾಗಿ ದಾರಿಯನ್ನು ತೋರಿಸುವರು. ಉಪನಿಷತ್ತುಗಳ ಮಾತುಗಳಲ್ಲಿ ತಿಳಿಸುವದಾದರೆ ಅವಿರಳವಾದ ಅರಿವನ್ನು ಅಳವಡಿಸಿಕೊಂಡುದರಿಂದ ಆತ್ಮಪ್ರಭೆಯು ಎತ್ತೆತ್ತ ನೋಡಿದರೂ ಸುತ್ತಿಸುತ್ತಿ ಪಸರಿಸುವದು. ಆ ಆತ್ಮನ ದನಿಯು ವಾಯು ತರಂಗಗಳಲ್ಲಿ ನಿನಾದಗೊಂಡು ಬಹುದೂರ ಕೇಳಿ ಬರುವದು. ಅವನು ಮೂಡ ಬೆಳಗುವ ನೇಸರನಲ್ಲಿ ಹೊಳೆ ಹೊಳೆಯುತ್ತ ನಿಲ್ಲುವನು; ಮಿನುಗುವ ತಾರೆಗಳಲ್ಲಿ ಥಳಥಳಿಸಿ ಬೆಳಗುವನು; ಅರಳುವ ಹೂಗಳಲ್ಲಿ ಮಕರಂದವಾಗಿ ಕಂಪಸೀವನು. ಅಂತಹ ಅಮರವಾದ ಶ್ರೀ ಅರವಿಂದರ ದಿವ್ಯಾತ್ಮಕ್ಕೆ ಎಮ್ಮ ಈ ಭಕ್ತಿಭಾವಕುಸುಮವು ಅರ್ಪಿತವಾಗಲಿ !

---

# ಭಾರತೀಯರ ಹೊಣೆ

ಭಾರತ ಸ್ವಾತಂತ್ರ್ಯಸೂರ್ಯನ ಹೊಂಬೆಳಗು ಹೊರಹೊಮ್ಮಿ ನಮ
ಗಿಂದು ಮುದವನ್ನು ಬೀರುತ್ತಿದೆ. ಭಾರತವು ಸ್ವತಂತ್ರ ಪ್ರಜಾರಾಜ್ಯವೆಂದು
ಘೋಷಣೆಯೂ ಆಯಿತು. ರಾಷ್ಟ್ರೀಯ ದೃಷ್ಟಿಯಿಂದ ಕಳೆದ ನಾಲ್ಕು
ವರುಷಗಳ ಅವಧಿಯೇನು ಬಹಳವಲ್ಲ. ಆದರೂ ಭಾರತವು ಸ್ವತಂತ್ರವಾಗಿ
ಬೆಳಗತೊಡಗಿದ ಈ ಅತ್ಯಲ್ಪವಾದ ಅವಧಿಯಲ್ಲಿ ಅನಿರೀಕ್ಷಿತ ಘಟನೆಗಳ
ಪರಂಪರೆಯೊಂದು ಬೆಳೆದು ಬಂದಿದೆ. ಜಾತಿಯ ದಳ್ಳುರಿಯು ದಳವೇರಿ ನಾಡನ್ನು
ದುಃಖ ದುಮ್ಮಾನಗಳಿಗೀಡುಮಾಡಿತು; ಅದರ ಹತ್ಯಾಕಾಂಡದಿಂದ ಯುದ್ಧ
ಕಾಲಕ್ಕಿಂತ ಹೆಚ್ಚಾಗಿಯೇ ರಕ್ತದ ಕಾವಲಿಯು ಹರಿಯಿತು; ಅನ್ನ ಅರಿವೆಗಳ
ಸಮಸ್ಯೆ, ನಿರಾಶ್ರಿತರ ಪ್ರಶ್ನೆ, ಕಾಶ್ಮೀರ ಹೈದರಾಬಾದಗಳ ತುಂಟ ಜಗಳ,
ರಾಜಕೀಯ ಪಕ್ಷಪಂಗಡಗಳ ತಿಕ್ಕಾಟ, ಲಂಚಗುಳಿತನದ ಚೆಲ್ಲಾಟ, ಕಾಳ
ಸಂತೆಯ ಕುಲ ಕಾಟ, ಅಧಿಕಾರ ಲಾಲಸೆಯ ಮೇಲು ನೋಟ-ಹೀಗೆ ಒಂದಲ್ಲ
ಹಲವಾರು ಅಡೆತಡೆಗಳು ಸ್ವಾತಂತ್ರ್ಯ ಫಲ ಸೇವನೆಯನ್ನು ಸಿಹಿಗೊಳಿಸದೆ
ಕಹಿಯಾಗಿಸಿದವು; ಇನ್ನೂ ಈ ಅಡೆತಡೆಗಳಿಗೆ ಬಿಡುಗಡೆಯಿಲ್ಲದಾಗಿದೆ. ಅಂತರ್
ರಾಷ್ಟ್ರೀಯ ದೃಷ್ಟಿಯಿಂದ ಭಾರತವು ಏಶಿಯದಲ್ಲಿ ಮಹತ್ವದ ಸ್ಥಾನವನ್ನೇನೊ
ಗಳಿಸತೊಡಗಿದೆ. ಆದರೆ ಅದರ ಏಳಿಗೆಗಾಗಿ ಇನ್ನೂ ಘನವಾದ ಪಾತ್ರವನ್ನು
ಅದು ವಹಿಸಬೇಕಾಗಿದೆ. ಅಂತರ್ ರಾಷ್ಟ್ರೀಯ ಕ್ಷೇತ್ರದಲ್ಲಿ ಅದರ ಹೆಚ್ಚಳವು
ಬೆಳೆಯುಗೊಡದಂತೆ ವಿರೋಧಿಗಳು ವ್ಯತ್ಯಯವನ್ನುಂಟೂ ಮಾಡುತ್ತಿರುವರು;
ಆದರೂ ಅದನ್ನು ತಡೆಗಟ್ಟಿ ಬದಿಗೆ ದೂಡಿ ಮುಂದೆ ಸಾಗಬೇಕಾಗಿದೆ.
ರಾಷ್ಟ್ರೀಯ ದೃಷ್ಟಿಯಿಂದ ಸಂಸ್ಥಾನಗಳೆಲ್ಲ ಬೇಗನೆ ವಿಲೀನಗೊಂಡು ಭಾಷಾ
ಧಾರ ಪ್ರಾಂತರಚನೆಗಳಾಗಿ ಭಾರತವು ಒಂದು ಸುಸಜ್ಜಿತವಾದ ಸಂಯುಕ್ತ
ರಾಷ್ಟ್ರವಾಗಬೇಕಾಗಿದೆ. ಇಂತಹ ಸಂದುಕಟ್ಟಿನ ಸಮಯದಲ್ಲಿ ಭಾರತೀಯ
ರಾದ ನಮಗೆ ರಾಷ್ಟ್ರಧರ್ಮವನ್ನರಿತು, ಅಂತು ಆಚರಿಸುವದು ಕ್ರಮಪ್ರಾಪ್ತ
ವಾಗಿದೆ. ವೇದಾಂತ ಧರ್ಮವನ್ನು ವಿವರಿಸುವಲ್ಲಿ ನಾವು ಮುಂದುವರಿ
ದವರು. ವೇದಾಂತಮೀಮಾಂಸೆಯಲ್ಲಿ ನಮ್ಮದು ಪಳಗಿದ ಕೈ. ರಾಷ್ಟ್ರ

ಮೀಮಾಂಸೆಯಲ್ಲಿ ಮಾತ್ರ ನಾವಿನ್ನೂ ಹೊಸಬರು. ರಾಷ್ಟ್ರೀಯತೆಯು ನಮ್ಮಲ್ಲಿನ್ನೂ ಮೂಡಿಬರಬೇಕಾಗಿದೆ. ನಾವಿನ್ನೂ ಸಂಯುಕ್ತರಾಷ್ಟ್ರ ಭಾವನೆಯನ್ನು ಮೈಗೂಡಿಸಿಕೊಳ್ಳಬೇಕಾಗಿದೆ. ಸುಗಮವಾದ ನಾಗರಿಕ ಜೀವನದ ನಿರ್ವಹಣೆಗೆ ರಾಷ್ಟ್ರೀಯತೆಯು ಬಹಳ ಅವಶ್ಯವಾದುದು. ಹಾಗೆಯೇ ನಮ್ಮ ಸಾಹಿತ್ಯ—ಸಂಸ್ಕೃತಿಗಳನ್ನು ಉಳಿಸಿ ಬೆಳಿಸಿಕೊಳ್ಳಲಿಕ್ಕೂ ರಾಷ್ಟ್ರಧರ್ಮವು ಅಗತ್ಯವಾದುದು. ಅನಿಯಂತ್ರಿತ ಪ್ರಭುತ್ವದಲ್ಲಾಗಲಿ ಇಲ್ಲವೆ ಅರಾಜಕತೆಯಲ್ಲಾಗಲಿ ನಾಗರಿಕ ಜೀವನವು ಹಬ್ಬಿ ಹರವರಿಯದು, ಕೊಬ್ಬಿ ಕೊನರೊಡೆಯದು. ಸುಶಿಕ್ಷಿತ ಜನತಾರಾಜ್ಯದಲ್ಲಿ, ಪ್ರಬೋಧಗೊಂಡ ಪ್ರಜಾರಾಜ್ಯದಲ್ಲಿ ನಾಗರಿಕ ಜೀವನವು ಕಳೆಯೇರಿ ಕಂಗೊಳಿಸುವದು, ಸುಳಿದೆಗೆದು ಬೆಳೆದು ನಿಲ್ಲುವದು. ಅಂತೆಯೇ ಜನತಾರಾಜ್ಯಕ್ಕಾಗಿ ಕೂಗು ಎಲ್ಲೆಡೆಗಳಿಂದ ಕೇಳಿ ಬರುತ್ತಿದೆ; ಪ್ರಜಾಪ್ರಭುತ್ವಕ್ಕಾಗಿ ಪ್ರಯತ್ನಗಳು ನಡೆದಿರುತ್ತವೆ.

ಇಂತಹ ಜನತಾರಾಜ್ಯದ ಅಥವಾ ಪ್ರಜಾರಾಜ್ಯದ ಹಂಬಲವುಳ್ಳ ನಾವು ಎಂತಹ ನಾಡನ್ನು ಕಟ್ಟಿಕೊಳ್ಳಬೇಕಾಗಿದೆ ಎಂಬುದನ್ನು ತಿಳಿದುಕೊಂಡಿರಬೇಕು. ಕೂಡಿದ ನಾಡನ್ನು ನಿರ್ಮಿಸಿಕೊಳ್ಳಬೇಕು? ಅಧಿಕಾರ ಐಶ್ವರ್ಯ ವರ್ಣ ವಯ ಲಿಂಗ ಮುಂತಾದವುಗಳನ್ನು ಲೆಕ್ಕಿಸದೆ ಮಾನವನು ಮಾನವನನ್ನು ಮಾನವನಿಗಾಗಿ ಗೌರವಿಸುವ ನಾಡು ನಮಗೀಗ ಬೇಕಾಗಿದೆ. ಬೆಳೆಯುವ ರೈತನು ನಾಡಿನ ಬೆನ್ನೆಲಬು; ದುಡಿಯುವ ಆಳು ಆದರ ಪಕ್ಕೆಲಬು. ಆ ನೇಗಿಲಯೋಗಿ ಆ ಕರ್ಮಯೋಗಿ ಸುಖವಾಗಿ ಉಂಡು ಪುಷ್ಟವಾಗಿ ನಲಿಯುವಂತಾಗಬೇಕು ನಮ್ಮ ನಾಡಿನಲ್ಲಿ. ಜಾತಿ ಉಪಜಾತಿಗಳ ಜಂಜಡವಿಲ್ಲದ ಜನತೆಯಲ್ಲವೂ ಒಂದೇ ಎಂಬ ಭಾವನೆಯು ತುಂಬಿ ತುಳುಕುವ ನಾಡು ಇಂದು ಮೂಡಬೇಕಾಗಿದೆ. ತನ್ನ ಎಲ್ಲ ಬೇಡಿಕೆಗಳಿಗೂ ಪರರನ್ನು ಯಾಚಿಸದೆ ತನ್ನ ಕಾಲ ಮೇಲೆ ನಿಂತುಕೊಳ್ಳುವಂತೆ ಸ್ವಾವಲಂಬಿಯಾದ ನಾಡು ನಮ್ಮದಾಗಬೇಕಾಗಿದೆ. ಕೊನೆಯದಾಗಿ ವರ್ಣವಾದ (Communalism) ವಿತ್ತವಾದ (Capitalism) ವರ್ಗವಾದ (Communism) ಎಂಬ ಮೂವಿಧಿಗಳಾದ ವಾದಗಳಿಂದ ಮಾರುದ್ದ ಸಿಡಿದು ನಿಂತ ನಾಡು ನಮಗಿಂದು ಬೇಕಾಗಿದೆ.

ಪ್ರಜಾರಾಜ್ಯ ಪದ್ಧತಿಯಲ್ಲಿ ಪ್ರಜೆಯೇ ಪ್ರಚ್ಛನ್ನ ಪ್ರಭು, ಶಾಸನವೇ ಪ್ರತ್ಯಕ್ಷ ಪ್ರಭು ಎಂಬವು ನಿರ್ವಿವಾದ ಮಾತುಗಳು. ಭಾರತವು ಪ್ರಚ್ಛನ್ನ ಪ್ರಭುತ್ವ ಪ್ರಜಾಪ್ರಭುತ್ವ ಈ ಎರಡೂ ತತ್ವಗಳನ್ನು ಮಾನ್ಯಮಾಡಿದೆ. ಅದು ಒಪ್ಪಿಕೊಂಡ ಪ್ರೌಢ ಮತದಾನದಲ್ಲಿಯೂ ಅದು ಸ್ವೀಕರಿಸಿದ ರಾಜ್ಯ ಘಟನೆಯಲ್ಲಿಯೂ ಅವುಗಳ ಮನ್ನಣೆಯು ರೂಪುಗೊಂಡಿದೆ. ಪ್ರಜೆಯೇ ಪ್ರಚ್ಛನ್ನ ಪ್ರಭು ಎಂದರೆ ನಾಗರಿಕನು ನಾಡಿನ ಯಾವ ಸಮಸ್ಯೆಯನ್ನಾದರೂ — ಅದು ರಾಜಕೀಯವಿರಲಿ, ಸಾಮಾಜಿಕವಿರಲಿ, ಆರ್ಥಿಕವಿರಲಿ, ಆಧ್ಯಾತ್ಮಿಕವಿರಲಿ, ರಾಷ್ಟ್ರದ ಏಳಿಗೆಗೆ ಸಂಬಂಧಿಸಿದ ಇನ್ನಾವುದಾದರೂ ಸಮಸ್ಯೆಯಿರಲಿ-ಕುರಿತು ಚರ್ಚಿಸುವ ಅನಿರ್ಬಂಧ ಸ್ವಾತಂತ್ರ್ಯತೆಗೆ ಅರ್ಹನು. ವ್ಯಕ್ತಿಗೆ ವಿಚಾರ ಸ್ವಾತಂತ್ರ್ಯವನ್ನು ಕೊಟ್ಟರೆ ವ್ಯಕ್ತಿಗಳು ಹಲವು ಪ್ರಕೃತಿಯವರಿರುವುದರಿಂದ ನಾಡಿನಲ್ಲಿ ವಿವಿಧ ವಿಚಾರದ ಪಕ್ಷ ಪಂಗಡಗಳ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ರಾಜ್ಯದಾಡಳಿತೆಗೆ ನಾಗರಿಕರ ಸಹಕಾರವು ಮುಖ್ಯವಾಗಿರುವದರಿಂದ ಆಡಳಿತೆಯ ವಿಷಯದಲ್ಲಿ ಅವರ ವಿಚಾರ ವಿಮರ್ಶೆಗಳನ್ನೂ ಅವರ ಅನುಕೂಲ-ಪ್ರತಿಕೂಲ ಅಭಿಪ್ರಾಯಗಳನ್ನೂ ಮನ್ನಿಸುವದು ಸರಕಾರದ ಶ್ರೇಷ್ಠವಾದ ಕರ್ತವ್ಯವಾಗಿದೆ. ಅಂತಃಕರಣಕ್ಕೆ ತೋರಿದ, ವಿವೇಕಕ್ಕೆ ಹೊಳೆದ ಅಭಿಪ್ರಾಯವನ್ನು ವ್ಯಕ್ತಪಡಿಸದ ನಾಗರಿಕನು ತನ್ನ ವಾಕ್ ಸ್ವಾತಂತ್ರ್ಯವನ್ನು ಕಳೆದುಕೊಂಡಂತೆಯೇ. ಮಾನವನ ಮನೋಗತವನ್ನು ತಿಳಿಯುವದಕ್ಕೆ ಅವನು ಆಡುವ ಮಾತು ಸಾಧನವಾಗಿರುವದರಿಂದ ವಾಕ್ ಸ್ವಾತಂತ್ರ್ಯವು ಪ್ರಜಾರಾಜ್ಯದಲ್ಲಿ ಮನ್ನಿಸಲ್ಪಡುತ್ತದೆ. ಮಾತನಾಡುವ ಅಧಿಕಾರವನ್ನು ಪ್ರಜೆಯು ಅನುಭವಿಸುವದರಿಂದ ಸಮಾಜಕ್ಕೆ ನೆರವು ದೊರೆಯುವದಲ್ಲದೆ ವ್ಯಕ್ತಿಯ ಉನ್ನತಿಗೂ ಅದು ಕಾರಣವಾಗುವದು. ಇದನ್ನು ಕೊಡದೆಯಿರುವದರಿಂದ ಸರಕಾರವು ನಾಗರಿಕರನ್ನು ನಿರ್ಬಂಧಕ್ಕೊಳಪಡಿಸಿ ಅವರ ಬುದ್ಧಿ ಸಾಮರ್ಥ್ಯಗಳನ್ನು ಕ್ರಾಂತಿ ಮಾರ್ಗಕ್ಕೆ ತಿರುಗಿಸಿದಂತಾಗುವದು. ಈ ಕಾರಣದಿಂದ ಭಾಷಣ ಸ್ವಾತಂತ್ರ್ಯವು ಮಾನವನಿಗೆ ಅತ್ಯಂತ ಉಪಯುಕ್ತವಾಗಿದೆ. ಭಾಷಣದ ಅಧಿಕಾರದ ಮರ್ಯಾದೆಯನ್ನು ಮೀರಿ ಅದನ್ನು ಬಳಸಿದರೆ, ಅದರಿಂದ ನಾಡಿನ ಏಳ್ಗೆಗೆ ಭಂಗವುಂಟಾಗುವಂತಾದರೆ

ಸರಕಾರವು ಅಂತಹ ಭಾಷಣಗಳನ್ನು ತಡೆಯುವದೆಂಬದು ಸಹಜವೇ. ಆದರೆ ಒಳ್ಳೆಯ ರೀತಿಯಿಂದ ರಾಜತಂತ್ರವನ್ನು ನಡೆಯಿಸುತ್ತಿರುವ ಸರಕಾರದ ವಿರುದ್ಧವಾಗಿ ಕೊಡಲಾಗುವ ಭಾಷಣಗಳಿಂದ ಸರಕಾರವನ್ನು ಬದಲಿಸಲಿಕ್ಕೆ ಆಗದು. ವಿಪರೀತವಾದ ಮಾರ್ಗದಿಂದ ಸಾಗಿರುವ ಸರಕಾರದ ಕುಂದು ಕೊರತೆಗಳನ್ನು ವಿಧಾಯಕ ರೀತಿಯಿಂದ ಭಾಷಣ ಲೇಖನಗಳ ಮೂಲಕ ಬಯಲಿಗೆಳೆಯುವದರಿಂದ ಸರಕಾರಕ್ಕೆ ಉಪಕಾರವಾದೀತೇ ಹೊರತು ಅಪಕಾರವಿಲ್ಲ. ಭಾಷಣ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ಕೃತಿಸ್ವಾತಂತ್ರ್ಯಗಳನ್ನು ಪ್ರಜಾಜನರು ವ್ಯಕ್ತಗೊಳಿಸಿ ತನ್ನ ವಿಚಾರದಂತಹ ವಿಚಾರವುಳ್ಳ ಇನ್ನಿತರ ಸಂಘ ಸಂಸ್ಥೆಗಳೊಡನೆ ಸಹಕರಿಸಿ ನಡೆಯುವ ಸ್ವಾತಂತ್ರ್ಯವು ಪ್ರಜಾರಾಜ್ಯದಲ್ಲಿ ಯೋಗ್ಯವಾದುದೇ. ಶತಮಾನಗಳ ಹಿಂದೆಯೇ ಮಿಲ್ಟನ್ ಮಹಾಕವಿಯು, "ಸದಸದ್ವಿವೇಕವನ್ನು ತಾಳಿ ಅರಿಯುವದು ಮಾತನಾಡುವದು ತರ್ಕಶುದ್ಧವಾಗಿ ಸ್ವಮತವನ್ನು ಪ್ರಸ್ತಾಪಿಸುವದು ಎಲ್ಲ ಸ್ವಾತಂತ್ರ್ಯಗಳಿಗಿಂತಲೂ ಮಿಗಿಲಾದ ಸ್ವಾತಂತ್ರ್ಯವು; ಅದು ನನಗಿರಲಿ. ಅಲ್ಲವಾದುದನ್ನು ತ್ಯಜಿಸುವ, ಅಹುದಾದುದನ್ನು ಭಜಿಸುವ, ಅವಶ್ಯ ಕಂಡೆಡೆಯಲ್ಲಿ ನವೀನವಾದುದನ್ನು ಸೃಜಿಸುವ ಸ್ವಾತಂತ್ರ್ಯವಿಲ್ಲದಿದ್ದರೆ ವ್ಯಕ್ತಿಗಾಗಲಿ ಜನಾಂಗಕ್ಕಾಗಲಿ ಮಾನಸಿಕ ಮತ್ತು ನೈತಿಕಜೀವನದಲ್ಲಿ ಸುಸ್ಥಿರತೆಯು ಎಂದೂ ಉಳಿಯದು. ಮಾತಿನ ಸ್ವಾತಂತ್ರ್ಯವಾಗಲಿ ಕೃತಿಯ ಸ್ವಾತಂತ್ರ್ಯವಾಗಲಿ ಸಹಿಸಿಕೊಳ್ಳಬೇಕಾದ ದುಷ್ಕೃತಿಗಳಲ್ಲ. ಆದರೆ ಅವು ಜನಾಂಗದ ಜೀವನ ಮತ್ತು ಪ್ರಗತಿಗಳಿಗೆ ಅತ್ಯವಶ್ಯಕವಾದ ವರಪ್ರಸಾದಗಳೇ ಆಗಿವೆ"—ಎಂದು ಹೇಳಿರುವನು.

ರಾಜಕೀಯ ಸ್ವಾತಂತ್ರ್ಯಕ್ಕೆ ಆಧಾರಸ್ತಂಭದಂತಿರುವ ವಿಚಾರ-ಭಾಷಣ-ಕ್ರಿಯಾಸ್ವಾತಂತ್ರ್ಯಗಳು ಪಡುವಣ ನಾಡುಗಳಲ್ಲಿ ನೆಲೆಸಿರುವದರಿಂದ ಅಲ್ಲಿ ಪ್ರಜಾಪ್ರಭುತ್ವವು ಬಹುಕಾಲದಿಂದ ಬೆಳೆದು ಬಂದಿದೆ. ಇದರಿಂದ ಸ್ವಾತಂತ್ರ್ಯವು ತ್ರಿಕಾಲಾಬಾಧಿತವಾದ ಧ್ಯೇಯವೆಂದಾಗಲಿ, ಅದೊಂದು ನಿರ್ವಿಕಾರವಾದ ಭಾವನೆಯೆಂದಾಗಲಿ ತಿಳಿಯುವ ಕಾರಣವಿಲ್ಲ. ದೇಶ-ಕಾಲ-ನಿಮಿತ್ತಗಳ ಕಟ್ಟಿಗೆ ಅನುಗುಣವಾಗಿ, ಸಮಾಜದ ಬೆಳವಣಿಗೆಗೆ ಅನುರೂಪವಾಗಿ ಒಂದು ದೇಶದ ಸ್ವಾತಂತ್ರ್ಯದಲ್ಲಿ ಏಳುಬೀಳುಗಳನ್ನು ಕಾಣಬಹುದು.

ಇಂಗ್ಲಂಡ ದೇಶವು ರಕ್ತರಹಿತ ಕ್ರಾಂತಿಯಿಂದ ದೇಶದಲ್ಲಿ ಪ್ರಜಾಪ್ರಭುತ್ವವನ್ನು ಪಡೆದುಕೊಂಡಿತು. ಅದೇ ಫ್ರಾನ್ಸದಲ್ಲಿ ಅಪರಿಮಿತವಾದ ರಕ್ತ ಸುರಿಸಿ ಅದನ್ನು ಸಂಪಾದಿಸಬೇಕಾಯಿತು. ರಶಿಯಾದಲ್ಲಿ ಇಂಗ್ಲಂಡದ ಹಾಗೆ ಏನೇನೂ ಸಾಧಿಸಲಿಲ್ಲ. ಅಲ್ಲಿ ಇರುವದು ಏಕಪಕ್ಷೀಯ ರಾಜ್ಯದಾಡಳಿತೆ. ಕಳೆದ ಮೂವತ್ತು ವರುಷಗಳಿಂದ ನಾಡಿನ ಒಡೆತನವು ಒಬ್ಬ ವ್ಯಕ್ತಿಯ ಹಾಗು ಅವನ ಗುಂಪಿನವರ ಕೈಯಲ್ಲಿಯೇ ಇದ್ದಬಳಿಕ ಆ ನಾಡಿನಲ್ಲಿ ಪ್ರಜಾಸತ್ತೆ ಏನ್ನೆಂತು ಅಪೇಕ್ಷಿಸಬೇಕು? ಸ್ವಾತಂತ್ರ್ಯವೆಂದರೆ ಸೌಕರ್ಯವೆಂದು ತಿಳಿದ ರಶಿಯದವರಿಗೆ ರಾಜಕೀಯ ಸ್ವಾತಂತ್ರ್ಯಕ್ಕಿಂತ ಆರ್ಥಿಕ ಸ್ವಾತಂತ್ರ್ಯವೇ ಹಿರಿದಾಗಿದೆ. ಅವರ ರಾಷ್ಟ್ರದಲ್ಲಿ ಆದಾಯವು ಪರಸ್ಪರ ಸಮೀಪ ವರ್ತಿಯಾಗಿದೆ. (Near equality of income) ಅಲ್ಲಿ ಆರ್ಥಿಕ ಸೌಕರ್ಯಕ್ಕಾಗಿ ವ್ಯಕ್ತಿಸ್ವಾತಂತ್ರ್ಯವು ಹರಣವಾಗಿದೆ. ಅರ್ಥ-ಅಧಿಕಾರ ಈ ಎರಡು ಅತಿ ಮೋಹಕವಾದ ವಸ್ತುಗಳಾದುದರಿಂದ ಅವುಗಳ ಸರಿಯಾದ ಹಂಚುವಿಕೆಯು ಸದ್ಯದ ಒಂದು ಘನವಾದ ಸಮಸ್ಯೆಯಾಗಿದೆ. ಯಾವ ರಾಷ್ಟ್ರದಲ್ಲಿ ಅವುಗಳ ಸಾಮಾನ್ಯ ಹಂಚಿಕೆಯಾಗಿದೆಯೋ ಅಲ್ಲಿ ಸಮಾಜಕ್ಕೆ ಸ್ವಾಸ್ಥ್ಯವಿದೆ. ಆರ್ಥಿಕ ವ್ಯವಹಾರದಲ್ಲಿ, ಆಡಳಿತದ ಅಧಿಕಾರದಲ್ಲಿ ವ್ಯಕ್ತಿಗೆ ಪಾಲನ್ನು ನೀಡುವದೂ ಅದಕ್ಕಾಗಿ ಸಾಮಾನ್ಯ ಜನರು ಸ್ವಪ್ರಯತ್ನ ದಿಂದ ಮುಂಬಂದು ಅರ್ಥ ಅಧಿಕಾರಗಳಲ್ಲಿ ಪಾಲುಗಾರರಾಗು ವಂತೆ ಅನುಕೂಲಿಸುವ ಸಮಯ ಸನ್ನಿವೇಶಗಳನ್ನು ಕಲ್ಪಿಸಿಕೊಡುವದೂ ಸರಕಾರದ ಹೊಣೆಯಾಗಿದೆ. ವ್ಯಕ್ತಿಯ ಏಳಿಗೆಗೆ ಯಾವ ಬಗೆಯ ಅಡ್ಡಿ ಆತಂಕಗಳು ಬರದಂತೆ ನೋಡಿಕೊಳ್ಳುವದು ಪ್ರಜಾಪ್ರಭುತ್ವದ ಪರಮ ಧ್ಯೇಯವಾಗಿದೆ. ಭಾರತವು ಇಂತಹ ಪ್ರಜಾಪ್ರಭುತ್ವದತ್ತ ಸಾಗಬೇಕಾಗಿದೆ.

ಭಾರತೀಯರಲ್ಲಿ ಈಗ ರಾಜಕೀಯ ಜಾಗ್ರತಿಯಾದುದೇನೋ ನಿಜ. ಆದರೆ ಈ ಜಾಗ್ರತಿಯು ಬರಬರುತ್ತ ಸಾರ್ವಜನಿಕರನ್ನು ಅಧಿಕಾರದ ಮೋಹಕ್ಕೆ ಎಳೆ ಯಹತ್ತಿದೆ; ಸೇವೆಗಿಂತ ಅನೀತಿಯತ್ತ ಸೆಳೆಯಹತ್ತಿದೆ. ಮೊದಲು ಅಧಿಕಾರ ದಾಹ ಬೆನ್ನುಹತ್ತಿದೆ; ಬಳಲಿಸುತ್ತ ನಡೆದಿದೆ. ಇದರಿಂದಾಗಿ ರಾಜಕೀಯ ಜೀವನ ದಲ್ಲಿ ಹಿಂದೊಮ್ಮೆ ಕಂಗೊಳಿಸುತ್ತಿದ್ದ ತೇಜಸ್ಸು ಮಾಯವಾಗತೊಡಗಿದೆ. ಒಂದು ಕಾಲಕ್ಕೆ ಮಾನವನು ಮತದ ಮೇಲೆ ವಿಶೇಷ ಶ್ರದ್ಧೆಯನ್ನು ನಟಿಸಿದ್ದನು.

ಮತದ ಮೇಲಣ ಅತಿಯಾದ ಅಭಿಮಾನವು ಮಾನವ ಮಾನವರಲ್ಲಿ ಭೇದ ವನ್ನು ಹುಟ್ಟಿಸಿ ಕಲಹವನ್ನು ಹೆಚ್ಚಿಸಿ ಜೀವನ ಕಳೆಯನ್ನೇ ಹಾಳುಮಾಡಿತು. ಪಾರಲೌಕಿಕತೆಗೆ ಮನ್ನಣೆ ಕೊಟ್ಟು ಮಾನವನಲ್ಲಿ ಭಾವವೈಶಾಲ್ಯತೆಗೆ ಬದಲು ಸಂಕುಚಿತ ಭಾವನೆಯನ್ನು ಹುಟ್ಟಿಸಿತು. ಇದನ್ನರಿತು ಮತವನ್ನು ಬಿಸುಟ ಲೌಕಿಕ ಪ್ರಗತಿಯನ್ನು ಸಾಧಿಸಲು ರಾಜಕಾರಣದ ಬೆನ್ನು ಹತ್ತಿ ದನು ಮಾನವನು. ಅದಕ್ಕೆ ಆಧುನಿಕ ಯಾಂತ್ರಿಕ ಹಾಗು ವೈಜ್ಞಾನಿಕ ಬೆಳವಣಿಗೆಯು ಸಹಾಯವನ್ನು ನೀಡಿತು. ಪಾಶ್ಚಿಮಾತ್ಯರು ಧರ್ಮ-ರಾಜ ಕಾರಣಗಳನ್ನು ಬೇರ್ಪಡಿಸಿದರು. ಐಹಿಕ ಪ್ರಗತಿಯನ್ನೇ ತಮ್ಮ ಧ್ಯೇಯ ವನ್ನಾಗಿರಿಸಿಕೊಂಡರು. ಆದರೆ ರಾಜಕಾರಣದ ಬೆನ್ನು ಹತ್ತಿ ಮಾನವನು ಬಂದಿ ರುವನಾದರೂ ಎಲ್ಲಿಗೆ? ಅನೀತಿಯ ಶಿಖರಕ್ಕೆ! ನೈತಿಕ ಮುಗ್ಗಟ್ಟು ರಾಜ ಕಾರಣದ ಫಲ ಎಂದು ಹೇಳಬೇಕಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಪ್ರತಿ ಯೊಂದು ಪಕ್ಷವು ಅನೈತಿಕ ಮಾರ್ಗಕ್ಕೆ ಮೊರೆ ಹೋಗುವದು. ಪ್ರೌಢ ಮತ ದಾನದ ಪರಿಣಾಮವಾಗಿ ಮತಾಧಿಕಾರವುಳ್ಳವರ ಸಂಖ್ಯೆಯು ಹೆಚ್ಚುವದೂ ಅದರೊಂದಿಗೆ ರಾಜಕೀಯ ಪಕ್ಷಗಳ ಅನೈತಿಕತೆಯೂ ಹೆಚ್ಚುವದೂ ಅನಿ ವಾರ್ಯ. ಸಂಖ್ಯೆಯ ವಿಸ್ತಾರದ ಮೇಲೆಯೇ ಮಾನವನ ಯೋಗ್ಯತೆಯು ನಿರ್ಣ ಯಿಸಲ್ಪಡುವದೇ ವಿನಹ ಅವನ ಶೀಲಸಂಪತ್ತಿಯಿಂದಲ್ಲ. ಚುನಾವಣೆಗಳೇ ಧ್ಯೇಯವಾಗಿದ್ದುದರಿಂದ ರಾಜಕೀಯ ಪಕ್ಷಗಳು ಪ್ರಚಾರದ ಬೆನ್ನು ಹತ್ತಿದ ಹೊರತು ಅನ್ಯಗತಿಯಿಲ್ಲ. ಸುಳ್ಳು ವಚನಗಳನ್ನು ಕೊಟ್ಟು, ಇಲ್ಲದ ಸಲ್ಲದ ಆಸೆಗಳನ್ನು ತೋರಿಸಿ, ಧರ್ಮ ಮತಗಳ ಹೆಸರಿನಿಂದ ಅಭಿಮಾನವನ್ನು ಕುದುರಿಸಿ ' ಮತಗಳನ್ನು ಗಳಿಸುವದು ಅಗತ್ಯವಾಗುತ್ತದೆ. ಇಂತಹ ಸಂದರ್ಭದಲ್ಲಿ ನೀತಿ ಹೇಗೆ ಉಳಿಯುವದು? ಮತದ ಬೆನ್ನು ಹತ್ತಿ ಮಾನವನು ಅಹಂಕಾರಿಯೂ ಅಲ್ಪಮತಿಯವನೂ ಆದರೆ ರಾಜಕಾರಣದ ಬೆನ್ನು ಹತ್ತಿ ಅವನು ಅನೀತಿವಂತನೂ ಅನ್ಯಹಾರಿಯೂ ಆದನು. ಯಾಕಂದರೆ ಮಾನವ ಮಾನವರಲ್ಲಿ ನಡೆವ ವ್ಯವಹಾರಕ್ಕೆ ನೀತಿಯೇ ನೆಲೆಗಟ್ಟು. ನಾಗರಿಕ ಜೀವನ ದಲ್ಲಿ ದುರಾಚಾರಕ್ಕೂ ದುರ್ನೀತಿಗೂ ಪ್ರೋತ್ಸಾಹವಿರಕೂಡದು. ಆದರೆ ರಾಜಕಾರಣದ ನೆವದಿಂದ ನಾವು ಅದೆಷ್ಟು ದುರಾಚಾರ ದುರ್ನೀತಿಗಳನ್ನು ಕಾಣುವದಿಲ್ಲ! ನಾಗರಿಕ ಜೀವನದಲ್ಲಿ ವ್ಯಕ್ತಿಯ ಹಿತದ ಜೊತೆಗೆ ಸಮಾಜ

ಹಿತಚಿಂತನೆ ಒಂದು ಮುಖ್ಯವಾದ ಧ್ಯೇಯ. ವ್ಯಕ್ತಿ ವ್ಯಕ್ತಿಗಳಲ್ಲಿ ಸದಾಚಾರ ಸದ್ವರ್ತನೆಗಳಿಂದಲೇ ಸಮಾಜವು ಸುವ್ಯವಸ್ಥಿತವಾಗುವದರಿಂದ ನೀತಿ ಧರ್ಮವು ಸಮಾಜದ ಮುಖ್ಯಗುರಿಯಾಗಿರಬೇಕು.

ಆನೆಯನೇರಿಕೊಂಡು ಹೋದಿರಿ ನೀವು
ಕುದುರೆಯನೇರಿಕೊಂಡು ಹೋದಿರಿ ನೀವು
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೊ ಅಣ್ಣ !
ಅಹಂಕಾರವೆಂಬ ಮದಗಜವನೇರಿ
ಮೂವಿಧಿಗೆ ಗುರಿಯಾಗಿ ಕೆಟ್ಟು ಹೋದಿರಲ್ಲ
ನಮ್ಮ ಕೂಡಲ ಸಂಗಮದೇವನನರಿಯದೆ ನರಕಕ್ಕೆ ಭಾಜನರಾದಿರಲ್ಲ!

ಅಂದು ಬಸವಣ್ಣನು ಹಾಡಿದ ಈ ವಚನವು ಮತಾಭಿಮಾನಿಗಳ ರಾಜಕಾರಣಿಗಳ ಇಂದಿನ ಚಿತ್ರವನ್ನು ಒಳ್ಳೇ ಮನೋಹರವಾಗಿ ರೂಪಿಸುತ್ತಿದೆ. ಧರ್ಮದ ದುರಭಿಮಾನವೆಂಬ ಆನೇಯನೇರಿ ಕೆಟ್ಟರು ಮತಾಭಿಮಾನಿಗಳು. ಅಧಿಕಾರ ಲಾಲಸೆಯೆಂಬ ಚಪಲವಾದ ಕುದುರೆಯನ್ನೇರಿ ಕೆಟ್ಟರು ರಾಜಕಾರಣಗಳು. ಇಬ್ಬರೂ ರಾಗ ದ್ವೇಷಾದಿಗಳನ್ನು ಲೇಪಿಸಿಕೊಂಡವರು. ಒಬ್ಬನು ಮತದ ದುರಭಿಮಾನದಿಂದ ಇನ್ನೊಬ್ಬನು ಪಕ್ಷಪಂಗಡಗಳ ದುರಭಿಮಾನದಿಂದ ರಾಗದ್ವೇಷಗಳನ್ನು ತಾಳಿ ಕಾಲಕರ್ಮಮಾಯೆಯೆಂಬ ಮೂರು ಬಗೆಯ ವಿಧಿಗೆ ಗುರಿಯಾದರು. ಮತಾಭಿಮಾನ ರಾಜಕಾರಣಗಳು ಸಮಾಜ ಜೀವನದಲ್ಲಿ ಈ ತೆರನಾದ ತುಳುಕನ್ನು ಎಬ್ಬಿಸಿದವು. ಮತವು ಮಾನವನನ್ನು ಅವಿವೇಕಿಯನ್ನಾಗಿ ಮಾಡಿದರೆ ರಾಜಕಾರಣವು ಅವನನ್ನು ವಂಚಕ ವೃತ್ತಿಗೆ ಇಳಿಸಿತು.

ಇದರಿಂದ ಮಾನವನು ರಾಜಕಾರಣದ ಬೆನ್ನು ಹತ್ತಬಾರದೆಂತಲ್ಲ. ಭಾರತದಲ್ಲಿ ಬಹುದಿನಗಳಿಂದ ಬೇರು ಬಿಟ್ಟ ಬ್ರಿಟಶರ ಪ್ರಭುತ್ವವನ್ನು ರಾಜಕೀಯ ಹೋರಾಟದಿಂದಲ್ಲವೆ ಭಾರತೀಯರು ಕಿತ್ತೊಗೆದುದು? ಆಗ ಭಾರತೀಯರಿಗೆ ರಾಜಕಾರಣವು ಅಧಿಕಾರ ಲಾಲಸೆಯಾಗಿರದೆ ಜನಸಮೂಹದ ಸೇವೆಯಾಗಿತ್ತು. ಜನಸೇವೆಯಲ್ಲಿಯೇ ಜೀವನದ ಸಾರ್ಥಕತೆಯೆಂದು ನಂಬಿಗೆಯೂ ಇತ್ತು. ಕೋಟ್ಯಾನುಕೋಟಿ ನಮ್ಮ ಬಂಧುಗಳು ದಾಸ್ಯಶೃಂಖಲೆಯಲ್ಲಿ ನೂರಾರು ವರ್ಷಗಳಿಂದ ಕೊಳೆಯುತ್ತಿರುವರಲ್ಲಾ !

ಅವರನ್ನು ಆ ಸಂಕಲೆಯಿಂದ ಮುಕ್ತಗೊಳಿಸುವದೆಂದರೆ ಭಾರತಾಂಬೆಯ ಬಂಧವಿಮೋಚನೆಗೆಯ್ದ ಹಾಗಲ್ಲವೇ ? ಹಾಗಾದರೆ ಆಂಗ್ಲ ಪ್ರಭುತ್ವದೊಡನೆ ಹೋರಾಡುವದೆಂದರೆ ಭಾರತ ಮಾತೆಯ ಸೇವೆಗೈದಂತಾಗುವದಲ್ಲವೆ?—ಹೀಗೆ ಬಗೆದು ಭಾರತೀಯರು ಸ್ವಾತಂತ್ರ್ಯಸಂಗ್ರಾಮದಲ್ಲಿ ಧುಮುಕಿದರು. ಅದಕ್ಕಾಗಿ ಸ್ವಾತಂತ್ರ್ಯಪ್ರಾಪ್ತಿಯ ಅಂದಿನ ಅವರ ರಾಜಕೀಯ ಆಂದೋಲನದಲ್ಲಿ ನಿಃಸ್ವಾರ್ಥಬುದ್ಧಿಯ ತೇಜಸ್ಸು ನಿರ್ಮಲಮತಿಯ ಓಜಸ್ಸು ತುಂಬಿ ತುಳುಕುತ್ತಿದ್ದವು. ಸುರೇಂದ್ರನಾಥ ಬ್ಯಾನರ್ಜಿಯವರು ಒಮ್ಮೆ "ಸ್ವಾತಂತ್ರ್ಯದೇವಿಯು ಬಹಳ ಮಾತ್ಸರ್ಯವುಳ್ಳವಳು; ಕಷ್ಟ ಸಹಿಷ್ಣುಗಳಿಗೂ ಸ್ವಾರ್ಥತ್ಯಾಗಿಗಳಿಗೂ ಮಾತ್ರ ಅವಳು ಒಲಿಯುವಳು" ಎಂದು ಹೇಳಿದ್ದರು. ಭಾರತೀಯರಾದರೂ ಸ್ವಾತಂತ್ರ್ಯಸಂಪಾದನೆಗಾಗಿ ವರ್ಣಿಸಲಸದಳವಾದ ಕಷ್ಟವನ್ನು ಸಹಿಸಬೇಕಾಯಿತು; ಸ್ವಾರ್ಥತ್ಯಾಗವನ್ನು ತೋರಿಸಬೇಕಾಯಿತು. ಐತಿಹಾಸಿಕ ದೃಷ್ಟಿಯಿಂದ ೧೮೫೭ ನೆಯ ವರ್ಷದಿಂದಲೇ ಆರಂಭವಾದ ಸ್ವಾತಂತ್ರ್ಯ ಕ್ರಾಂತಿಯು ಶಿಪಾಯಿಗಳ ಬಂಡಾಯ ಮಾತ್ರವಾಗಿರದೆ ಭಾರತೀಯರು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಎಸಗಿದ ಹೋರಾಟವಾಗಿತ್ತು. ೧೮೫೭ ರಿಂದ ೧೯೪೭ರ ವರೆಗಿನ ಈ ೯೦ ವರ್ಷಗಳ ಹೋರಾಟದ ಅವಧಿಯಲ್ಲಿ ಸ್ವಾತಂತ್ರ್ಯಕ್ಕಾಗಿ ಮಡಿದ ವೀರರ ಮುಖಂಡರ, ಅವಮಾನಕ್ಕೀಡಾದ ಹೆಣ್ಣುಮಕ್ಕಳ ಸಣ್ಣಮಕ್ಕಳ ಸಂಖ್ಯೆಯು ಲೆಕ್ಕಕ್ಕೆ ಸಿಲ್ಲುವಂತಿಲ್ಲ. ಅದೆಷ್ಟೋ ಅಜ್ಞಾತ ಸೈನಿಕರು ತಮ್ಮ ಇದ್ದ ಬಿದ್ದ ಆಸ್ತಿಯನ್ನು ಕಳೆದುಕೊಂಡು ನಿರಾಶ್ರಿತರಾದರು. ಇದೆಲ್ಲವನ್ನು ಮನದಂದರೆ ಸ್ವಾತಂತ್ರ್ಯದೇವಿಯು ಎಂತಹ ಮಾತ್ಸರ್ಯವುಳ್ಳವಳೆಂದೂ, ಕಷ್ಟ ಸಹಿಷ್ಣುತೆಗಳಿಗೂ ಸ್ವಾರ್ಥತ್ಯಾಗಿಗಳಿಗೂ ಮಾತ್ರ ಒಲಿಯುವಳೆಂದೂ ಹೇಳುವ ಮಾತು ಯಥಾರ್ಥವಾಗಿರುವದೆಂಬುದು ತಿಳಿದು ಬರುವದು. ಇನಿತೊಂದು ಬಲಿದಾನಗೆಯ್ದು ಸ್ವಾತಂತ್ರ್ಯವನ್ನು ಸಂಪಾದಿಸಿದ್ದಾಯಿತು. ಇನ್ನು ಸಂಪಾದಿಸಿದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಹೊಣೆಯು ಭಾರತೀಯರ ಮೇಲೆಯೇ ಇರುತ್ತದೆ.

ಸ್ವಾತಂತ್ರ್ಯದ ಗಳಿಕೆಯು ತ್ಯಾಗದಿಂದ, ಕಷ್ಟ ಸಹಿಷ್ಣುತೆಯಿಂದ; ಆದರೆ ಅದನ್ನು ಉಳಿಸಿಕೊಳ್ಳುವದು ಮಾತ್ರ ಆತ್ಮಸಂಯಮನದಿಂದ ಐಕ್ಯದಿಂದ ಇಂದ್ರಿಯ ನಿಗ್ರಹದಿಂದ ಒಕ್ಕಟ್ಟಿನಿಂದ! ಆತ್ಮಸಂಯಮನ ಇಲ್ಲವೆ ಇಂದ್ರಿಯ

ನಿಗ್ರಹ ಎಂಬ ಅಸ್ತಿವಾರದ ಮೇಲೆಯೇ ಸ್ವಾತಂತ್ರ್ಯದ ಮನೆಯನ್ನು ನಿಲ್ಲಿಸ ಬೇಕು. ಹಾಗೆ ಮಾಡದಿದ್ದರೆ ಮನೆಯು ಕುಸಿದು ಬೀಳುವದು. ಫ್ರಾನ್ಸ ದೇಶವು ಇದಕ್ಕೊಂದು ಉತ್ತಮ ನಿದರ್ಶನ. ಒಂದು ಕಾಲಕ್ಕೆ ಫ್ರೆಂಚರ ನಾಡು ಯುರೋಪದ ಮುಂದಾಳುವೆನಿಸಿತ್ತು. ಫ್ರಾನ್ಸದ ಸಂಸ್ಕೃತಿಯೇ ಯುರೋಪದ ಸಂಸ್ಕೃತಿಯೆಂದು ಕರೆಯಲ್ಪಡುತ್ತಿತ್ತು. ಫ್ರೆಂಚ ಭಾಷೆಯು ಯುರೋಪದ ವಿವಿಧ ರಾಷ್ಟ್ರಗಳಿಗೆ ಅಂತರ್‌ರಾಷ್ಟ್ರೀಯ ಭಾಷೆಯಾಗಿತ್ತು. ಆದರೆ ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಘನತೆ ಹೊಂದಿದ ಆ ದೇಶದಲ್ಲಿ ಏನು ಸಂಭವಿಸಿತು ಗೊತ್ತೆ? ರಾಜನು ದೇವಾಂಶ ಸಂಭೂತನೆಂದು ತಿಳಿಯಲ್ಪಡುತ್ತಿದ್ದ ಆ ಕಾಲದಲ್ಲಿ, ಔದ್ಯೋಗಿಕ ಕ್ರಾಂತಿಯು ಇನ್ನೂ ಕಣ್ಣು ತೆರೆಯದಿದ್ದ ಆ ಕಾಲದಲ್ಲಿ, ಮಾಟ ಮೋಡಿಗಳಿಗೂ ಅಂಧ ಶ್ರದ್ಧೆ ನಂಬುಗೆ ಗಳೂ ಪ್ರಾಶಸ್ತ್ಯವಿದ್ದ ಆ ಕಾಲದಲ್ಲಿ, ವಿಜ್ಞಾನವು ಇನ್ನೂ ಶೈಶವಾವಸ್ಥೆ ಯಲ್ಲಿದ್ದ ಆ ಕಾಲದಲ್ಲಿ, ಆರ್ಥಿಕ ಸಾಮಾಜಿಕ ರಾಜಕೀಯ ಐತಿಹಾಸಿಕ ಯಾವ ಘಟನೆಯೇ ಜರುಗಿದರೂ ಅದನ್ನು ಕಾರ್ಯಕಾರಣ ದೃಷ್ಟಿಯಿಂದ ಅರಿಯದೆ, ಯಾವುದೋ ಒಂದು ಅದೃಷ್ಟ ಶಕ್ತಿಯು ಅದೆಲ್ಲಿಯೋ ಕುಳಿತು ಕೊಂಡು 'ಮಾನವಾ ನೀನು ಅಣುಮಾತ್ರನು' ಎಂದು ಪರಿಹಾಸಗೆಯ್ಯುವ ತೆರದಿ ಅಣಕವಾಡುತ್ತಿದ್ದ ಆ ಕಾಲದಲ್ಲಿ ಫ್ರೆಂಚ ಕ್ರಾಂತಿಕಾರರು ಮುಂದೆ ಬಂದು ಸಡ್ಡು ಹೊಡೆದು ಲಡ್ಡು ಕಟ್ಟಿದು ನಿಂತರು. ೧೭೮೯ನೆಯ ಜುಲೈ ೧೪. "ಮಾನವನು ಮಾನವನೇ! ಮಾನವನಿಗಿಂತ ಮಿಗಿಲಾವುದು? ಸ್ವಾತಂತ್ರ್ಯವೀರರೇ, ಏಳಿರಿ; ಎದ್ದು ಘನವಂತರಾಗಿರಿ. ಮಾನವಕೋಟಿ ಗೆಲ್ಲ ಸ್ವಾತಂತ್ರ್ಯ, ಸಮಾನತೆ, ಸಹೋದರತೆಯನ್ನು ಬೋಧಿಸಿರಿ." (Man is Man. Who is more? Heroes of freedom, wake up to the glory. Speak ye to humanity of liberty, equality and fraternity)—ಎಂಬ ಉದ್ಘೋಷಣೆಯೊಂದಿಗೆ ಹೊರಬಿದ್ದು ನಭೋಮಂಡಲವನ್ನು ನಿನಾದಗೊಳಿಸಿದರು. ಸ್ವಾತಂತ್ರ್ಯಪಿಪಾಸು ರಾಷ್ಟ್ರ ಗಳಿಗೆ ಕ್ರಾಂತಿಯ ಕೈದೀವಟಿಗೆಯ ಪ್ರಕಾಶವನ್ನು ಬೀರಿದರು.

ಕ್ರಾಂತಿಯ ವಿಷಯದಲ್ಲಿ ಇನ್ನುಳಿದ ರಾಷ್ಟ್ರಗಳಿಗೆ ಮಾತೃಸ್ಥಾನ ದಲ್ಲಿದ್ದ ಈ ಫ್ರಾನ್ಸ ದೇಶವು ೧೯೪೦ರಲ್ಲಿ ಹಿಟ್ಲರನ ದಾಳಿಗೆ ತುತ್ತಾಗಿ

ಜರ್ಮನಿಯ ತೊತ್ತಾಗಲು ಕಾರಣವಾವುದು? ಫ್ರೆಂಚ ಜನರ ಮಿತಿ ಮೀರಿದ ಭೋಗ ವಿಲಾಸವೇ ಕಾರಣ. ಆತ್ಮಸಂಯಮನವಳಿದ ಇಂದ್ರಿಯ ಭೋಗವು ಅತಿಯಾಗಿ ಬೆಳೆದದ್ದರಿಂದಲೂ ಆಂತರಿಕ ಪಕ್ಷ ಸಂಗಡಗಳ ತೀವ್ರತೆಯ ದೆಸೆಯಿಂದಲೂ ಫ್ರಾನ್ಸ ತನ್ನ ಸ್ವಾತಂತ್ರ್ಯವನ್ನು ಕಳೆದು ಕೊಂಡಿತು. ಫ್ರಾನ್ಸದೇಶವಳಿದರೆ ನೀಚ ವಿಲಾಸವೃತ್ತಿಯು ಅಳಿವುದು— ಎಂದು ಹಿಟ್ಲರನೇ ಹೇಳಿದುದನ್ನು ಕೇಳಿದರೆ ಸಂಯಮನವಿಲ್ಲದ ಬಾಳಿನ ದುರವಸ್ಥೆಯ ಅರ್ಥವಾಗುವದಿಲ್ಲವೆ? ಭಾರತೀಯರಾದ ನಾವು ಇಂದು ಸ್ವತಂತ್ರವಾದೆವೆಂದು ಮೈಮರೆತು ಮನಬಂದಂತೆ ವರ್ತಿಸಿದರೆ ಆ ಸ್ವಾತಂತ್ರ್ಯ ದೇವಿಯು ಸ್ಥಿರವಾಗಿ ನಿಲ್ಲಳು. ಅದಕ್ಕಾಗಿ ಆವಳಿಗೆ ನಾವು ಸಲ್ಲಿಸಬೇಕಾದ ಮುಡಿಪು ಆತ್ಮಸಂಯಮನ. ಸ್ವೈರವೃತ್ತಿಯಿಂದ ಮಾನವನಿಗೆ ಸುಖ ಶಾಂತಿ ಗಳು ಲಭಿಸುವದಿಲ್ಲ; ಇಷ್ಟೇ ಅಲ್ಲ. ಸೌಂದರ್ಯ ಮಾಧುರ್ಯಗಳು ದುರ್ಲಭ ವಾಗುವವು. ತಂತಿಗಳ ಸಂಯಮನವೇ ತಂಬೂರಿಯಿಂದ ಹೊರಡುವ ಗಾನ ಮಾಧುರ್ಯಕ್ಕೆ ಕಾರಣವಾಗುವಂತೆ ಮಾನವನ ವೃತ್ತಿಯಲ್ಲಿಯೂ ನಡೆಯ ಲ್ಲಿಯೂ ಸೌಂದರ್ಯ ಮಾಧುರ್ಯಗಳು ತೋರಬೇಕಾದರೆ ಅವನ ಇಂದ್ರಿ ಯಗಳು ಸ್ವೈರವೃತ್ತಿಯಲ್ಲಿರದೆ ಸಂಯಮಿತವಾಗಿರಬೇಕು. ಎಂದರೆ ಆತ್ಮ ಸಂಯಮನ ಅಥವಾ ಇಂದ್ರಿಯ ನಿಗ್ರಹವು ಮಾನವನ ಜೀವನದ ಅಸ್ತಿ ವಾರವಾಗಬೇಕು. ಅನೇಕ ಬಿಡಿಬಿಡಿಯಾದ ವ್ಯಕ್ತಿಗಳು ಕೂಡಿ ಒಂದು ಇಡಿಯ ಸಮಾಜವಾಗುವದಲ್ಲವೆ? ಸಮಾಜಕ್ಕೆ ವ್ಯಕ್ತಿಯೆ ಘಟಕ. ವ್ಯಕ್ತಿಯ ಶೀಲಸಚ್ಚಾರಿತ್ರಗಳನ್ನೇ ಸಮಾಜದ ಪ್ರಗತಿ, ಸುಸ್ಥಿತಿ, ಶಾಂತಿಗಳು ಅವ ಲಂಬಿಸಿರುತ್ತವೆ. ವ್ಯಕ್ತಿಯು ಶೀಲಸಚ್ಚಾರಿತ್ರಗಳನ್ನು ಕಳೆದುಕೊಂಡು ದುರ್ಮಾರ್ಗ ಪ್ರವೃತ್ತನಾದರೆ ಅದೇ ಸಮಾಜ ಜೀವನಕ್ಕೆ ಕಳಂಕವಾಗಿ ಪರಿ ಣಮಿಸುವದು. ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೈಲಾದ ಮಟ್ಟಿಗೆ ಆತ್ಮಸಂಯಮನ ಇಲ್ಲವೆ ಇಂದ್ರಿಯ ನಿಗ್ರಹವನ್ನು ಮಾಡಬೇಕು. ಕೇವಲ ವೈಯಕ್ತಿಕ ಹಿತದ ಸಲುವಾಗಿಯೆ ಈ ನಿಗ್ರಹವಿರದೆ ಸಮಾಜ ಜೀವನದ ಭದ್ರತೆಗಾಗಿಯೂ ರಾಷ್ಟ್ರರಕ್ಷಣೆಗಾಗಿಯೂ ಇದು ಸಹಾಯವಾಗುವದು.

ಸ್ವಾತಂತ್ರ್ಯ ರಕ್ಷಣೆಗೆ ಇಲ್ಲವೆ ರಾಷ್ಟ್ರದ ಪೋಷಣೆಗೆ ಆತ್ಮಸಂಯಮನವು ಅವಶ್ಯವಿರುವಂತೆ ಐಕ್ಯತೆಯೂ ಅನಿವಾರ್ಯವಾಗಿದೆ.

ಪಕ್ಷಪಂಗಡಗಳಲ್ಲಿ ಬಲವಿದೆ ಎಂಬುದನ್ನು ಎಲ್ಲರೂ ಬಲ್ಲರು. ಮೊದಲು ಸ್ವಾತಂತ್ರ್ಯ ಸಂಪಾದಿಸುವ ಸಮಯದಲ್ಲಿ ತಮತಮಗೆ ಸರಿದೋರಿದ ಮಾರ್ಗದಲ್ಲಿ ಅನೇಕ ಪಕ್ಷ-ಪಂಗಡಗಳು ತಲೆದೋರಿದ್ದವು. ಸ್ವಾತಂತ್ರ್ಯ ದೊರೆತ ಮೇಲೆ ಆವುಗಳ ಅವಶ್ಯಕತೆಯು ಕಡಿಮೆಯಾಯಿತು. ರಾಜಕೀಯ ಸ್ವಾತಂತ್ರ್ಯ ದೊರೆತ ಮೇಲೆ ಎಲ್ಲವೂ ಸಾಧಿಸಿತು ಇನ್ನೇನು ಪಕ್ಷಪಂಗಡಗಳ ಅವಶ್ಯಕತೆಯೇ ಇಲ್ಲ ಎಂದರೆ ಅಲ್ಲ. ರಾಜಕೀಯ ಸ್ವಾತಂತ್ರ್ಯ ದೊರೆತ ಮೇಲೆಯೇ ಇನ್ನುಳಿದ ಸಾಮಾಜಿಕ, ಆರ್ಥಿಕ, ಅಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುವದು. ಕಳೆದ ನೂರಾರು ವರ್ಷಗಳಿಂದ ರಾಜಕೀಯ ದಾಸ್ಯದಲ್ಲಿದ್ದುದರಿಂದ ಉಳಿದ ಕ್ಷೇತ್ರಗಳಲ್ಲಿ ಯಾವ ಬಗೆಯ ಪ್ರಗತಿಯೂ ಸಾಧಿಸಲಿಲ್ಲ. ರಾಜಕೀಯ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲುವಂತಹ ಮನೆಮುರುಕತನವನ್ನು ಯಾವ ಪಕ್ಷಪಂಗಡವೂ ಮಾಡಕೂಡದು. ಕೇಂದ್ರ ಸರಕಾರವು ಹೈದರಾಬಾದಿನ ಮೇಲೆ ದಂಡಯಾತ್ರೆಯನ್ನು ಕೈಕೊಂಡ ಕೂಡಲೆ ಭಾರತದ ಎಲ್ಲ ಪಕ್ಷಪಂಗಡಗಳು ತಮ್ಮ ಹಾರ್ದಿಕ ಬೆಂಬಲವನ್ನು ನೀಡಿದವು. ಇಲ್ಲಿದೆ ಐಕ್ಯತೆಯ ಉದಾಹರಣೆ. ಪಕ್ಷಪಂಗಡಗಳು ವ್ಯಕ್ತಿಯ ದ್ವೇಷಾಸೂಯೆಗಳ ಮೇಲೆ ರಚಿತವಾಗದೆ ತತ್ವವನ್ನು ಆಧರಿಸಿ ರಚಿತವಾಗಿರಬೇಕು. ಪ್ರಜಾಪ್ರಭುತ್ವದಲ್ಲಿ ತತ್ವಗಳನ್ನಾಧರಿಸಿ ರಚಿತವಾದ ವಿರೋಧಿ ಪಕ್ಷವೊಂದು ಇರಲೇಬೇಕು. ಇಲ್ಲದಿದ್ದರೆ ಪ್ರಜಾಪ್ರಭುತ್ವವು ರಶಿಯಾ ದೇಶದಲ್ಲಿದ್ದಂತೆ ಸರ್ವಾಧಿಕಾರಿಯಾಗಿ ಪರಿಣಮಿಸುವದು. ಆ ತತ್ವ ಸಾಧನೆಗಾಗಿ ಅವು ಕೈಕೊಂಡ ಮಾರ್ಗವು ಸ್ವಾತಂತ್ರ್ಯತೆಗೆ ಚ್ಯುತಿಯನ್ನುಂಟು ಮಾಡಬಾರದು. ಹೀಗೆ ಹೇಳುವ ಕಾರಣವಿಷ್ಟೆ; ಭಾರತೀಯರಾದ ನಮಗೆ ವೇದಾಂತ ಮೀಮಾಂಸೆಯ ಪರಿಚಯವು ಸಾಕಷ್ಟಿದ್ದರೂ ರಾಷ್ಟ್ರಮೀಮಾಂಸೆಯಲ್ಲಿ ನಾವು ಇನ್ನೂ ಹೊಸಬರು. ರಾಷ್ಟ್ರಮೀಮಾಂಸೆಯನ್ನು ಅರಿತು ಅಡಗಿಸಿಕೊಳ್ಳಬೇಕಾಗಿದೆ ನಾವಿನ್ನೂ. ಇಂದಿನ ಮನ್ವಂತರದಲ್ಲಿ ರಾಷ್ಟ್ರಧರ್ಮವೇ ವ್ಯಕ್ತಿಯ ಕರ್ತವ್ಯವಾದುದರಿಂದ ರಾಷ್ಟ್ರಮೀಮಾಂಸೆಯು ಅತ್ಯಗತ್ಯವಾಗಿದೆ. ಪ್ಲೇಟೋ ಅರಿಸ್ಟಾಟಲ್ ಆವರು ತಮ್ಮ ಕಾಲದ ರಾಷ್ಟ್ರಧರ್ಮವನ್ನರಿತು ಅದರ ಮೀಮಾಂಸೆಯನ್ನು ಮಾಡಿದರು. ಸಮಾಜ ಜೀವನಕ್ಕಾಗಲಿ ಇಲ್ಲವೆ ಅಧ್ಯಾತ್ಮ ಪ್ರಗತಿಗಾಗಲಿ ಸ್ವತಂತ್ರ ನಾಗರಿಕ ಜೀವನವು ಅವಶ್ಯವೆಂದೂ ಆವರು ತೋರಿಸಿದರು. ಅವರ ಈ ಪ್ರಚಾರ ... ಗ್ರೀಕ ನಾಗರಿಕ ಜೀವನಕ್ಕೆ ಕೈಗನ್ನಡಿ.

ಗ್ರೀಕರಲ್ಲಿ ಮೊದಲಿನಿಂದಲೂ ನಾಗರಿಕ ಜೀವನಕ್ಕೆ ಪ್ರಾಶಸ್ತ್ಯ ಹೆಚ್ಚು. ರಾಜ್ಯದ ಕರ್ತವ್ಯಗಳನ್ನು ಈಡೇರಿಸುವದರಲ್ಲಿಯೇ ಗ್ರೀಕ ನಾಗರಿಕನು ತನ್ನ ಶಕ್ತಿ ಸಾಮರ್ಥ್ಯಗಳನ್ನೆಲ್ಲ ವಿಕಾಸಗೊಳಿಸಿ ಆತ್ಮ ಸಿದ್ಧಿಯನ್ನು ಪಡೆದನು. ಸಮಾಜ ಜೀವನದ ಮುಖದಿಂದಲೇ ಮಾನವನು ತನ್ನ ನಿಶ್ರೇಯಸವನ್ನು ಇಲ್ಲವೆ ಆತ್ಮಕಲ್ಯಾಣವನ್ನು ಹೊಂದಬೇಕೆಂದು ಬಗೆದ ಗ್ರೀಕರಲ್ಲಿ ಬಗೆ ಬಗೆಯ ರಾಜಕೀಯ ಸಿದ್ಧಾಂತಗಳು ಆಚರಣೆಯಲ್ಲಿ ಮೂಡಿಬಂದವು. ರಾಜಪ್ರಭುತ್ವ, ಕುಲೀನರ ಪ್ರಭುತ್ವ, ಪ್ರಜಾಪ್ರಭುತ್ವ, ಸಂಯುಕ್ತ ರಾಷ್ಟ್ರಭಾವನೆ, ಕೊನೆಗೆ ಸರ್ವಾಧಿಕಾರಿಗಳ ಸುಳುಹು—ರಾಜ್ಯಾಂಗವ್ಯವಸ್ಥೆಯ ಈ ಎಲ್ಲ ರೂಪುಗಳನ್ನು ಬಳಕೆಯಲ್ಲಿ ತಂದವರು ಗ್ರೀಕರೇ. ಇಂತಹ ರಾಜಕೀಯ ಜೀವನದಿಂದ ಅವರಲ್ಲಿ ಹುಟ್ಟಿದ, ಅವರ ಜೀವನದ ಸಕಲವ್ಯವಹಾರಗಳನ್ನು ಸ್ಫೂರ್ತಿಗೊಳಿಸಿದ ಅವರ ಸ್ವಾತಂತ್ರ್ಯಪ್ರೇಮವನ್ನು ನಾವು ಗಮನಿಸಬೇಕು. ಅವರ ಈ ಸ್ವಾತಂತ್ರ್ಯ ಪ್ರೇಮಕ್ಕೆ ಬಾಯಬಲ್, ಕುರಾನ, ಅವೆಸ್ತಾ ಎಂಬ ಯಾವ ಮತ ಗ್ರಂಥಗಳ ಕಟ್ಟಿಗೆ ಅವರು ಬೀಳದಿದ್ದುದೇ ಕಾರಣ. ದೈವ ಪ್ರೋಕ್ತವಾದ ಗ್ರಂಥವು ಯಾವದೂ ಇಲ್ಲದಿರುವಾಗ ಸಂದೇಹ ಬಂದೆಡೆ ಯೆಲ್ಲೆಲ್ಲ ಗ್ರಿಕರಿಗೆ ತಮ್ಮ ಬುದ್ಧಿಯೇ ಪ್ರಮಾಣವಾಯಿತು. ಈ ಬುದ್ಧಿಬಲ ಪ್ರಮಾಣವೆಂದು ನಂಬಿದ ಆ ಗ್ರೀಕರಿಗೆ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಅಡ್ಡಿ ಯಾವುದು? ಅಂತೆಯೇ ಅವರ ರಾಜಕೀಯ ವಿಚಾರಸರಣಿಯು ಅಷ್ಟು ಪ್ರಬಲವಾಗಿತ್ತು. ಮನುಷ್ಯನ ಬುದ್ಧಿಗೆ ಅನ್ಯಾಯವೆಂದು ತೋರುವ ಕಾರ್ಯ ವನ್ನು ದೇವರು ಮಾಡಿದರೂ ಅದು ಅನ್ಯಾಯವೆಂದೇ ಹೇಳುವ ಗ್ರೀಕನು ಅದೆಷ್ಟು ಸ್ವಾತಂತ್ರ್ಯಪ್ರೇಮಿಯಾಗಿದ್ದನೆಂಬುದನ್ನು ಊಹಿಸಿಕೊಳ್ಳ ಬಹುದು. ಪಾಶ್ಚಿಮಾತ್ಯರಿಗೆ ನಾಗರಿಕ ಜೀವನದ ಮಹತ್ವವು ಪಿತ್ರಾರ್ಜಿತ ವಾಗಿ ಬಂದದ್ದು ಈ ಗ್ರೀಕರಿಂದ. ಅದನ್ನು ಅವರು ಅನೇಕ ಶತಮಾನಗಳಿಂದ ಕಾಯ್ದುಕೊಂಡು ಬಂದವರಾಗಿದ್ದಾರೆ. ಅವರಂತೆ ರಾಷ್ಟ್ರಧರ್ಮದಲ್ಲಿ ನಾವು ಮುಂದುವರಿದವರಲ್ಲ—ಆದ್ದರಿಂದ ನಾವು ಕಟ್ಟಿ ಬೆಳಿಸಬೇಕೆಂದಿರುವ ರಾಷ್ಟ್ರ ಧರ್ಮವನ್ನು ಅತಿ ಎಚ್ಚರದಿಂದ ಪಾಲಿಸಿ ಮುಂದುವರಿಯಬೇಕು.

ಹೀಗೆ ಹೇಳುವದರಿಂದ ರಾಷ್ಟ್ರಧರ್ಮವೇ ಅಧಿಕವೆಂದೂ ಅದಕ್ಕಿಂತ

ಮಿಗಿಲಾದ ಧರ್ಮಗಳೇ ಇಲ್ಲವೆಂದೂ ಯಾರೂ ತಿಳಿಯಬಾರದು. ಪ್ರಾಂತೀಯತೆಯನ್ನು ಮೀರಿ ರಾಷ್ಟ್ರೀಯತೆಯು ಇರುವಂತೆ ರಾಷ್ಟ್ರೀಯತೆಯನ್ನು ಮೀರಿ ಅಂತರ್‌ರಾಷ್ಟ್ರೀಯತೆಯಿದೆ. ರಾಷ್ಟ್ರೀಯತೆಯ ದೃಷ್ಟಿಯಿಂದ ನೋಡಿದಾಗ ಪ್ರಾಂತೀಯತೆಯು ಒಂದು ಬಗೆಯ ಜಾತೀಯತೆಯೆನಿಸುವಂತೆ ಅಂತರ್‌ರಾಷ್ಟ್ರೀಯತೆಯ ದೃಷ್ಟಿಯಿಂದ ನೋಡಿದಾಗ ರಾಷ್ಟ್ರೀಯತೆಯು ಒಂದು ಬಗೆಯ ಜಾತೀಯತೆಯಾಗಿ ಪರಿಣಮಿಸುವದು. ಆದರೆ ಅಂತರ್‌ರಾಷ್ಟ್ರೀಯತೆಯಾದರೂ ಈಗ ಅದೆಷ್ಟು ಮಟ್ಟಿಗೆ ಆಚರಣೆಯಲ್ಲಿ ಬಂದಿದೆ? ಮಿತಿಮೀರಿದ ರಾಷ್ಟ್ರೀಯತೆಯಿಂದ ಯುದ್ಧಗಳಾಗುವವೆಂದು ಕಂಡು ಹಿಡಿದು ಇನ್ನು ಮುಂದೆ ರಾಷ್ಟ್ರೀಯತೆಗೆ ತಡೆಹಾಕಿ ಅಂತರ್‌ರಾಷ್ಟ್ರೀಯ ಭಾವನೆಯನ್ನು ಬೆಳಸಿ ಯುದ್ಧಗಳನ್ನೇ ಅಳಿಸಿಬಿಡಬೇಕೆಂದು ಪ್ರಯತ್ನಗಳಾದವು. ಮೊದಲನೆಯ ಮಹಾಯುದ್ಧವು ಮುಗಿದ ಮೇಲೆ ಅಂತರ್‌ರಾಷ್ಟ್ರೀಯತೆಯನ್ನು ಅರಳಿಸುವದಕ್ಕಾಗಿ ರಾಷ್ಟ್ರಸಂಘವು (League of Nations) ರಚಿತವಾಯಿತು. ಅದು ಎಷ್ಟರ ಮಟ್ಟಿಗೆ ಅಂತರ್‌ರಾಷ್ಟ್ರೀಯತೆಯನ್ನು ಸಾಧಿಸಿತೆಂಬದೂ ಹಾಗು ಅದರ ಇತಿಶ್ರೀ ಹೇಗಾಯಿತೆಂಬದೂ ಎಲ್ಲರಿಗೆ ಗೊತ್ತಿದೆ. ಹಾಗೆಯೇ ಮೊನ್ನಿನ ಮಹಾಯುದ್ಧವು ಮುಗಿದ ಮೇಲೆ ಪುನಃ ಅಂತರ್‌ರಾಷ್ಟ್ರೀಯತೆಯನ್ನು ಬೆಳಿಸುವದಕ್ಕಾಗಿ, ಯುದ್ಧಗಳ ವಾರ್ತೆಯನ್ನೆಲ್ಲ ಮುಗಿಸಿ ಬಿಡುವದಕ್ಕಾಗಿ ಸಾನ್‌ಫ್ರಾನ್ಸಿಸ್ಕೋದಲ್ಲಿ ಸಂಯುಕ್ತ ರಾಷ್ಟ್ರಸಂಘವು (U.N.O.) ಸ್ಥಾಪಿತವಾಯಿತು ಶಾಂತಿ ಸುಸ್ಥಿತಿಗಳನ್ನು ಕಾಯಲೆಂದು ಹೊರಟ ಭದ್ರತಾಮಂಡಲವೇ ಅಶಾಂತಿ ದುಸ್ಥಿತಿಗಳನ್ನು ನಿರ್ಮಿಸುತ್ತ ಹೋದ ಮೇಲೆ ಅದಕ್ಕೆ ಭದ್ರತಾಮಂಡಲವೆಂದು ಕರೆಯದೆ ಅಭದ್ರತಾ ಮಂಡಲವೆಂದು ಕರೆಯುವದೇ ಲೇಸು.

ಅಂತರ್‌ರಾಷ್ಟ್ರೀಯತೆಗಾಗಿ ಪ್ರಯತ್ನಿಸಬೇಕೆನ್ನುತ್ತಿರುವ ಮುಖಂಡರೆ ರಾಷ್ಟ್ರೀಯ ಭಾವನೆಗೆ ಬಲವಾಗಿ ಅಂಟಿಕೊಂಡಿದ್ದಾರೆ. ಅದಕ್ಕಾಗಿ ಸಂಯುಕ್ತ ರಾಷ್ಟ್ರಸಂಘದ ಘನವಾದ ಉದ್ದೇಶಗಳಾವವೂ ಈಡೇರದಂತಾಗಿವೆ. ರಾಷ್ಟ್ರವೇ ತಮ್ಮ ಪ್ರಾಣವೆಂದೂ, ರಾಷ್ಟ್ರೀಯ ಪ್ರಭುತ್ವವೇ ತಮ್ಮ ಜೀವಾಳವೆಂದೂ ಬಗೆದ ರಾಜಕಾರಣಿಗಳು ಅಂತರ್‌ರಾಷ್ಟ್ರೀಯತೆಯ ಕೇವಲ ಆಭಾಸವನ್ನು

Farce) ಮಾಡುತ್ತಲಿದ್ದಾರೆ. ಅಮೇರಿಕೆಯು ಪ್ರಬಲವಾದೀತೆಂಬ ಅಂಜಿಕೆ ಕೆಯಿಂದ ರಶಿಯಾದೇಶವೂ ರಶಿಯುವು ಪ್ರಬಲವಾದೀತೆಂಬ ಭಯದಿಂದ್ರ ಅಮೇರಿಕೆಯೂ ಒಂದನ್ನೊಂದು ಸಾಶಂಕ ದೃಷ್ಟಿಯಿಂದ ನೋಡುತ್ತ ತಮ ತಮ್ಮ ರಾಷ್ಟ್ರೀಯ ಪ್ರಭುತ್ವವನ್ನು ಕಾಯ್ದುಕೊಳ್ಳಲು ಹವಣಿಸುತ್ತಿವೆ. ನಿಜ ವಾದ ಅಂತರ್‌ರಾಷ್ಟ್ರೀಯ ಸಂಘವೊಂದನ್ನು ನಿರ್ಮಿಸಿದ ಮೇಲೆ ಅದರ ಪ್ರಭುತ್ವವನ್ನು ಎಲ್ಲ ರಾಷ್ಟ್ರಗಳೂ ಒಪ್ಪಿಕೊಂಡು ತಮ್ಮ ವೈಯಕ್ತಿಕ ಪ್ರಭುತ್ವ ವನ್ನು ಕೆಲಮಟ್ಟಿಗಾದರೂ ಬಿಟ್ಟು ಕೊಡಬೇಕಾಗುವದು. ಯಾವ ರಾಷ್ಟ್ರವೂ ಹೀಗೆ ತನ್ನ ಬಾಹ್ಯ ಪ್ರಭುತ್ವವನ್ನು ಬಿಟ್ಟುಕೊಡಲು ಸಿದ್ಧವಿಲ್ಲ. ಜಾತೀಯತೆ ಯನ್ನು ಹೊಡೆದೋಡಿಸಬೇಕೆಂದು ಪ್ರಯತ್ನಿಸುವ ಕೆಲವು ಮುಖಂಡರು ಹೇಳಿಕೇಳಿ ಜಾತ್ಯಂಧರಿರುವಂತೆ ಯುದ್ಧಗಳಾಗದಂತೆ ನೋಡಿಕೊಳ್ಳಲು ಅಂತರ್‌ರಾಷ್ಟ್ರೀಯ ಸಂಘವೊಂದನ್ನು ರಚಿಸಹೊರಟ ಜಾತ್ಯಂಧರು ಹೇಳಿ ಕೇಳಿ ರಾಷ್ಟ್ರವಾದಿಗಳಾಗಿದ್ದಾರೆ, ಯುದ್ಧ ಪ್ರಿಯರಾಗಿದ್ದಾರೆ. ಈ ಮಸೆದಾಟ ದಲ್ಲಿ ಮೂರನೆಯ ಜಾಗತಿಕ ಮಹಾಯುದ್ಧವಾದರೆ ಅದರಲ್ಲಿ ಯಾವ ಪಂಗಡಕ್ಕೂ ಸೇರದೆ ಭಾರತವು ತನ್ನ ಪ್ರೀತಿ ನೀತಿಗಳ ಅಂತರ್‌ರಾಷ್ಟ್ರೀಯ ಉಚ್ಚವಾದ ಆದರ್ಶದಿಂದಲೇ ಜಗತ್ತಿನ ರಾಷ್ಟ್ರಗಳಿಗೆಲ್ಲ ಜ್ಯೋತಿಯನ್ನು ತೋರಿಸಬೇಕು; ತನ್ನ ನಿಜವಾದ ರಾಷ್ಟ್ರಧರ್ಮವನ್ನು ಪರಿಪಾಲಿಸಬೇಕು, ಪ್ರದರ್ಶಿಸಬೇಕು. ಆದರೆ ಆ ತಾಟಸ್ಥ್ಯ ಧೋರಣವು ನೆಲಹಿಡಿದ ನಿಷ್ಕ್ರಿಯೆಯ ವೇದಾಂತವಾಗಿರದೆ, ನಿಷ್ಕಾಗರಿಷ್ಠ ವೃತ್ತಿಯಿಂದ ಕೂಡಿದ ಕ್ರಿಯಾತ್ಮಕ ಧೋರಣೆಯಾಗಿರಬೇಕು. ವಿಧಾಯಕ ಮಾರ್ಗದಲ್ಲಿ ಜಗತ್ತನ್ನು ಒಗ್ಗೂಡಿಸಲು ಸಾಧನವಾಗಿರಬೇಕು.

ಭಾರತವು ರಾಜಕೀಯ ದೃಷ್ಟಿಯಿಂದ ಸ್ವತಂತ್ರವಾಯಿತು; ಪ್ರಜಾಪ್ರಭುತ್ವ ರಾಷ್ಟ್ರವೂ ಆಯಿತು. ಆದರೆ ಅದು ಇನ್ನೂ ಏಕತಂತ್ರ ರಾಷ್ಟ್ರವಾಗಬೇಕಾಗಿದೆ. ಇದರಿಂದ ಭಾರತವು ಹಿಂದೆಂದೂ ಸ್ವತಂತ್ರವಿದ್ದಿಲ್ಲವೆಂದಲ್ಲ; ಹಿಂದೊಂದು ಕಾಲಕ್ಕೆ ಫಿಲಿಫಾಯಿನ್ಸದ ವರೆಗೆ ಸಾಮ್ರಾಜ್ಯ ಹಬ್ಬಿಸಿಕೊಂಡಿದ್ದ ಭಾರತವು ಸ್ವಾತಂತ್ರ್ಯವನ್ನು ಕಳೆದು ಕೊಂಡಿತು; ದುಃಖದ ಮಾತೆಂದರೆ, ಸ್ವಜನರ ದ್ರೋಹದಿಂದಲೇ ಆಗಾಗ ಅದು ತಾನು ಪರತಂತ್ರದ ಅವಮಾನಕ್ಕೀಡಾಗಬೇಕಾಯಿತು. ಈ

ನಾತಿಗೆ ಇತಿಹಾಸವು ಸಾಕ್ಷಿ ಕೊಡುತ್ತದೆ. ಮಹಮ್ಮದ ಕಾಸೀಮನು ಸಿಂಧದ ಮೇಲೆ ದಂಡೆತ್ತಿ ಬಂದಾಗ ಸಿಂಧದಲ್ಲಿ ದಾಹಿರನು ರಾಜ್ಯವಾಳುತ್ತಿದ್ದನು. ದಾಹಿರನ ಸೇನಾಪತಿಗಳೇ ಕಾಸೀಮನ ಕೈಯಾಸೆಗೆ ಕೊರೆ ಕೂಳಾಗಿ ಅವನ ಸೈನ್ಯದೊಡನೆ ಕಾದುವದನ್ನು ಬಿಟ್ಟರು. ಪೃಥ್ವಿರಾಜನ ವಿರುದ್ಧ ಹೋರಾಡಲಿಕ್ಕೆ ಮಹಮ್ಮದ ಘೋರಿಗೆ ಆಮಂತ್ರಣವಿತ್ತ ಮಹಾಶಯನು ಜಯಚಂದನೆಂಬುದು ಸರ್ವಶೃತವಿದೆ. ಶಿವಾಜಿಯು ಹಿಂದುಗಳ ಬಂಧವಿಮೋಚನಕ್ಕಾಗಿ ಹೋರಾಡುತ್ತಿರುವಾಗ ಕೆಲವು ಮರಾಠಾ ಸರದಾರರೂ ರಜಪೂತ ಅರಸರೂ ಮೊಗಲ ಚಕ್ರವರ್ತಿಯ ಪಕ್ಷಗಟ್ಟಿ ಯುದ್ಧಮಾಡಿದರು. ಶೀಖರ ಸಂಸ್ಥಾನಗಳನ್ನು ಸದೆಬಡೆಯಲೆಂದು ಬ್ರಿಟಿಶರು ಶಿಖರ ಅರಸನಾದ ರಣಜಿತಸಿಂಗನೊಡನೆ ಕಾದುವಾಗ ಅವರ ಮುಖ್ಯ ಸೇನಾಪತಿಯಾದ ಗುಲಾಬಚಂದನು ಕೈಕಟ್ಟಿಕೊಂಡು ಕುಳಿತನು. ೧೮೫೭ರಲ್ಲಿ ಸ್ವಾತಂತ್ರ್ಯ ಪಿಪಾಸುಗಳಾದ ಸೈನಿಕರು ಬ್ರಿಟಿಶರೊಡನೆ ಯುದ್ಧ ಹೂಡಿದಾಗ ಶೀಖರು ಸಾಕ್ಷೀಭೂತವಾಗಿ ಅದನ್ನು ನೋಡುತ್ತ ನಿಂತರು. ಇನ್ನು ಮೇಲೆ ಇತಿಹಾಸದ ಪುನರಾವೃತ್ತಿಯಾಗದಂತೆ ನಾವು ನೋಡಿಕೊಳ್ಳಬೇಕು. ಭಾರತದಲ್ಲಿ ಹಲವು ಧರ್ಮಗಳು, ಹಲವು ಮತಗಳು, ಹಲವು ಭಾಷೆಗಳು, ಹಲವು ಸಾಂಪ್ರದಾಯಗಳು, ಹಲವು ಜಾತಿ-ಉಪಜಾತಿಗಳು, ಹಲವು ಪಕ್ಷ-ಪಂಗಡಗಳು ಎಂಬ ನೆವವನ್ನು ಮುಂದೊಡ್ಡಿ ಸ್ವಾತಂತ್ರ್ಯಕ್ಕೆ ಭಂಗಬರುವಂತಹ ಮನೆಮುರುಕತನವನ್ನು ಮಾಡಬಾರದು. 'ಬಾಳೆಗೆ ಒಂದು ಫಲ, ಬಾಳುವವನಿಗೆ ಒಂದೇ ಮಾತು' ಎಂಬ ಗಾದೆಗನುಸಾರವಾಗಿ ಸ್ವತಂತ್ರವಾಗಿ ಜೀವಿಸಬೇಕೆಂದಿರುವ ಜನಾಂಗಕ್ಕೆ ಅಭಿಮಾನದ ಒಂದೆರಡು ಕಟ್ಟುಗಳಿದ್ದರೆ ಸಾಕು. ಆಡಾಗಿ ಇನ್ನೂರು ವರುಷ ಬಾಳುವದಕ್ಕಿಂತ ಹುಲಿಯಾಗಿ ಎರಡು ದಿವಸ ಬಾಳುವದು ಲೇಸೆಂಬ ಉತ್ಸಾಹ ಮತ್ತು ಮನಸ್ಸಿದ್ದಲ್ಲಿ ಮಾರ್ಗವೆಂಬ ಮನೋಧೈರ್ಯ — ಸ್ವದೇಶಾಭಿಮಾನದ ಈ ಎರಡು ಕಟ್ಟುಗಳಿಂದ ನಾಡಿನಲ್ಲಿ ಐಕ್ಯತೆಯು ಮೂಡಿ ಬಂದು, ಸ್ವಾತಂತ್ರ್ಯಕ್ಕೆ ಅಡ್ಡ ಬರುವ ಪ್ರತಿಬಂಧಕಗಳನ್ನು ತಡೆಯಲು ಸಾಧ್ಯವಾಗುವದು. ಸ್ವತಂತ್ರ ರಾಜ್ಯವನ್ನು ಕಟ್ಟಬೇಕೆಂಬ ಮನೋದಾರ್ಢ್ಯವಿದ್ದುದರಿಂದಲೇ ಸ್ವಿತ್ಸರಲಂಡಿನ ನಿವಾಸಿಗಳಾದ ಇಟಲಿ ಫ್ರೆಂಚ ಜರ್ಮನಿ ಎಂಬ ಮೂರು ಜಾತಿ, ಮೂರು

ಭಾಷೆ, ಮೂರು ವಿಧವಾದ ಆಚಾರ ವ್ಯವಹಾರಗಳುಳ್ಳ ಜನರು ತಮ್ಮ ಉದ್ದೇಶವನ್ನು ಸಫಲ ಮಾಡಿಕೊಂಡರು. ಈ ದೇಶದ ನಾಗರಿಕರ ಧರ್ಮ, ಜಾತಿ, ಕುಲ, ಮತ, ಸಾಂಪ್ರದಾಯ, ವೇಷ, ಭಾಷೆಗಳು ಬೇರೆ ಬೇರೆಯಾಗಿದ್ದರೂ ತೋರಿಕೆಯ ಈ ಭೇದವನ್ನು ಗಣನೆಗೆ ತಾರದೆ ದೇಶರಕ್ಷಣೆಯೇ, ದೇಶಸೇವೆಯೇ, ದೇಶಧರ್ಮವೇ ದೊಡ್ಡದೆಂದು ಭಾವಿಸಿ ಐಕ್ಯಮತದಿಂದ ರಾಜ್ಯವನ್ನು ಗಳಿಸಿ ಉಳಿಸಿ ಬೆಳೆಸಿದುದು ಸ್ವಿಸ್ ಜನರ ದೃಢಸಿರ್ಧಾರದ ಫಲವೆಂದು ಹೇಳಬಹುದು. ಸ್ವತಂತ್ರ ರಾಜ್ಯಸುಖವನ್ನು ಅನುಭವಿಸಬೇಕೆಂದಿರುವ ಒಂದು ಅಥವಾ ಹಲವು ಜನಾಂಗಗಳ ಉದ್ದೇಶವು ಈಡೇರುವದಕ್ಕೆ ಆ ಜನಾಂಗಗಳ ಐಕ್ಯತೆಯೂ ಸಾಹಸವೂ ತ್ಯಾಗವೂ ಕಾರಣಗಳೇ ವಿನಹ ಭಾಷೆ ಮತ ಸಾಂಪ್ರದಾಯ ಮುಂತಾದವುಗಳಲ್ಲಿ ಕಂಡುಬರುವ ತೋರಿಕೆಯ ವ್ಯತ್ಯಾಸವು ಕಾರಣವಲ್ಲವೆಂಬುದು ಈ ನಿದರ್ಶನದಿಂದ ನಿಷ್ಪನ್ನವಾಗುತ್ತದೆ. ಇದಕ್ಕಾಗಿ ಜನಸಾಮಾನ್ಯರಲ್ಲಿ ಶಿಕ್ಷಣ ಪ್ರಸಾರವು ಆಗುವದು ಒಳಿತು. ಶಿಕ್ಷಣವೆಂದರೆ ಬರಿಯ ಅಕ್ಷರ ಜ್ಞಾನವಲ್ಲ. ನಾಡಿನ ಅಭಿವೃದ್ಧಿಗೆ ಅದರ ಐಕ್ಯತೆಗೆ ನಾಗರಿಕರ ತ್ಯಾಗ, ಧೈರ್ಯ, ಸಾಹಸ ಮುಂತಾದ ಸದ್ಗುಣ ಸಂಪತ್ತೇ ಸಹಕಾರಿಯಲ್ಲದೆ ಕುಲ ಶೀಲ ಗೋತ್ರ-ಸೂತ್ರಗಳಲ್ಲವೆಂಬುದನ್ನು ಜನಸಾಮಾನ್ಯರಿಗೆ ಮನದಟ್ಟಾಗುವಂತೆ ಸಾಹಿತ್ಯ ಸಂಗೀತ ಚಿತ್ರ ಮೊದಲಾದ ಕಲೆಗಳ ಹಾಗು ಆಧುನಿಕ ವಿಜ್ಞಾನದ ಉಪಕರಣಗಳಾದ ಚಲಚ್ಚಿತ್ರ ರೇಡಿಯೋ ಮುಂತಾದವುಗಳ ಮುಖಾಂತರ ತಿಳಿಸುವಂತಾಗಬೇಕು. ಸಾಮಾಜಿಕ ಸಹೋದರತೆಯು ಸುಳಿದೆಗೆದು ಬೆಳೆದರೇನೇ ರಾಜಕೀಯ ಸ್ವಾತಂತ್ರ್ಯವು ಸ್ಥಿರವಾಗಿ ನಿಲ್ಲುವದು.

ಬ್ರಿಟಿಶರೊಡನೆ ಸ್ವಾತಂತ್ರ್ಯಸಂಗ್ರಾಮವನ್ನು ಹೂಡಿ ಅಪರಿಮಿತ ಬೆಲೆಯನ್ನು ತೆತ್ತು ಭಾರತಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಿದ್ದಾಯಿತು. ಈ ಮಹತ್ಕಾರ್ಯದಲ್ಲಿ ಅಷ್ಟೊಂದು ಅಪರಿಮಿತ ಬೆಲೆಯನ್ನು ತೆತ್ತವರು ಮಧ್ಯಮ ವರ್ಗದಜನರೇ ಎಂಬುದನ್ನು ನೆನಪಿನಲ್ಲಿಡಬೇಕು. ಜೀವನ ಕಲಹವನ್ನು ಯಶಸ್ವಿಯಾಗಿ ಸಾಗಿಸಲು ಬೇಕಾಗುವಷ್ಟು ಉಪಜೀವನ ಸಾಮುಗ್ರಿಗಳನ್ನು ಹೊಂದಿ, ತನಗೆ ದೊರೆತ ವಿರಾಮವನ್ನು ದುಂದುಗಾರಿಕೆಯಲ್ಲಿ ವೆಚ್ಚಮಾಡದೆ ಅದನ್ನು ಸಂಸ್ಕೃತಿಯ ಸಂಪಾದನೆಗೆ ವಿನಿಯೋಗಿಸಿ, ಸಂಪಾದಿಸಿದ ಸಂಸ್ಕೃತಿಯನ್ನು

ಪೋಷಿಸುತ್ತಿರುವ ವರ್ಗವೆಂದರೆ ಮಧ್ಯಮ ವರ್ಗ. ಸತ್ಯವು ಸುವರ್ಣ ಮಧ್ಯವನ್ನು ಅವಲಂಬಿಸಿದಂತೆ ಸಂಸ್ಕೃತಿಯು ತನ್ನ ಪಾಲನೆ ಪೋಷಣೆಗಳಿಗೆ ಮಧ್ಯಮ ವರ್ಗವನ್ನು ಆಶ್ರಯಿಸಿದೆ. ಇಂತಹ ಮಧ್ಯಮ ವರ್ಗವು ಇಂದು ನಾಮಃಶೇಷವಾಗುವದಲ್ಲಿದೆ. ಭಾರತದ ರೋಗಿಯೆಂದು ಹೆಸರಾದ ಪಶ್ಚಿಮ ಬಂಗಾಲವು . ಇದಕ್ಕೆ ಸಾಕ್ಷಿಯಾಗಿದೆ. ಮಧ್ಯಮ ವರ್ಗದ ಜನರು ಉಪಜೀವನದ ಸಾಮುಗ್ರಿಗಳಿಲ್ಲದೆ ತೊಳಲುತ್ತಿರುವದೇ ಇದಕ್ಕೆ ಕಾರಣ. ಇದರಿಂದ ನಾಡಿನಲ್ಲಿ ಉತ್ತಮ ವರ್ಗ, ಮಧ್ಯಮ ವರ್ಗ, ಕನಿಷ್ಟ ವರ್ಗಗಳೆಂಬ ತಾರತಮ್ಯವು ಇರಬೇಕೆಂದರ್ಥವಲ್ಲ; ಹಾಗೆಯೇ ಸಂಸ್ಕೃತಿಯಾದರೂ ಒಂದೇ ವರ್ಗದ ಸೊತ್ತಾಗಿರಬೇಕೆಂದೂ ಅರ್ಥವಲ್ಲ. ಪ್ರಜಾರಾಜ್ಯದಲ್ಲಿ ಸಂಸ್ಕೃತಿ-ಸ್ವಾತಂತ್ರ್ಯಗಳು ಎಲ್ಲರಿಗೂ ಲಭಿಸುವಂತೆ ಸಮಯ-ಸನ್ನಿವೇಶಗಳ ಏರ್ಪಾಟು ಇರತಕ್ಕದ್ದು. ಅವುಗಳ ಸಂಪಾದನೆಯು ಅವರವರ ಸಾಹಸವನ್ನೂ ಬುದ್ಧಿಕೌಶಲ್ಯವನ್ನೂ ಆಸರ ಗೊಂಡಿವೆ. ಅಂದು ಸ್ವತಂತ್ರ ಸಂಗ್ರಾಮದಲ್ಲಿ ಸಾವಿಗೆ ಹೆದರದೆ ಬ್ರಿಟಿಶರ ಗುಂಡುಗಳಿಗೆ ಎದೆಗೊಟ್ಟ ಮಧ್ಯಮ ವರ್ಗದ ಗಂಡುಗಲಿಗಳು ಇಂದು ಸ್ವತಂತ್ರ ಭಾರತದಲ್ಲಿ ಹಸಿವೆಗೆ ಹೆದರಿ ಕಸಿವಿಸಿಗೊಂಡು ಕಮ್ಯುನಿಜಮ್ಮದ ಕೈವಾರಿಗಳಾಗ ಹತ್ತಿದ್ದಾರೆ. ಹಸಿವು ಹದನವರಿತು ಈ ವರ್ಗವಾದ (Communism) ವನ್ನು ವರಿಸುತ್ತದೆ. ಇದರ ಫಲವೆಂಬಂತೆ ಈಗಾಗಲೇ ಭಾರತದಲ್ಲಿ ವರ್ಗವಾದವು ಇಣಿಕಿ ಹಾಕಹತ್ತಿದೆ. ಜಾತಿಮತ್ಸರದಷ್ಟೇ ಈ ವರ್ಗವಾದವು ರಾಜಕೀಯ ಸ್ವಾತಂತ್ರ್ಯಕ್ಕೆ ಕುಠಾರಪ್ರಾಯವೆಂಬುದನ್ನು ಮರೆಯಲಾಗದು. ನಾಡಿನ ಹದಗೆಟ್ಟ ಪರಿಸ್ಥಿತಿಯ ಲಾಭಪಡೆದು ವರ್ಗ ವಾದವು ತನ್ನ ಉಗ್ರವಾದ ಜಾಲವನ್ನು ಪಸರಿಸುವದು. ರಾಷ್ಟ್ರದ ಅನ್ನಭಾಂಡಾರ ಬರಿದು; ಉದ್ದಿಮೆಗಳನ್ನು ಬಲಪಡಿಸಬೇಕೆಂದರೆ ಯಂತ್ರಸಾಮುಗ್ರಿಗಳು ನಾಸ್ತಿ; ಒಕ್ಕಲತನವನ್ನು ಉನ್ನತಗೊಳಿಸಬೇಕೆಂದರೆ ಗೊಬ್ಬರದ ಅಭಾವ; ರೈತರ ಆಲಸ್ಯದ ಸ್ವಭಾವ; ಯಂತ್ರಗಳ ದುರ್ಭಾವ! ಹಣದ ಉಬ್ಬರದ ದೆಸೆಯಿಂದ ಬಂಡವಾಳದ ಬೆಲೆ ತಗ್ಗಿತು. ರಾಷ್ಟ್ರೀಕರಣದ ಹೆದರಿಕೆಯ ಮೂಲಕವಾಗಿ ಬಂಡವಾಳವು ಹೊರಗೆ ಬರದೆ ಹೆದರಿ ಹೊದತು ಹೊಕ್ಕಿತು. ಕೂಲಿ ದರ ಏರಿತೆಂದು ಹುಟ್ಟುವಳಿಯ ಬೆಲೆಯೂ ಏರಿತು. ಅದರಿಂದಾಗಿ ಪದಾರ್ಥಗಳ

ಬೆಲೆ ಹಿಗ್ಗಿತು ಪ್ರಾಣದ ಬೆಲೆ ಕುಗ್ಗಿತು. ಹೀಗೆ ಒಂದಲ್ಲ ಎರಡಲ್ಲ ಅನೇಕ ಘಟನೆಗಳು ನಾಡಿನ ಆರ್ಥಿಕ ಜೀವನವನ್ನು ಹದಗೆಡಿಸಿ ಬಿಟ್ಟಿವೆ. ಇಂತಹ ಹದಗೆಟ್ಟ ಆರ್ಥಿಕ ಜೀವನವು ರಾಜಕೀಯ ಸ್ವಾತಂತ್ರ್ಯವು ಕಳೆಯೇರಿ ಕಂಗೊಳಿಸಲಿಕ್ಕೆ ತಕ್ಕುದಾದ ಭೂಮಿಕೆಯಾಗಲಾರದು. ಅನ್ನ, ಅರಿವೆ, ಆಸರ, ಅವುಷಧ, ಅರಿವು ಎಂಬ ಐದು ಅ ಗಳು ಮಾನವ ಕುಲಕ್ಕೆ ಬಿಡಲಾರದ ಅತ್ಯಗತ್ಯಗಳು. ಈ ಐದು ಅಗಳು ವ್ಯಕ್ತಿಯ ಕೈದುಂಗಳಾಗು ವಂತೆ ವ್ಯವಸ್ಥೆ ಇರಬೇಕು ಪ್ರಜಾರಾಜ್ಯದಲ್ಲಿ. ಇಲ್ಲವಾದರೆ ಆರ್ಥಿಕ ದುರವಸ್ಥೆ ಯಿಂದ ದಾವಾಗ್ನಿ ಬೆಳೆದು ಪ್ರಜ್ವಲಿಸಿ ಘಾತಮಾಡೀತು. ಯಾವ ಸರಕಾರವು ಹಣಕಾಸನ್ನು ಮತ್ತು ಅಧಿಕಾರವನ್ನು ಹಿತಮಿತವಾಗುವಂತೆ ಬಳಸುವದಿಲ್ಲವೋ ಅದು ಬಹುಕಾಲ ಬಾಳಲಾರದು. ಕುಲ-ಜಾತಿಗಳ ತಾರತಮ್ಯದಿಂದ ಹುಟ್ಟುವ ದ್ವೇಷಾಗ್ನಿಗಿಂತಲೂ ಆರ್ಥಿಕ ವೈಷಮ್ಯದಿಂದ ಹುಟ್ಟುವ ದಾವಾಗ್ನಿಯು ಬಲುಬೇಗ ಸಮಾಜವನ್ನು ಆವರಿಸುವದು. ಆದುದರಿಂದ ಆರ್ಥಿಕ ಸೌಕರ್ಯ, ಸಾಮಾಜಿಕ ಸಹೋದರತೆ ಇವೆರಡರ ಭದ್ರವಾದ ತಳಹದಿಯ ಮೇಲೆ ರಾಜಕೀಯ ಸ್ವಾತಂತ್ರ್ಯದ ಕಟ್ಟಡವನ್ನು ಕಟ್ಟುವಂತಹ ಹೊಣೆಯನ್ನು ಭಾರತೀಯರಾದ ನಾವು ಹೊರಬೇಕಾಗಿದೆ.

ಇಂದಿನ ಸಂದುಕಟ್ಟಿನ ಸಮಯದಲ್ಲಿ ಸ್ವಾರ್ಥತ್ಯಾಗ ಸೇವೆಗಳ ತಪೋ ಬಲದಿಂದ ಮಾನವರ ಹೃದಯಗಳಲ್ಲಿ ಉದಯಿಸುವ ಮಾನವತೆಯ ಸಾಕ್ಷಾ ತ್ಕಾರದ ಅವಶ್ಯಕತೆಯಿದೆ. ಅದಕ್ಕಾಗಿ ಸಹನೆ ಬೇಕು, ಸಹಿಷ್ಣುತೆ ಬೇಕು. ಅದಿಲ್ಲ ದಿದ್ದರೆ ಮಾನವನು ಮಾನವನೇ ಅಲ್ಲ. ಈ ತೆರನಾದ ಸಂಸ್ಕೃತಿಯು ಮಾನವನಲ್ಲಿ ಮೂಡಿಬರುವುದೇ ಹೊರತು ಉಪಮಾನವರಲ್ಲಿ ಪಶುಪಕ್ಷಿಗಳಲ್ಲಿ ಮೂಡದು. ಪ್ರಕೃತಿಯು ಮಾನವ ಉಪಮಾನವ ಪಶುಪಕ್ಷಿಗಳಲ್ಲಿ ಸಮಾನವಾಗಿ ಹಂಚಿ ಕೊಟ್ಟ ಸಹಜ ಪ್ರವೃತ್ತಿಗಳ ಬಲೆಗೀಗ ಮಾನವನು ತುತ್ತಾಗಹತ್ತಿದ್ದಾನೆ. ಆದರೆ ಈ ಸಹಜ ಪ್ರವೃತ್ತಿಗಳ ಕಾರ್ಯನಿರ್ವಹಣೆಯಲ್ಲಿ ಬಹು ವ್ಯತ್ಯಾಸವಿದೆ. ಪಶುಪಕ್ಷಿಗಳ ಜೀವನದಲ್ಲಿ ಪ್ರಕೃತ್ತಿಯ ಔಚಿತ್ಯ ಅನೌಚಿತ್ಯಗಳ ತಾರತಮ್ಯದ ಕಲ್ಪನೆಗೆ ಆಸ್ಪದವೀಯುವದಿಲ್ಲ. ಅವುಗಳ ಜೀವನವು ನಿಸರ್ಗನಿಯಮಿತ ವಾಗಿರುವುದೇನೋ ನಿಜ; ಅಂದರೆ ಪ್ರಕೃತಿವಶದಿಂದ ಅವು ಹುಟ್ಟುವವು, ಹೊಂದುವವು. ಅವು ಎಸಗುವ ಕಾರ್ಯಗಳಲ್ಲಿ ಸಾಮಾನ್ಯವಾಗಿ ಉದರ

ಪೋಷಣೆ ಸಂತತಿ ಸಂವರ್ಧನೆ ಇವೇ ಮುಖ್ಯವಾಗಿರುವವು. ಪಶುಪಕ್ಷ್ಯಾದಿ ಗಳಿಗೆ ಸಹಜ ಬುದ್ಧಿಯಿರುವುದಾದರೂ ಅವುಗಳಲ್ಲಿ ನೈತಿಕಭಾವನೆಯಿರು ವದಿಲ್ಲ. ಅವು ಮಾಡುವ ಕಾರ್ಯಗಳಲ್ಲಿ ಅವುಗಳಿಗೆ ಒಳಿತು ಕೆಡಕುಗಳ ಪಾಪ ಪುಣ್ಯಗಳ ಕಲ್ಪನೆಯೇ ಬರುವುದಿಲ್ಲ. ಒಂದು ಹೊಳೆಯು ಮಹಾಪೂರ ಬಂದು ತುಂಬಿ ಹರಿಯುತ್ತಿರುವಾಗ ಅದು ತನ್ನ ಸೆಳವಿನಲ್ಲಿ ಹೆಕ್ಕಿಕೊಂಡು ಹೋಗುವ ವಸ್ತುಗಳ ಗುಣಾವಗುಣಗಳನ್ನು ಲೆಕ್ಕಿಸದು. ಎಂಥ ಪಾಪಿಯೇ ಇರಲಿ, ಎಂಥ ಸತ್ಯವಂತ ಯೋಗಿಯೇ ಇರಲಿ, ತನ್ನ ಸೆಳವಿಗೆ ಸಿಕ್ಕಿದವರ ನ್ನೆಲ್ಲ ಅದು ಕೊಚ್ಚಿಕೊಂಡೊಯ್ಯುತ್ತದೆ. ಇಂತಹ ಕುರುಡು ದೃಷ್ಟಿಯು ಪಶು ಪಕ್ಷ್ಯಾದಿಗಳಲ್ಲಿ ಉಪಮಾನವರಲ್ಲಿ ವ್ಯಾಪಿಸಿರುತ್ತದೆ. ಮಾನವಲ್ಲಿ ಈ ಕುರುಡು ತನವಿರಕೂಡದು. ಲೇಸು ಹೊಲ್ಲಗಳ ಅರಿವು ಬಂದಾಗಲೆ ಮಾನವನು ಮಾನವನೆನಿಸಿಕೊಳ್ಳುವನು. ತಪ್ಪನ್ನು ಮಾಡುವದು ಮನುಷ್ಯನಿಗೆ ಸ್ವಾಭಾವಿಕ ವಾದರೂ ಮಾಡಿದ ತಪ್ಪನ್ನು ಒಪ್ಪಿಕೊಂಡು ಮತ್ತೆ ತಪ್ಪುಗಳಾಗದಂತೆ ನೋಡಿಕೊಳ್ಳುವುದೂ, ಘಟಿಸಿದ ಪಾಪಕ್ಕೆ ಪಶ್ಚಾತ್ತಾಪಬಟ್ಟು ಪುನಃ ಅಂತಹ ಪಾಪಕೃತಿಯು ಜರುಗದಂತೆ ಎಚ್ಚರ ತಾಳುವದೂ ವಿವೇಕ ಜಾಗ್ರತ ವಾದ ಜೀವನದ ಲಕ್ಷಣ. ಪಾಪಪುಣ್ಯಗಳ ಕಲ್ಪನೆಯಲ್ಲಿಯೂ ತಾರತಮ್ಯ ತಿಳಿವಳಿಕೆಯುಂಟೆಂಬುದನ್ನು ಬೇರೆ ಹೇಳ ಬೇಕಾದುದಿಲ್ಲ. ಪಾಪದ್ದಲ್ಲವೆಂದು ಭಾವಿಸಿದ ಒಂದು ಕೃತಿಯು ಜ್ಞಾನಿಯಾದ ಇನ್ನೊಬ್ಬನಿಗೆ ಪಾಪವೆಂದು ತೋರಬಹುದು. ಅವನು ಸಹ ಪುಣ್ಯವೆಂದು ಭಾವಿಸಿದ ಇನ್ನಾವುದೋ ಒಂದು ಕಾರ್ಯವು ಒಬ್ಬ ಯೋಗಿಗೆ ಪಾಪದ್ದಾಗಿ ಕಾಣಬಹುದು. ಸದಸದ್ವಿವೇಕ ಬುದ್ಧಿಯು (Moral Consciousness) ಮಾನವರಲ್ಲಿ ನಿಸರ್ಗದತ್ತವಾಗಿ ಹುದುಗಿಕೊಂಡಿದೆ. ಈ ಬುದ್ಧಿಯು ಜಾಗ್ರತವಾದ ಹೊರತು ಮಾನವನಲ್ಲಿ ಧರ್ಮ ಜೀವನದ ಬಗೆಗೆ ಇಲ್ಲವೆ ದೇವನ ಅಸ್ತಿತ್ವದ ಬಗೆಗೆ ನಂಬುಗೆಯುದಿಸದು. ಬೀಜರೂಪದಲ್ಲಿದ್ದ ಅದಕ್ಕೆ ನೀರನ್ನು ನೀಡಿ ಪೋಷಿಸಿ ಬೆಳೆಸಿಕೊಳ್ಳಲು ಮಾನವನಲ್ಲಿ ಶಕ್ತಿಯಿರುತ್ತದೆ. ಈ ಸಾಮರ್ಥ್ಯವೇ ಮಾನವನ ವೈಶಿಷ್ಟ್ಯವಾಗಿದೆ.

ಮನುಷ್ಯನಲ್ಲಿ ಅಹಂ ಪ್ರವೃತ್ತಿ ಮತ್ತು ಅಹ್ಯಹಂ ಪ್ರವೃತ್ತಿ ಎಂದು ಎರಡು ಪ್ರವೃತ್ತಿಗಳಿವೆ. ಅಹಂ ಪ್ರವೃತ್ತಿಯು ಭೌತಿಕ ಪ್ರಧಾನವಾದುದಾದರೆ

ಅಧ್ಯಹಂ ಪ್ರವೃತ್ತಿಯು ನೈತಿಕ ಪ್ರಘಾಸ್ನವಾದುದು. ಅಧ್ಯಹಂ ಪ್ರವೃತ್ತಿಯು ಪ್ರಬಲವಾಗಿರುವ ಮನುಷ್ಯನಲ್ಲಿ ಧರ್ಮಜೀವನ, ದೇವರ ಅಸ್ತಿತ್ವ ಇವುಗಳ ಕಲ್ಪನೆಯಿರುವದು. ಮಾನವನು ತನ್ನ ಸದಸದ್ವಿವೇಕ ಬಲದಿಂದ ಸಹಜ ಪ್ರವೃತ್ತಿಗಳಿಗೆ ಒಂದು ನಿರ್ಗಮನವನ್ನು ಯೋಜಿಸಿ ಅವುಗಳ ಔನ್ನತ್ಯವನ್ನು (Sublimation) ಪಡೆಯುತ್ತಾನೆ. ಈ ಯೊಜನೆಯೇ ಸಂಸ್ಕೃತಿಯೆನಿಸಿ ಕೊಳ್ಳುವದು.

ಸಂಸ್ಕೃತಿಯು ಬುದ್ಧಿಪೂರ್ವಕವಾಗಿ ಮಾನವನು ಮಾಡಿದ ಪ್ರಯತ್ನದ ಫಲ. ಮಾನವನು ತನ್ನ ಹಾಗು ಇನ್ನಿತರರ ಹಿತಕ್ಕಾಗಿ ಶ್ರೇಯಸ್ಸಿಗಾಗಿ ನಡೆವ, ನುಡಿವ, ಬಗೆವ, ಭಾವಿಸುವ, ಬದಲಿಸುವ ಕೃತಿಯು ಸಂಸ್ಕೃತಿ ಯೆನಿಸುವದು. ಈ ದೃಷ್ಟಿಯಿಂದ ನೋಡಿದರೆ ಧರ್ಮ ಸಾಹಿತ್ಯ ಕಲೆ ವಿಜ್ಞಾನ ತತ್ವಜ್ಞಾನ ಆಚಾರ ವಿಚಾರ ಆಹಾರ ವಿಹಾರ ವೇಷ ಭೂಷಣ ಆಮೋದ ಪ್ರಮೋದ — ಇವೆಲ್ಲ ಸಂಸ್ಕೃತಿಯಲ್ಲಿ ಸಮಾವೇಶವಾಗುವವು. ನಾವು ಕಣ್ಣರಳಿಸಿ ನಮ್ಮ ಸುತ್ತುಮುತ್ತಲಿನ ಘಟನೆಗಳ ಓಘದಲ್ಲಿ ಪರಿಸ್ಥಿತಿಯ ಒತ್ತಡದಲ್ಲಿ ಪ್ರಕಟವಾಗುವ ಕಾಲರಾಯನ ಕೈಚಳಕವನ್ನು ಅವಲೋಕಿಸಿದರೆ ಮಾನವ ಕೋಟಿಯೆಲ್ಲ ಮತಮತಾಂತರಗಳ ಜೇಲಿಯನ್ನು ದಾಟದ ಘಟಪಟನ್ಯಾಯಗಳ ಚಟುಲವಾದ ಪರಾಕ್ರಮವನ್ನು ಅತಿಗಳೆದ ಅತಿಶಯ ವಾದ ವಿಶಾಲವಾದ ನೀಳವಾದ ನಿರರ್ಗಳವಾದ ಸಾಂಸ್ಕೃತಿಯ ಕಡೆಗೆ ಧಾವಿಸುತ್ತಿದೆಯೆಂದು ಕಂಡು ಬಾರದಿರದು. ಇಂದು ಜಗತ್ತು ವೈದಿಕ ಸಂಸ್ಕೃತಿ ಬೌದ್ಧ ಸಂಸ್ಕೃತಿ ಶೈವ ಸಂಸ್ಕೃತಿ ವೀರಶೈವ ಸಂಸ್ಕೃತಿ ಭಾರತ ಸಂಸ್ಕೃತಿ ಗ್ರೀಕ ಸಂಸ್ಕೃತಿ ಮೂಡಣ ಸಂಸ್ಕೃತಿ ಪಡುವಣ ಸಂಸ್ಕೃತಿಯೆಂಬ ಸಂಸ್ಕೃತಿ ಭೇದಕ್ಕೆ ಕಾದು ನಿಂತಿರುವದಿಲ್ಲ. ಮಾನವ ಸಂಸ್ಕೃತಿಗಾಗಿ ಅದು ತವಕಿಸುತ್ತಿದೆ. ಉಳಿದೆಲ್ಲ ಸಂಸ್ಕೃತಿಗಳು ತಮ್ಮ ಸ್ವಯಾರ್ಜಿತ ಆಸ್ತಿಯನ್ನು ತಮ್ಮ ತಮ್ಮ ಸೊತ್ತನ್ನು ಬೇಕಾದರೆ ಈ ಮಾನವನ ಸಂಸ್ಕೃತಿಗೆ ದೇಣಿಗೆ ಯೆಂದು ನೀಡಲಿ. ಮುಂದಿನ ಸಂಸ್ಕೃತಿಯು ಮಾತ್ರ ಮಾನವ ಜನಾಂಗಕ್ಕೆ ಸಂಬಂಧ ಪಟ್ಟುದೇ ಹೊರತು ಯಾವುದೊಂದು ಪಕ್ಷ ಪಂಗಡ ಸಂಘ ಸಮಾಜ ಪ್ರಾಂತ ರಾಷ್ಟ್ರ ಇವುಗಳ ಸೊಮ್ಮಾಗಲಾರದು. ಸಾಗರವನ್ನಳೆ ಯುವದು ಅಸಾಧ್ಯವಾಗಿರುವಂತೆ ವಿಸ್ತೃತವಾದ ಸಂಸ್ಕೃತಿಯ ಆಳವನ್ನು

ಆಳತೆಗೆ ನಿಲ್ಲಿಸುವದು ಅಸಾಧ್ಯವಾದುದು. ಸಮುದ್ರದ ನೀರನ್ನು ತುಂಬಿ ಕೊಳ್ಳುವದು ಆವರವರ ಪಾತ್ರೆಯ ಗಾತ್ರವನ್ನು ಅವಲಂಬಿಸಿರುವದೇ ಹೊರತು ಸಮುದ್ರದ ನೀರಿನ ಪರಿಮಾಣವನ್ನಲ್ಲ. ಎಷ್ಟು ತುಂಬಿಕೊಂಡರೂ ನೀರು ಕಡಿಮೆಯಾಗದು. ಅದರಂತೆಯೇ ಮಾನವ ಸಂಸ್ಕೃತಿ. ಅದರಲ್ಲಿ ಗಮನಾರ್ಹವಾದುದನ್ನೆಲ್ಲ ಆಯ್ದುಕೊಳ್ಳಬೇಕು.

ಇಂತಹ ಮಾನವ ಸಂಸ್ಕೃತಿಯನ್ನು ಅನುಲಕ್ಷಿಸಿ ವ್ಯವಹರಿಸುತ್ತಿರುವಾಗ ಒಂದು ಸಮಾಜದ ಒಂದು ಪ್ರಾಂತದ ಒಂದು ರಾಷ್ಟ್ರದ ಸಂಸ್ಕೃತಿಯಲ್ಲಿ ಕಂಡು ಬರುವ ಗಮನಾರ್ಹವಾದ ಅಂಶಗಳನ್ನು ಅಲ್ಲಗಳೆಯಬಾರದು. ಆದರೆ ಈ ಅಂಶಗಳೇ ಸಂಸ್ಕೃತಿಯ ಸಾರಸಾರಸ್ವವೆಂದೂ ಹಟ ಹಿಡಿಯಬಾರದು. ಈ ಸಮನ್ವಯ ದೃಷ್ಟಿಯಿಂದ ಕರ್ನಾಟಕ ಪ್ರಾಂತದ, ಭಾರತ ರಾಷ್ಟ್ರದ ಹಾಗೂ ಅಂತರ್ ರಾಷ್ಟ್ರೀಯ ಅಂಶಗಳನ್ನು ಅನುಲಕ್ಷಿಸಬೇಕು. ಕರ್ನಾಟಕದವರಲ್ಲಿ ಸದ್ಗುಣಗಳು ಏನೇ ಇರಲಿ ಅವರಲ್ಲಿ ಕೆಲವು ದೋಷ ಮಾತ್ರ ಒಡೆದು ಕಾಣುತ್ತದೆ ತಮ್ಮದರ ಅಭಿಮಾನ, ವ್ಯಾವಹರಿಕ ಅನುಭವ, ದೀರ್ಘಸಾಹಸ, ತಪ್ಪನ್ನೊಪ್ಪಿಕೊಳ್ಳುವ ಪ್ರಾಂಜಲ ಬುದ್ಧಿ ಇವು ಮಿಕ್ಕಪ್ರಾಂತದವರಿಗಿಂತ ಕನ್ನಡಿಗರಲ್ಲಿ ಕೊಂಚ ಕಡಿಮೆಯೆಂದು ಹೇಳಬಹುದು. ಕರ್ನಾಟಕ ಪ್ರಾಂತಕ್ಕೊಂದು ನಿಶ್ಚಿತವಾದ ಸಾರ್ವಜನಿಕ ಜೀವನ, ಆ ಜೀವನಕ್ಕೊಂದು ಅನುಗುಣವಾದ ಧ್ಯೇಯ, ಆ ಧ್ಯೇಯ ಸಾಧನೆಗೆ ಯೋಗ್ಯವಾದ ಮುಂದಾಳುತನ ಇವು ಇಲ್ಲವಾಗಿವೆ. ಸದ್ಯಕ್ಕಿದ್ದ ಸ್ವಾರ್ಥ ಸಂಕುಚಿತವೃತ್ತಿ ಜಾತೀಯತೆಗಳು ಪ್ರಾಂತನಿರ್ಮಾಣಕ್ಕಾಗಿ, ಪರಿಸ್ಥಿತಿಯ ಸುಧಾರಣೆಗಾಗಿ ಬಲವಾದ ವಿಘ್ನಗಳಾಗಿ ನಿಂತಿವೆ. ಕರ್ನಾಟಕದ ಪರಂಪರೆಯಲ್ಲಿ ಅಚಲವಾದ ಶ್ರದ್ಧೆಯುಳ್ಳ, ಕನ್ನಡಿಗರ ಜ್ಞಾನ ಸಾಹಸಗಳಲ್ಲಿ ತುಂಬು ನಂಬಿಗೆಯುಳ್ಳ ಪ್ರತಿಯೊಬ್ಬ ಕನ್ನಡಿಗನೂ ಆಶಾವಾದಿಯಾಗಿ ಕಾರ್ಯಪ್ರವೃತ್ತನಾಗಬೇಕು. ಹಲವಾರು ವರುಷಗಳಿಂದ ಬುದ್ಧಿ ಭಾವಗಳ ಮೇಲೆ ಕನೆಗಟ್ಟಿದ ಧೂಳು ತೊಳೆದು ಹೋದ ಮೇಲೆ ಸ್ವಾರ್ಥಸಂಕುಚಿತ ವೃತ್ತಿ ಜಾತೀಯತೆಗಳ ಅಂಟುರೋಗವು ನಿವಾರಣೆಯಾಗಿ ಪರಿಸ್ಥಿತಿಯನ್ನು ಮೈಗೂಡಿಸಿಕೊಳ್ಳುವಷ್ಟು ಆರೋಗ್ಯವು ಬಲಗೊಳ್ಳುವದು. ಇದಕ್ಕಾಗಿ ತ್ಯಾಗವೀರರೂ, ಕ್ರಾಂತಿಕಾರರೂ ಉದಾರಹೃದಯಿಗಳೂ ಬೇಕಾಗಿದ್ದಾರೆ.

ಭಾರತದ ಚಿತ್ರವಾದರೂ ಇದರಂತೆಯೇ. ಮಹತ್ತರವಾದ ಅಪರಿಮಿತವಾದ

ಬೆಲೆ ತೆತ್ತು ಗಳಿಸಿದ ಸ್ವಾತಂತ್ರ್ಯವನ್ನುಳಿಸಿಕೊಳ್ಳುವ ಹೊಣೆ ಭಾರತೀಯರ ಮೇಲಿದೆ. ಸ್ವತಂತ್ರರಾದೆವೆಂಬ ಮಬ್ಬಿನಲ್ಲಿ ಮದಹೆಚ್ಚಿ ಮೈಮರೆದು ಮನಬಂದಂತೆ ವರ್ತಿಸಿದರೆ ಸ್ವಾತಂತ್ರ್ಯವು ನಿಲ್ಲದು. ಇಂದು ನಾವು ಅಂತರ್‌ರಾಷ್ಟ್ರೀಯ ಕ್ಷೇತ್ರದಲ್ಲಿ ಕಾಣುವದೇನನ್ನು? ಅದೇ ಸ್ವಾರ್ಥ ಸಂಕುಚಿತವೃತ್ತಿ ರಾಷ್ಟ್ರೀಯತೆಯ ದಾಹಗಳನ್ನಲ್ಲವೇ ? ವಿಜ್ಞಾನದ ಶೋಧಗಳ ಫಲವಾಗಿ ರಾಷ್ಟ್ರರಾಷ್ಟ್ರಗಳಲ್ಲಿಯ ಅಂತರವಳಿದು ಮಾನವತೆಯು ಒಂದು ಕುಟುಂಬವಾಗಿ ಪರಿಣಮಿಸಹತ್ತಿದರೆ ಕೌಟುಂಬಿಕ ಜೀವನಕ್ಕೆ ಅಗತ್ಯವಾದ ಸೌಹಾರ್ದ್ರ, ಸಹಕಾರ, ತ್ಯಾಗ, ಪ್ರೇಮಗಳು ಮಾನವದಲ್ಲಿ ಇನ್ನೂ ಮೈದೋರಲಿಲ್ಲ. ಇದರ ಪರಿಣಾಮವಾಗಿ ಯುದ್ಧಗಳು ಜರಗುವದು ತಪ್ಪಲಿಲ್ಲ. ಅಂತರ್‌ರಾಷ್ಟ್ರೀಯತೆಯು ಇನ್ನೂ ಬೌದ್ಧಿಕ ವಿವರಣೆಯಾಗಿರುವದೇ ಹೊರತು ಆಂತರಿಕ ಸತ್ವವಾಗಿಲ್ಲ. ಫ್ರಾನ್ಸಿನ ಮಹಾ ಕ್ರಾಂತಿಯ ಕಾಲಕ್ಕೆ ಉದ್ಘೋಷಿಸಿದ ಮಂತ್ರವು ತಂತ್ರವಾಗಿರದೆ ಇನ್ನೂ ಅತಂತ್ರವಾಗಿಯೇ ಇದೆ. ಈ ಮಂತ್ರವು ಕೇವಲ ಶ್ರುತಿಯಾಗಿದೆಯೇ ಹೊರತು ಕೃತಿಯಾಗಿ ಪರಿಣಮಿಸಿಲ್ಲ.

ಅಂತರ್ ರಾಷ್ಟ್ರೀಯ ಜನಕನೆಂದು ಕೀರ್ತಿವೆತ್ತ ಗ್ರೋಷಿಯಸ್‌ನು ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ತಾನು ಬರೆದ "ಯುದ್ಧ ಮತ್ತು ಶಾಂತಿಯ ವಿಧಾನ" (War and Peace) ಎಂಬ ಗ್ರಂಥದಲ್ಲಿ ಹೀಗೆ ಹೇಳಿರುವನು: "ಕ್ರೈಸ್ತಧರ್ಮದ ಅನುಯಾಯಿಗಳೆಂದು ಹೇಳಿಕೊಳ್ಳುವವರು ಯುದ್ಧದ ಸಮಯದಲ್ಲಿ ವರ್ತಿಸುವ ರೀತಿಯನ್ನು ನೋಡಿದರೆ ಎಂತಹ ಕಾಡ ಮನುಷ್ಯನೂ ಕೂಡ ನಾಚಿಕೊಳ್ಳುವಂತಿದೆ. ಸೌಹಾರ್ದ್ರದಿಂದಲೇ ಸರಿಪಡಿಸಿಕೊಳ್ಳಬಹುದಾದ ಕೇವಲ ಸಣ್ಣ ವಿಷಯಗಳಿಗೆಲ್ಲ ದೊಡ್ಡ ಯುದ್ಧ ಹೂಡುವದು ಪಾಶ್ಚಾತ್ಯ ರಾಷ್ಟ್ರಗಳಿಗೆ ವಾಡಿಕೆಯಾಗಿಬಿಟ್ಟಿದೆ. ಯುದ್ಧ ಪ್ರಾರಂಭವಾಯಿತೆಂದರೆ ರಾಷ್ಟ್ರಗಳೂ ದೇವರೂ ಜನರೂ ವಿಧಿಸಿದ ನೀತಿನಿಯಮಗಳೆಲ್ಲ ಗಾಳಿಯಲ್ಲಿ ತೂರಿಕೊಂಡು ಹೋಗುತ್ತಿವೆ. ಇದರಿಂಧ ಪ್ರಪಂಚದ ಸ್ಥಿತಿಯು ಭೀಕರವೂ ನರಕಪ್ರಾಯವೂ ಆಗಿ ಬಿಡುವದು; ಇದರಿಂದ ಯಾರಿಗೂ ಲಾಭವಿಲ್ಲ." ಗ್ರೋಷಿಯಸ್‌ನು ಅಂದು ವರ್ಣಿಸಿದ ಆ ಸ್ಥಿತಿಗಿಂತಲೂ ಎರಡುವರೆ ನೂರು ವರ್ಷಗಳ ತರುವಾಯ ಇಂದಿನ ಸ್ಥಿತಿಯು ಉತ್ತಮವಾಗಿದೆಯೇ ?

ಢೋಳು ನಗಾರಿಗಳ ಗೋಳು ಸಪ್ಪಳಕ್ಕೆ ಈಲಾದ ಕಿವಿಗಳಿಗೆ ನಕ್ಷತ್ರ ಗಾನದ ಕಿಂಕಿಣಿ ನಿನಾದವು ಅರೋಚಕವಾಗುವಂತೆ ಜಾತೀಯತೆ ಪ್ರಾಂತೀಯತೆ ರಾಷ್ಟ್ರೀಯತೆ ಅಂತರ್ ರಾಷ್ಟ್ರೀಯತೆ ಇವುಗಳ ರಣವಾದ್ಯಕ್ಕೆ ಶರಣು ಹೊಕ್ಕ ಹರಣಕ್ಕೆ ವ್ಯಕ್ತಿತ್ವದ ಮೃದು ಮಧುರ ಗಾನವು ಅರೋಚಕವೆನಿಸಿದರೆ ಅಚ್ಚರಿಬಡುವ ಕಾರಣವಿಲ್ಲ. ಇವುಗಳಿಗೆ ಮಾರುಹೋಗದೆ, ಇವುಗಳ ಬಣ್ಣ ಬಳಿದುಕೊಳ್ಳದೆ ನಿಜವಾದ ಮಾನವತೆಯು ನಿಜವಾದ ವ್ಯಕ್ತಿತ್ವವು ಅರಳುವಂತೆ ನೋಡಿಕೊಳ್ಳುವ ಹೊಣೆಯನ್ನು ಭಾರತವು ಹೊತ್ತುಕೊಳ್ಳಲಿ.

ಭಾರತದ ಶಕ್ತಿಯ ಗತವೈಭವದ ಸಮಗ್ರ ಸ್ವರೂಪವನ್ನು ನಿರುಕಿಸಿದರೆ ಆಧ್ಯಾತ್ಮಿಕತೆಯು ಅದರ ಹುಟ್ಟುಗುಣವಾಗಿಪ್ಪದು ಕಂಡು ಬರುವದು. ಅದರ ಈ ಆಧ್ಯಾತ್ಮಿಕ ಪ್ರವೃತ್ತಿಯು ಕಲೆಯಲ್ಲಿಯೂ ಸಾಹಿತ್ಯದಲ್ಲಿಯೂ ರಾಜಕಾರಣದಲ್ಲಿಯೂ ಒಡಮೂಡುವದು. ಹಾಗೆಯೇ ಇಂದಿನ ರಾಷ್ಟ್ರೀಯತೆಯಲ್ಲಿಯೂ ಆ ಅಧ್ಯಾತ್ಮಿಕ ಪ್ರವೃತ್ತಿಯು ಒಡಮೂಡಬೇಕು. ಅಧ್ಯಾತ್ಮವೆಂದರೆ ಕಣ್ಣಿಗೆ ಕಾಣುವ ಈ ಸೃಷ್ಟಿಯನ್ನು ಆತ್ಮನೊಬ್ಬನು ಒಳಹೊರಗೂ ವ್ಯಾಪಿಸಿರುವನು; ಅವನ ಶಕ್ತಿಯಿಂದಲೇ ಈ ಸೃಷ್ಟಿಯ ಸಕಲ ವ್ಯವಹಾರಗಳು ನಡೆದಿವೆಯೆಂದು ಬಗೆಯುವದು. ಅಲ್ಲದೆ ಆ ಶಕ್ತಿಯು ಕೇವಲ ಪ್ರೇಮಸ್ವರೂಪವುಳ್ಳದು. ಅದಕ್ಕಾಗಿ ನಿರ್ಮಲವಾದ ನಿರ್ಹೇತುಕವಾದ ನಿರ್ಭಯವಾದ ಪ್ರೇಮವೇ ಆ ಆತ್ಮಶಕ್ತಿ. (Love knows no fear; love knows no bargain and love is its own ideal ) ಇಂತಹ ಆತ್ಮಶಕ್ತಿಯ ಇಲ್ಲವೆ ಪ್ರೇಮದ ಮುಂದೆ ಅದೆಂತಹ ರಾಕ್ಷಸೀವೃತ್ತಿಯಾದರೂ ಮಣಿಯುವದೆಂದು ಭಾರತದ ಪೂರ್ವಜರು ನಿರ್ಣಯಿಸಿದ್ದಾರೆ. ಈ ಪ್ರೇಮವೇ ಎಲ್ಲ ಅನುಭಾವಿಗಳ ಆರಾಧ್ಯ ದೇವತೆಯಾಯಿತು. ಸಾಮಾನ್ಯವಾಗಿ ಅನುಭಾವಿಗಳು ಈ ಪ್ರೇಮವನ್ನು ವೈಯಕ್ತಿಕವಾಗಿ ಪೂಜಿಸಿ ಸಾಕ್ಷಾತ್ಕರಿಸುತ್ತಿದ್ದರು. ಪ್ರೇಮಸ್ವರೂಪವಾದ ಈ ಆತ್ಮಶಕ್ತಿಯು ಮೊದಲು ಬುದ್ಧನಲ್ಲಿ ಅಹಿಂಸೆಯ ರೂಪವನ್ನು ತಾಳಿತು. ಬುದ್ಧನಿಗಿಂತ ಮೊದಲು ಅಹಿಂಸೆಯು ಏಕಾಂತ ಧರ್ಮವಾಗಿ ಅಲ್ಲೊಬ್ಬ ಇಲ್ಲೊಬ್ಬ ವ್ಯಕ್ತಿಯಿಂದ ಆಚರಿಸಲ್ಪಡುತ್ತಿದ್ದಿತು. ಆದರೆ ಬುದ್ಧನು ಅದೇ ಅಹಿಂಸೆಯನ್ನು ಸಮಾಜ ಸೇವೆಗಾಗಿ ಮಾನವ ಕೋಟಿಯ ಕಲ್ಯಾಣಕ್ಕಾಗಿ ಬಳಸಿ ಏಕಾಂತ ಧರ್ಮವಾಗಿದ್ದ ಅದನ್ನು ಲೋಕಾಂತ ಧರ್ಮವಾಗಿ ಪರಿವರ್ತಿಸಿದನು. ಹೀಗೆ ಸಮಾಜ ಜೀವನದ

ಏಳ್ಗೆಗಾಗಿ ಅಹಿಂಸೆಯನ್ನು ಲೋಕಾಂತದಲ್ಲಿ ಬಳಸಿದ ಶ್ರೇಯಸ್ಸು ಬುದ್ಧನಿಗೆ ಸಲ್ಲುವದು. ಆ ತರುವಾಯ ಭಾರತದಲ್ಲಿ ಅಹಿಂಸೆಯನ್ನು ಲೋಕಾಂತ ಧರ್ಮವಾಗಿ ಬಳಸಿದವರು ಬಸವ—ಗಾಂಧೀಜಿಯವರು.

ಪ್ರೇಮಕ್ಕೆ ಪ್ರೇಮವೇ ಜೀವಾಳವೆಂಬುದನ್ನು ಅನೇಕ ಶತಮಾನಗಳಿಂದ ಭಾರತವು ತಿಳಿದುಕೊಳ್ಳುತ್ತ ಬಂದಿದೆ. ವೈಯಕ್ತಿಕ ಪ್ರೇಮ ಮತ್ತು ಅಹಿಂಸೆಯ ತತ್ವಗಳನ್ನು ಬುದ್ಧನು ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರ ಗಳಿಗೂ ಬಸವನು ಧಾರ್ಮಿಕ ಸಾಮಾಜಿಕ ಆರ್ಥಿಕ ಕ್ಷೇತ್ರಗಳಿಗೂ ಮತ್ತು ಗಾಂಧಿಜೀಯವರು ಧಾರ್ಮಿಕ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಿಗೂ ಅನ್ವಯಿಸಿದರು. ಅವರು ಏಕಾಂತ ಧರ್ಮವನ್ನು ಹೀಗೆ ಲೋಕಾಂತ ಧರ್ಮದಲ್ಲಿ ಪರಿವರ್ತಿಸಿದ ಗೂಢವನ್ನು ನಾವು ದೂರದೃಷ್ಟಿ ಯಿಂದ ಕಂಡು ಅದನ್ನು ಆಳವಾಗಿ ಅಭ್ಯಾಸಿಸಬೇಕು. ಯಾಕಂದರೆ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಸ್ವಾಸ್ಥ್ಯ ಸುಸ್ಥಿರತೆಗಳಿಗೆ ಪ್ರೇಮ ಅಹಿಂಸೆಗಳೇ ಭದ್ರವಾದ ಅಡಿಗಲ್ಲುಗಳು.

ಪಾಶ್ಚಿಮಾತ್ಯರಲ್ಲಿ ಅಹಿಂಸೆಯನ್ನು ಲೋಕಾಂತ ಧರ್ಮವಾಗಿ ಬಳಸಿ ದವರಲ್ಲಿ ಸಾಕ್ರೆಟಿಸ ಮತ್ತು ಕ್ರೈಸ್ತ ಇವರು ಎದ್ದು ಕಾಣಿಸುವರು. ಆ ತರುವಾಯ ಅಹಿಂಸೆಯನ್ನು ಲೋಕಾಂತ ಧರ್ಮವಾಗಿ ಆಚರಿಸಿದ ಅನು ಭಾವಿಗಳು ಅಲ್ಲೊಬ್ಬ ಇಲ್ಲೊಬ್ಬರಾಗಿ ದೊರೆಯುವದುಂಟು. ಅಲ್ಲಿ ರಾಜಕೀಯ ರಣದಲ್ಲಿ ಈ ಅಹಿಂಸೆಯನ್ನು ಬಳಸಿದ ಘನತೆ ಮ್ಯಾಝಿನಿ ಅವನಿಗೆ ಸಲ್ಲುವದು. ಆದರೆ ಅವನ ನೀತಿ ಬದ್ಧವಾದ ಅಹಿಂಸಾಪರ ತತ್ವಗಳು ಯುರೋಪದ ರಾಷ್ಟ್ರಗಳಿಗೆ ರುಚಿಸಲಿಲ್ಲ. ಕ್ರೈಸ್ತನ ಉದಾತ್ತ ತತ್ವಗಳನ್ನು ಯುರೋಪಕ್ಕೆ ಲೋಕಾಂತ ಧರ್ಮದ ಎರಕಿನಲ್ಲಿ ಹೊಯ್ದು ತಿಳಿಸಿದವನು ಟಾಲಸ್ಟಾಯ ಅವನು. ಯುರೋಪಕ್ಕೆ ಅವನ ಮಾತುಗಳೂ ರುಚಿಸಲಿಲ್ಲ. ಆದ್ದರಿಂದ ಅದು ಅವನ ಬೆನ್ನು ಹತ್ತದೆ ವರ್ಗಭೇದವನ್ನು ಸೂಚಿಸುವ ಹಿಂಸಾಪರ ತತ್ವಗಳನ್ನು ಬೋಧಿಸುವ ವರ್ಗವಾದಕ್ಕೆ ಹಣಿಕಿಹಾಕಿತು. ಮಾರ್ಕ್ಸನ ಈ ವರ್ಗವಾದವನ್ನು ಆಚರಣೆಯಲ್ಲಿ ತಂದವನು ಲೆನಿನ್.

ಐತಿಹಾಸಿಕ ಕಾಲದಿಂದ ಇಲ್ಲಿಯವರೆಗೆ ವರ್ಗಕಲಹವೇ ಸಮಾಜ ಜೀವನದಲ್ಲಿ ಕಂಡು ಬರುವವೆಂದೂ, ಒಂದು ವರ್ಗವು ಇನ್ನೊಂದು ವರ್ಗ ವನ್ನು ಸುಲಿಯುವದೇ ಅದರ ಧರ್ಮವೆಂದೂ, ಬಿಪ್ಪರ ಮಾರ್ಗಗಳಲ್ಲಿ ಕಂಡು

ಬರುವದು ದ್ವೇಷವೇ ಹೊರತು ಪ್ರೇಮವಲ್ಲವೆಂದೂ, ಒಂದು ವರ್ಗದ ಸುಲಿಗೆಯನ್ನು ಇನ್ನೊಂದರ ವರ್ಗವು ಬಲಾತ್ಕಾರದಿಂದ ಬಿಡಿಸಿಕೊಳ್ಳಬೇಕಾದುದರಿಂದ ಆ ದ್ವೇಷವೇ ಆಚರಣೆಯಲ್ಲಿ ಹಿಂಸೆಯಾಗಿ ಪರಿಣಮಿಸುವದೆಂದೂ ವರ್ಗವಾದಿಗಳಾದ ಲೆನಿನ್ ಮತ್ತು ಅವನ ಅನುಯಾಯಿಗಳು ವಾದಿಸುವರು. ಆದರೆ ದ್ವೇಷವು ದ್ವೇಷದಿಂದ ಆರುವದಿಲ್ಲ, ಪ್ರೇಮದಿಂದ ಅಳಿಯುವದು. ಪ್ರೇಮವು ಸಮಾಜ ಜೀವನದ ಆಸ್ತಿವಾರವು. ಸಮಾಜದ ಘಟಕಗಳನ್ನು ಅದರ ಬೇರೆ ಬೇರೆ ಅಂಗಗಳನ್ನು ಒಂದುಗೂಡಿಸುವದು ಪ್ರೇಮವೆಂದೂ, ಆಚರಣೆಯಲ್ಲಿ ಆ ಪ್ರೇಮವೇ ಅಹಿಂಸೆಯ ರೂಪು ತಾಳುವದೆಂದೂ ಭಾರತೀಯರು ಬಗೆಯುವರು. ಸುಮಾರು ೩೦ ವರ್ಷಗಳ ಹಿಂದೆ ರಶಿಯದ ಒಬ್ಬ ಸುಪ್ರಸಿದ್ಧ ಲೇಖಕನು "ಲೆನಿನ್ ಆ್ಯಂಡ್ ಗಾಂಧಿ" ಎಂಬ ಒಂದು ಗ್ರಂಥವನ್ನು ಬರೆದಿರುವನು. ಅದರಲ್ಲಿ ಅವನು ತಿಳಿಸುವ ಮಾತುಗಳಿವು: "ಸಮಾಜ ಜೀವನದಲ್ಲಿ ವರ್ಗಕಲಹವು ಕಂಡು ಬರುವದೆಂದು ಲೆನಿನ್‌ನು ಹೇಳಿದರೆ ಸಮಾಜ ಜೀವನದಲ್ಲಿ ಒಲವರವು ಇದೆ ಎಂದು ಗಾಂಧಿಯವರು ಸಾರುವರು. ವರ್ಗಕಲಹದಿಂದ ಹುಟ್ಟುವ ಸುಲಿಗೆ ಶೋಷಣೆಗಳನ್ನು ಅಳಿಯಲು ಸಾಮೂಹಿಕ ದ್ವೇಷವೇ ನಂಬಿದ ಶಸ್ತ್ರವೆಂದರಿತು ಲೆನಿನ್‌ನು ಹಿಂಸೆಯನ್ನು ಆಶ್ರಯಿಸಿದರೆ ಗಾಂಧಿಯವರು ಸಮಜ ಜೀವನದ ಐಕ್ಯತೆಗಾಗಿ ವಿಶ್ವಬಂಧುತ್ವಕ್ಕೆ ಮೊರೆಯಿಟ್ಟರು. ಲೆನಿನ್‌ನು ಹಿಂಸೆಯನ್ನು ಧರಿಸಿ ರಾಜಕೀಯ ಹೋರಾಟಕ್ಕೆ ಅದನ್ನು ಅನ್ವಯಿಸಿದರೆ ಗಾಂಧಿಯವರು ಅಹಿಂಸೆಯನ್ನು ಆಶ್ರಯಿಸಿ ಅದನ್ನು ರಾಜಕೀಯ ಹೋರಾಟಕ್ಕೆ ಅನ್ವಯಿಸಿದರು."

ಆರೈದು ನೋಡಿದರೆ ಲೆನಿನ್ ಗಾಂಧಿಜೀಯವರ ವಿಚಾರಸರಣಿಯು ಪಾಶ್ಚಿಮಾತ್ಯ ಪೌರ್ವಾತ್ಯರ ವಿಚಾರಸರಣಿಯನ್ನು ಅದೇಕೆ ಅವರವರ ಸಂಸ್ಕೃತಿ ಸಭ್ಯತೆಗಳನ್ನು ಪ್ರತಿಬಿಂಬಿಸುವದು. ಭಾರತೀಯರು ಈಗ ಸ್ವತಂತ್ರರಾದುದರಿಂದ ತಮ್ಮ ಸಂಸ್ಕೃತಿ ಸಭ್ಯತೆಗಳನ್ನು ರಾಷ್ಟ್ರಧರ್ಮದಲ್ಲಿ ವ್ಯಕ್ತಪಡಿಸಿ ವಿಶ್ವಬಂಧುತ್ವದ ತಳಹದಿಯ ಮೇಲೆ ರಚಿತವಾದ ರಾಷ್ಟ್ರಧರ್ಮವೇ ಅಂತರ್‌ರಾಷ್ಟ್ರೀಯ ಧರ್ಮವಾಗಿ ಪರಿಣಮಿಸಬಲ್ಲುದೆಂಬುದನ್ನು ತೋರಿಸಬೇಕಾಗಿದೆ. ಭಾರತೀಯರು ತಮ್ಮ ಮೇಲಿರುವ ಈ ಘನವಾದ ಹೊಣೆಯನ್ನರಿತು ಅಂತು ಕಾರ್ಯಪ್ರವೃತ್ತಿಯಾಗುವಂತಾಗಲಿ.

---

## ನವಕಲ್ಯಾಣಮಠದ ಪ್ರಕಟನೆಗಳು

### ಕನ್ನಡದಲ್ಲಿ

| | | |
|---|---|---|
| ೧ | ವೀರಶೈವ ದರ್ಶನ | ೩—೦—೦ |
| ೨ | ಕಾಲಪ್ರವಾಹ | ೧—೪—೦ |
| ೩ | ಮೀನಕಣ್ | ೨—೦—೦ |
| ೪ | ಅರುವತ್ತರ ಒಸಗೆ | ೧—೦—೦ |
| ೫ | ಅಣ್ಣನ ಸೊಳ್ನುಡಿ | ೦—೪—೦ |
| ೬ | ಶರಣರ ಶಿವಪ್ರಪಂಚ | ೦—೩—೦ |
| ೭ | ಲಿಂಗಪೂಜೆ | ೦—೩—೦ |
| ೮ | ಲಿಂಗಪೂಜೆ ಮತ್ತು ಇತರ ವಿಧಾನಗಳು | ೦—೬—೦ |

### ಇಂಗ್ಲಿಷದಲ್ಲಿ

| | | |
|---|---|---|
| ೯ | The Veerashaiva Weltanschauung (ಜಗತ್ತಿನ ಬಗೆಗೆ ವೀರಶೈವದ ದೃಷ್ಟಿಕೋನ) | ೦—೮—೦ |
| ೧೦ | Religion of Humanity (ಮಾನವ ಧರ್ಮ) | ೩—೦—೦ |
| ೧೧ | The Veerashaiva Philosophy and Mysticism (ವೀರಶೈವ ತತ್ವಜ್ಞಾನ ಮತ್ತು ಅನುಭವ) | ೫—೦—೦ |
| ೧೨ | A World Expectant (ಮುಂಬರುವ ಜಗತ್ತು) | ೬—೦—೦ |